# ಶ್ರೀ ಗುರುಗೋಪಾಲದಾಸರ
## ಪ್ರಮೇಯಭರಿತ ಗದ್ಯಗಳು

ಸಂಗ್ರಹಕಾರರು :
**ಗುರುಮಧ್ವರಾವ್ ಉಪ್ಪಲಿ**
**ಗುರುವಿಜಯದಾಸಾಶ್ರಮ**
ರಾಯಚೂರು

---

ಪ್ರಕಾಶಕರು :
**ಶ್ರೀರಂಗನಾಥ ಅಷ್ಟೋತ್ತರ ಸೇವಾ ಸಮಿತಿ**
ಯರಗೇರ, ರಾಯಚೂರು

# ಶ್ರೀ ಗುರುಗೋಪಾಲದಾಸರ ಪ್ರಮೇಯಭರಿತ ಗದ್ಯಗಳು

ಸಂಗ್ರಹಕಾರರು :
**ಗುರುಮಧ್ವರಾವ್ ಉಪ್ಪಲಿ**
**ಗುರುವಿಜಯದಾಸಾಶ್ರಮ**
ರಾಯಚೂರು

ಪ್ರಕಾಶಕರು :
**ಶ್ರೀರಂಗನಾಥ ಅಷ್ಟೋತ್ತರ ಸೇವಾ ಸಮಿತಿ**
ಯರಗೇರ, ರಾಯಚೂರು



ಮೊದಲ ಮುದ್ರಣ : **ಶ್ರೀ ಶೇಷದಾಸರ 125 ಆರಾಧನೆ, ಅಧಿಕ ಮಾಸ2010**

ಪುಟಗಳು : **xvi + 168**

ಪ್ರತಿಗಳು : **1000**

ಬೆಲೆ : **ರೂ. 35/– [ಮೂವತ್ತೈದು ರೂಪಾಯಿಗಳು]**

ಮುಖಪುಟ : **ವೇಣಿಸೋಮಪುರದಲ್ಲಿ ಶ್ರೀ ಶ್ರೀ ಶ್ರೀ ವ್ಯಾಸತತ್ವಜ್ಞ ತೀರ್ಥರಿಗೆ ಒಲಿದು ಬಂದ ಶ್ರೀವೇಣುಗೋಪಾಲಸ್ವಾಮಿ ಮತ್ತು ಅವರ ವಿಶೇಷ ಸೇವೆ ಮಾಡಿದ ಉತ್ತನೂರಿನ ಭಾಗಣ್ಣದಾಸರು ಹಾಗೂ ಅವರ ತಮ್ಮಂದಿರು**

ಮುದ್ರಣ
**ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.,**
ನಂ. 16/1, 2ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ
ಕಸ್ತೂರಿಬಾ ನಗರ, ಮೈಸೂರುರಸ್ತೆ
ಬೆಂಗಳೂರು–560 026
ದೂ: 080–26748811; ಮೊ : 9342864761

## ಗ್ರಂಥ ಸಮರ್ಪಣೆ :

ಶ್ರೀ ವಿಜಯರಾಯ ವಿಜಯತೆ

ಶ್ರೀ ವಿಜಯರಾಯರ ಕರುಣಾಕವಚದಡಿಯಲ್ಲಿ ನನ್ನ ಜೀವನದಲ್ಲಿ ನಾನು ನಂಬಿದ ನನ್ನನ್ನು ನಡೆಸುತ್ತಿರುವ ಶ್ರೀಗೋಪಾಲದಾಸರ ವಾಣಿ **"ಎನ್ನಿಂದಲೇನೇನು ಆಗೋಸಾಧನವೆಲ್ಲ ನಿನ್ನದೇ ವಿಜಯರಾಯ। ಎನ್ನ ಸಾಮರ್ಥ್ಯವೇನು ಜನ್ಮಜನ್ಮಾಂತರಕ್ಕೆ ನಿನ್ನ ಬಿಡೆನೊ ವಿಜಯರಾಯ॥"** ಅದರಂತೆ ಶ್ರೀಗುರುಗೋಪಾಲದಾಸರಾಯರ ಕೃತಿಗಳಾದ ಉಪಾಸನಾಕ್ರಮ–1, ಉಪಾಸನಾಕ್ರಮ–2 ಮತ್ತು ಸೃಷ್ಟಿಕ್ರಮ, ಈ ಮೂರೂ ಕೃತಿಗಳು ಮೋಡಿ ಲಿಪಿಯಲ್ಲಿದ್ದಾಗ ನಾನು ಬರೆಯಲುದ್ಯುಕ್ತನಾದಾಗ ಅದನ್ನು ತಿದ್ದಿ ಮುಂದುವರೆಯಲು ಪೂಜ್ಯ ಉಪ್ಪಲಿ ತಾತಾ ಅವರ ಆಶೀರ್ವಾದದ ಬಲವೇ ಕಾರಣ. **"ಉಪ್ಪಲಿ ತಾತಾ ಸಮವರ್ತಿ ನಾಂ। ಶ್ರೀಶೇಷದಾಸ ಆರಾಧನಾ ಪಟುಂ॥ ಹರಿದಾಸ ಸಾಹಿತ್ಯ ಪ್ರಚುರಣಾ ಪಟುಂ ಶ್ರೀ ಕಾಶೀದಾಸ ಗುರುಂಭಜೆ॥"** ಪ್ರಾತಃಸ್ಮರಣೀಯರಾದ ಶ್ರೀ ಕಾಶಿ ಹನುಮಂತದಾಸರು ಈ ಗ್ರಂಥವನ್ನು ಹರಿದಾಸ ವಾಙ್ಮಯದ ಎಲ್ಲಾ ಭಕ್ತಾದಿಗಳಿಗೆ ತಲುಪಿಸಬೇಕೆಂಬ ಹೆಬ್ಬಯಕೆ ಇವರದಾಗಿತ್ತು. ಈ ಕೃತಿಯು ಆಕೃತಿತಾಳುವುದರಲ್ಲಿ ಅವರು ವೈಕುಂಠವಾಸಿಗಳಾಗಿದ್ದಾರೆ. ಆದರೆ ಅವರ ಆಶಯವನ್ನು ಸಾಕಾರಗೊಳಿಸುವಲ್ಲಿ ಅವರ ಹಲವಾರು ಶಿಷ್ಯ ಸಮೂಹವು ಕಂಕಣಬದ್ಧರಾಗಿದ್ದುದು ಗುರುಗೋಪಾಲದಾಸರ ಅನುಗ್ರಹವೇ ಸರಿ. ಅದರ ಪ್ರಯತ್ನವೇ ಈ ಗ್ರಂಥ. ಅವರ ಅಂತರ್ಗತ ಶ್ರೀ ವಿಜಯವಿಠ್ಠಲನ ಪಾದಾರವಿಂದಕ್ಕೆ ಅರ್ಪಿತವು.

ವಿಜಯರಾಯರ ಪಾದಧೂಳಿ

**ಗೋವಣ್ಣ (ಗೋವರ್ಧನ) ಉತ್ತನೂರು**

ಶ್ರೀ ಉತ್ತನೂರು ಗುರುಗೋಪಾಲರಾಯರು ಸೃಷ್ಟಿ ಪ್ರಕರ್ಣ, ಭೂಗೋಳ ಖಗೋಳ ವರ್ಣನೆ, ಜೀವರ ವಿಚಾರ ಮೊದಲಾದವು ಅರ್ಥವಾಗುವಂತೆ ಓದುಗರಿಗೆ ಅನುಕೂಲವಾಗುವಂತೆ ರಚಿಸಿದ್ದಾರೆ. ಇದರ ಸಂಗ್ರಹದಲ್ಲಿ ಶ್ರೀ ಗೋವರ್ಧನ ಇವರ ಪರಿಶ್ರಮವು ವಿಶೇಷವಾಗಿದೆ.

**– ಗುರುಮಧ್ವರಾವ್ ಉಪ್ಪಲಿ**

## ಸಂಗ್ರಹಕಾರರ ಮಾತು

ಶ್ರೀ ಗುರುಗೋಪಾಲರಾಯರು ರಚಿಸಿದ ಅಪರೂಪದ ಮತ್ತು ವಿಶಿಷ್ಟವಾದ ಪ್ರಮೇಯಭರಿತ ಕೃತಿಗಳ ಸಂಗ್ರಹ ಗ್ರಂಥ ಸಾಧಕರ ಮುಂದಿಡಲು ಹರ್ಷವೆನಿಸುತ್ತದೆ. ಗದ್ಯ ರೂಪದಲ್ಲಿರುವ ಈ ಗ್ರಂಥದಲ್ಲಿ ಮುಖ್ಯವಾಗಿ ಸೃಷ್ಟಿ ಹಾಗೂ ಉಪಾಸನಾ ಕ್ರಮಗಳನ್ನು ಸಾಧಕರಿಗೆ ಅನುಕೂಲವಾಗಲೆಂದು ತಿಳಿಸಿದ್ದಾರೆ. ಭಗವಂತನ ಅನಂತ ಕಲ್ಯಾಣ ಗುಣಗಳಲ್ಲಿ ಸೃಷ್ಟ್ಯಾದಿ ಅಷ್ಟಕರ್ತೃತ್ವವು ವಿಶಿಷ್ಟವಾದವು. ಅವು ಯಾವುವೆಂದರೆ ಸೃಷ್ಟಿ, ಸ್ಥಿತಿ, ಲಯ, ಜ್ಞಾನ, ಅಜ್ಞಾನ. ಬಂಧ, ಮೋಕ್ಷ ಮತ್ತು ನಿಯಮನ. ಪರಬ್ರಹ್ಮನಾದ ವಿಷ್ಣುವು ಬ್ರಹ್ಮ ದೇವರಲ್ಲಿ ಬ್ರಹ್ಮರೂಪನಾಗಿ ಸೃಷ್ಟಿ ಕಾರ್ಯ ಮಾಡಿಸುತ್ತಾನೆ. ತಾನೇ ಸ್ವತಃ ಸ್ಥಿತಿ ಕಾರ್ಯ ಮಾಡುತ್ತಾನೆ ಮತ್ತು ಉಮಾಪತಿಯಾದ ರುದ್ರದೇವರಲ್ಲಿ ರುದ್ರದೇವನೆನಿಸಿಕೊಂಡು ಲಯವನ್ನು ತಾನೇ ಮಾಡುತ್ತಾನೆ. "ಸೃಷ್ಟಿ ಇಲ್ಲದಲೆ ಒತ್ತಟ್ಟಿಗಿದ್ದವರನ್ನು ಸೃಷ್ಟಿಸಿ ಜೀವರ ಸಲಹುವಿ" ಎಂಬ ಗುರುಶ್ರೀಶ ವಿಠ್ಠಲದಾಸರ ಉಕ್ತಿಯಂತೆ ಮಹಾಕರುಣಿಯಾದ ಆ ನಮ್ಮ ಸ್ವಾಮಿಯು ಪ್ರಳಯ ಕಾಲದಲ್ಲಿ ಜಲದಲಿ ಆಲದೆಲೆಯ ಮೇಲೆ ಮಲಗಿ ತನ್ನ ಹೆಬ್ಬೆರಳು ಚೀಪುತ್ತ ಇರುವಾಗ ಜಗನ್ಮಾತೆಯಾದ ಲಕ್ಷ್ಮೀದೇವಿಯು ಜೀವಿಗಳನ್ನು ಉದ್ಧಾರ ಮಾಡು ಎಂದು ಪ್ರಾರ್ಥಿಸಿ ಸೃಷ್ಟಿ ಮಾಡಲು ಕೋರುತ್ತಾಳೆ. ಈ ಎಲ್ಲ ವಿವರಗಳನ್ನು ಶ್ರೀ ಗುರುಗೋಪಾಲರಾಯರು ಗದ್ಯ ರೂಪವಾಗಿ ಸುಂದರವಾಗಿ ಬಿಂಬಿಸಿದ್ದಾರೆ.

ಪುರುಷ ಸೂಕ್ತದಲ್ಲಿ ಹೇಳಿದಂತೆ "ತ್ರಿಪಾದೂರ್ಧ್ವ ಉದೈತ್.... ಅತ್ಯರಿಚ್ಯತ ಪಶ್ಚಾದ್ ಭೂಮಿ ಮಥೋಪುರಃ." ಪುರುಷ ಶಬ್ದ ವಾಚ್ಯನಾದ ಭಗವಂತನು ಮೂರು ರೂಪಗಳಿಂದ ಬೆಳಗುತ್ತ ಅಂತರಯಾಮಿ ರೂಪದಿಂದ ಬ್ರಹ್ಮಾಂಡದ ಹೊರಗೆ ಹಾಗೂ ಒಳಗೆ ವ್ಯಾಪಿಸಿದ್ದಾನೆ. ಇದೇ ವಿರಾಟ ರೂಪವು. ಆ ಪುರುಷನಿಂದಲೇ ಬ್ರಹ್ಮಾಂಡ, ಬ್ರಹ್ಮಾಂಡದಿಂದ ಚತುರ್ಮುಖ ಬ್ರಹ್ಮ, ಬ್ರಹ್ಮನಿಂದ ರುದ್ರ ಹೀಗೆ ಜನಿಸಿದರು. ಶ್ರೀ ವಾದಿರಾಜರು ವಿರಾಟರೂಪ ಸ್ತೋತ್ರದಲ್ಲಿ ತಿಳಿಸಿದಂತೆ ಪುರುಷ ರೂಪ ಪರಮಾತ್ಮನ ಮುಖದಿಂದ ಬ್ರಾಹ್ಮಣ ಜಾತಿ (ಹಾಗೂ ಜಾತ್ಯಾಭಿಮಾನಿ ಬ್ರಹ್ಮ) ಬಾಹುವಿನಿಂದ ಕ್ಷತ್ರಿಯ (ಜಾತ್ಯಾಭಿಮಾನಿ ವಾಯು) ಊರುವಿನಿಂದ ವೈಶ್ಯ (ಜಾತ್ಯಾಭಿಮಾನಿ ನಾಸಿಕಾ ವಾಯು) ಹಾಗೂ ಪಾದದಿಂದ ಶೂದ್ರ (ಜಾತ್ಯಾಭಿಮಾನಿ ನಿಋತಿ) ಹುಟ್ಟಿದರು. ಮನಸ್ಸಿನಿಂದ ಚಂದ್ರ, ಕಣ್ಣಿನಿಂದ

ಸೂರ್ಯ ಮುಖದಿಂದ ಇಂದ್ರ, ಅಗ್ನಿ, ಪ್ರಾಣದಿಂದ ವಾಯು, ನಾಭಿಯಿಂದ ಅಂತರಿಕ್ಷ, ಶಿರಸ್ಸಿನಿಂದ ಸ್ವರ್ಗಾದಿ ಊರ್ಧ್ವ ಲೋಕಗಳು ಪಾದದಿಂದ ಅಧೋ ಲೋಕಗಳು ಸೃಷ್ಟಿಗೊಂಡವು. ಇವೇ ಸೂಕ್ಷ್ಮ ವಿಚಾರಗಳನ್ನು ನಾವು ದಾಸ ಸಾಹಿತ್ಯದಲ್ಲಿ ಅನೇಕ ಕೃತಿಗಳಲ್ಲಿ ಕಾಣುತ್ತೇವೆ.

ದುರ್ಗಾದೇವಿಯು ಪರಮಾತ್ಮನನ್ನು ಓಂಕಾರದಿಂದ ಸ್ತೋತ್ರ ಮಾಡಿ ಓಂಕಾರ ಸೃಷ್ಟಿಯಿಂದ ಸಕಲ ಮಂತ್ರಗಳು, ಅಜಾದಿ 51 ವರ್ಣಗಳು, ಪುರುಷ ಸೂಕ್ತವು ಸಕಲ ವೇದಗಳು ವ್ಯಾಪ್ತವಾದವು. ಇಂಥ ಸ್ತೋತ್ರಕ್ಕೆ ಮೆಚ್ಚಿ ಪರಮಾತ್ಮನು ಆತ್ಮಸೃಷ್ಟಿ ಮಾಡುತ್ತಾನೆ. ಬ್ರಹ್ಮದೇವರು ಪದ್ಮಕಲ್ಪದಲ್ಲಿ ಮತ್ತು ಶ್ವೇತ ವರಾಹ ಕಲ್ಪದಲ್ಲಿ ಮಾಡಿದ ಸೃಷ್ಟಿ ಇತ್ಯಾದಿಗಳು ಸಾಧಕನ ಚಿಂತನೆಗೆ ಅವಶ್ಯವಾದ ವಿಷಯಗಳು ಈ ಗ್ರಂಥದಲ್ಲಿ ಅಡಗಿವೆ.

ಸೃಷ್ಟಿ ಪ್ರಕರಣವು ಎಂಬುದು ಒಂದು ಕಬ್ಬಿಣದ ಕಡಲೆ ಇದ್ದ ಹಾಗೆ. ಘನ ಪಂಡಿತರಿಗೂ ಸರಿಂಯಾಗಿ ಅರ್ಥೈಸಲು ಕಷ್ಟಕರ. ಅದನ್ನು ಶ್ರೀ ಗುರುಗೋಪಾಲರಾಯರು ಆಡುಭಾಷೆಯಲ್ಲಿ ಸರಳವಾಗಿ ವಿಶದೀಕರಿಸಿದ್ದಾರೆ. ಸೃಷ್ಟಿಗೆ ಬಂದ ಜೀವರು ಏನು ಮಾಡಬೇಕು? ಅದೇ ಉಪಾಸನಾ. ಲಕ್ಷ್ಮೀದೇವಿಯ ಪ್ರಾರ್ಥನೆ ಮೇರೆಗೆ ಪರಬ್ರಹ್ಮನಾದ ಆ ಸ್ವಾಮಿಯು ತನ್ನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನ ಸೃಷ್ಟಿ ಮಾಡಿದ ಮೇಲೆ ಚತುರ್ಮುಖಬ್ರಹ್ಮನು ಮುಂದೇನು ಎಂದು ಯೋಚಿಸುತ್ತಿರುವಾಗ "ತಪ ತಪ" ಎಂಬ ಶಬ್ದ ಕಿವಿಗೆ ಬಿದ್ದು ತಪವನ್ನು ಮಾಡಲುದ್ಯುಕ್ತನಾಗುತ್ತಾನೆ. ಇದೇ ಉಪಾಸನಾ "ಸರ್ವಜೀವರು ಸ್ವರೂಪೋದ್ಧಾರಕ್ಕಾಗಿ ಮಾಡುವದೇ ಉಪಾಸನಾ" ಇದರ ಕ್ರಮ ಏನು ಭಗವಂತನ ಚಿಂತನೆಯ ಕ್ರಮ ಇತ್ಯಾದಿಗಳನ್ನು ಶ್ರೀ ಗುರುಗೋಪಾಲರಾಯರು ತಿಳಿಸಿದ್ದಾರೆ. ಇಡಾ, ಪಿಂಗಳ, ಸುಷುಮ್ನಾ ನಾಡಿಗಳ ಸಂಧಿ ಸ್ಥಳವೇ ತ್ರಿವೇಣಿ ಸಂಗಮ ಎಂದು ತಿಳಿದು ಮಾನಸಿಕವಾಗಿ ಅದರಲ್ಲಿ ಮುಳುಗುವದೇ ಮಾನಸಿಕ ಸ್ನಾನವೆನಿಸುತ್ತದೆ. ಸ್ನಾನದ ನಂತರ ಏಕಾಗ್ರಚಿತ್ತನಾಗಿ ತನ್ನ ದೇಹದಲ್ಲಿರುವ ಭಗವದ್ರೂಪಗಳನ್ನು ಧೇನಿಸಿ ಲಿಂಗಬದ್ಧನಾದ ಜೀವನಿಗೆ ಲಿಂಗದೇಹದ ಮೇಲೆ 10 ವಿಧ (ಅನ್ನಮಯ, ಪ್ರಾಣಮಯ ಇತ್ಯಾದಿ) ಕವಚಗಳನ್ನು ತಿಳಿಯಬೇಕು. ಸಪ್ತಧಾತುಗಳಿಂದ ಕೂಡಿದ ಈ ಸ್ಥೂಲದೇಹದಲ್ಲಿ ತ್ವಕು ಇತ್ಯಾದಿಗಳಲ್ಲಿ ಭಗವದ್ರೂಪವನ್ನು ಚಿಂತಿಸುವ ಕ್ರಮಗಳನ್ನು ಶ್ರೀ ಗುರುಗೋಪಾಲದಾಸರು ತಿಳಿಸಿದ್ದಾರೆ. ಪಂಚಕೋಶಗಳ ವಿವರ, ಮಾತೃಕಾನ್ಯಾಸ ವಿದ್ಯಾ, ಪ್ರಾಣಾಗ್ನಿ ವಿದ್ಯಾ, ನಾಡಿ ವಿದ್ಯಾ, ದೇಹದ ವಿವಿಧ ಭಾಗಗಳಲ್ಲಿರುವ ಪದ್ಮಗಳ ವಿದ್ಯಾ, ಮಧು ವಿದ್ಯಾ ಸ್ಥೂಲ ಹೃದಯ ಕಮಲದಲ್ಲಿರುವ ಸ್ಥೂಲ ಬಿಂಬೋಪಾಸನ ಇತ್ಯಾದಿಗಳನ್ನು ಜೀವರು ಮಾಡತಕ್ಕ ಉಪಾಸನ ಕ್ರಮದಲ್ಲಿ ತಿಳಿಸಿದ್ದಾರೆ. ದೇವರ, ಲಕ್ಷ್ಮೀದೇವಿಯರ, ಜೀವರ, ಸ್ವರೂಪ ದೇಹದ ವಿವರಗಳನ್ನು ಸವಿವರವಾಗಿ

ಚಿತ್ರಿಸಿದ್ದಾರೆ. ವನೋಪಾಸನ, ಜಲೋಪಾಸನ, ಇತ್ಯಾದಿ "ವಿಧವಾದ ಉಪಾಸನಾಕ್ರಮಗಳನ್ನು ದೀರ್ಘವಾಗಿ ತಿಳಿಸಿದ್ದಾರೆ. ಇದಲ್ಲದೆ ಇನ್ನೂ ಅನೇಕ ವಿಚಾರಗಳನ್ನು ಸ್ಪಷ್ಟೀಕರಿಸಿದ್ದಾರೆ. ತಾರತಮ್ಯದಲ್ಲಿ 14 ವಿಧ ತಾರತಮ್ಯಗಳಿವೆ (ಅಂಶ, ಆನಂತ, ಬಲ, ಜ್ಞಾನ, ದೇಶ, ಕಾಲ ಅಪರೋಕ್ಷ, ಲಯ, ಸೃಷ್ಟಿ, ಪದವಿ, ಆವೇಶ, ಗುಣ, ಲಕ್ಷಣ ಮತ್ತು ಶಾಂತಿ.) ಅವುಗಳ ವಿಚಾರವನ್ನು ಈ ಗ್ರಂಥದಲ್ಲಿ ನೋಡಬಹುದು.

ಭೂಗೋಳ ವಿಸ್ತಾರ ಮಾಡುತ್ತ ಪ್ರಕೃತ ಗ್ರಂಥ ಅವಲೋಕನದಿಂದ ಆಗಬಹುದಾದ ಫಲಸ್ತುತಿಯಂತೆ ಭಗವಂತನ ತ್ರಿಧಾಮಗಳಾದ ಶ್ವೇತದ್ವೀಪ, ಅನಂತಾಸನ, ವೈಕುಂಠ ಇತ್ಯಾದಿಗಳ ವರ್ಣನೆಯು ಕಾಣಸಿಗುತ್ತದೆ. ಶ್ರೀಗುರುಗೋಪಾಲದಾಸಾರ್ಯರ ಉಪಕಾರ ಅವಿಸ್ಮರಣೀಯ ಹಾಗೂ ಅನುಪಮೇಯ. ಆದ್ದರಿಂದಲೇ ಸಕಲ ಸಾಧಕರು ಸಂಗ್ರಹಿಸಲೇಬೇಕಾದ ಗ್ರಂಥ ಇದಾಗಿದೆ.

**ಗುರುಗೋಪಾಲದಾಸರು** : ಮೊಸರುಕಲ್ಲು ಗ್ರಾಮದ ಮುರಾರಿರಾಯ ಹಾಗೂ ವೆಂಕಮ್ಮ ಎಂಬ ಮಹಾ ಸಾತ್ವಿಕ ದಂಪತಿಗಳಿಗೆ 4 ಜನ ಮಕ್ಕಳು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ 4 ಪುರುಷಾರ್ಥದ ಪ್ರತೀಕರೋ ಅಥವಾ ಧರ್ಮಕ್ಕೆ 4 ಕಾಲುಗಳಿದ್ದಂತೆ ಅವರು ಎಂಬಂತೆ 4 ಜನ ಅಪರೋಕ್ಷಿಗಳನ್ನು ಹೆತ್ತ ವೆಂಕಮ್ಮ ಹಾಗೂ ಮುರಾರಿರಾಯರು ಆರ್ಥಿಕ ಸಂಪತ್ತು ಸದೃಢವಾಗಿರದಿದ್ದರೂ ಆಧ್ಯಾತ್ಮಿಕ ಸಂಪತ್ತು ತುಂಬಿತುಳುಕುತ್ತಿತ್ತು. ಮೊದಲನೆಯವನು ಭಕ್ತಾಗ್ರೇಸರ, ವಿಜಯರಾಯರ ಮುಖ್ಯ ಪ್ರತಿಮಾ ಹಾಗೂ ಪುಣ್ಯದ ಪುತ್ರರಾದ ಭಾಗಣ್ಣ, ಎರಡನೆಯವರು ಶೀನಪ್ಪ, ಮೂರನೆಯವನು ವರದಪ್ಪ ಹಾಗೂ 4ನೆಯವನು ರಂಗಪ್ಪ. ಇವರೇ ಮುಂದೆ ಗೋಪಾಲದಾಸರು. ಗುರುಗೋಪಾಲದಾಸರು, ವರದ ಗೋಪಾಲದಾಸರು ಹಾಗೂ ತಂದೆ ಗೋಪಾಲದಾಸರೆಂದು ಖ್ಯಾತಿ ಹೊಂದಿದರು. ಗುರುಗೋಪಾಲದಾಸರು ಅನೇಕ ಕೃತಿಗಳನ್ನು ರಚಿಸಿದ್ದೆಂದು ತಿಳಿದು ಬರುತ್ತದೆ. ಗೋಪಾಲದಾಸರ ತಮ್ಮಂದಿರು ತಮ್ಮ ಅಣ್ಣನಲ್ಲಿ ವಿಶೇಷ ಭಕ್ತಿ ಮಾಡುತ್ತಿದ್ದರು. ಶ್ರೀ ಗೋಪಾಲದಾಸರು ಇಹಲೋಕದ ಯಾತ್ರ ಮಾಡಿದ ಮೇಲೆ ಇವರು ಗುರುವರ್ಯ ವೆಂಕಟರಾಮಾಚಾರ್ಯರ (ಐಜಿ ಸ್ವಾಮಿಗಳು) ಬಳಿಯೇ ಹೆಚ್ಚಾಗಿ ಇರುತ್ತಿದ್ದರೆಂದು ಬಲ್ಲವರು ತಿಳಿಸಿದ್ದಾರೆ. ಈ ಮೂವರು ಯಾವಾಗ ಇಹಲೋಕ ಯಾತ್ರೆ ಮಾಡಿದರು ಎಂಬುದರ ಬಗ್ಗೆ ಖಚಿತ ಮಾಹಿತಿ ಇಲ್ಲ.

ಶ್ರೀಗುರುಗೋಪಾಲದಾಸರ ಕೃತಿಗಳು ಪ್ರಮೇಯ ಪುಂಜವಾಗಿವೆ ಮತ್ತು ದೀರ್ಘ ಕೃತಿಗಳು ಇವಾಗಿವೆ. ಉದರ ಶೂಲಿಯ ಉಪಶಮನ ಕುರಿತು

ಚಂದ್ರಾಂತರ್ಗತ ಗುರುಗೋಪಾಲವಿಠಲಾಭಿನ್ನ ವಿಜಯ ವಿಠ್ಠಲರಾಯನ ಸ್ತೋತ್ರವು ಬಹು ಅರ್ಥಗರ್ಭಿತವಾಗಿದೆ. ಇನ್ನೊಂದೆಡೆ ವಾಯುದೇವರ ತೃತೀಯಾವತಾರವಾದ ಮಧ್ವರಾಯರನ್ನು ವ್ಯಂಗ್ಯವಾಗಿ ಮಾಡಿದ ಸ್ತೋತ್ರ "ಯತಿಯು ನೀನಾದದ್ದು ಕ್ಷಿತಿಯೊಳು ನಾ ಬಲ್ಲೆ" ಕೂಡ ಭಕ್ತಿ ಭರಿತವಾಗಿದೆ.

ಶ್ರೀಶೇಷದಾಸರಿಗೂ ಹಾಗೂ ಶ್ರೀಗುರುಗೋಪಾಲರಾಯರಿಗೂ ಯಾವ ನೆಂಟು ಎಂಬುದು ತಿಳಿಯಲಸಾಧ್ಯವಾದರೂ ಶ್ರೀ ಶೇಷದಾಸರೂ ತಮ್ಮ ಪ್ರತಿ ಪತ್ರದಲ್ಲೂ 'ಶ್ರೀಗುರುಗೋಪಾಲರಾಯ ಪ್ರಸೀದ' ಎಂದು ಪ್ರಾರಂಭ ಮಾಡುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಗ್ರಂಥವನ್ನು ಸಂಗ್ರಹಿಸಿ ಓದುಗರಿಗೆ ಯರಗೇರಿಯಲ್ಲಿ ನಡೆಯುವ ಶ್ರೀ ಶೇಷದಾಸರ 125ನೇ (ಅಧಿಕ, ವೈಶಾಖ ಏಪ್ರಿಲ್ 21, 22, 2010) ಆರಾಧನೆಯಲ್ಲಿ ಬಿಡುಗಡೆ ಮಾಡುತ್ತಿರುವದು ವಿಶೇಷವಾದದ್ದು.

ಈ ಗ್ರಂಥದ ಪ್ರಕಾಶನದಲ್ಲಿ ನಮಗೆ ಆತ್ಮೀಯರೂ ಹಾಗೂ ಎಲ್ಲಾ ಕಾರ್ಯಗಳಿಗೂ ಬೆನ್ನೆಲುಬಾಗಿದ್ದ ಶ್ರೀ ಕಾಶಿ ಹನುಮಂತದಾಸರನ್ನೂ ಇಲ್ಲಿ ಸ್ಮರಿಸುವುದು ನನ್ನ ಕರ್ತವ್ಯ. ಈ ಗ್ರಂಥವನ್ನು ಡಿಟಿಪಿ ಮಾಡಲು ವಿಶೇಷ ಸಹಾಯ ಮಾಡಿದ ಶ್ರೀ ಗೋವರ್ದನ್ ಪಟವಾರಿ ಇವರಿಗೆ ಭಗವಂತನ ವಿಶೇಷ ಅನುಗ್ರಹವಾಗಲಿ ಎಂದು ಪ್ರಾರ್ಥನೆ. ಗ್ರಂಥ ಪ್ರಕಾಶನದಲ್ಲಿ ವಿಶೇಷಾಸಕ್ತಿ ವಹಿಸಿದ ಶ್ರೀ ಎಂ.ಕೆ. ವಿಜಯೀಂದ್ರ, ಶ್ರೀ ಸೇತುರಾವ್, ಶ್ರೀ ಕೃಷ್ಣ, ಅನಂತ ಕೊಳ್ಳಿ, ಗುರುರಾಜರಾವ್ ಇವರಿಗೆ ಹಾಗೂ ಪ್ರಕಾಶನಕ್ಕೆ ಧನ ಸಹಾಯ ಮಾಡಿದ ಶ್ರೀ ಜಿ.ಬಿ. ಕುಲಕರ್ಣಿ, ಶ್ರೀ ವಿಜಯರಾವ್ ಕುಲಕರ್ಣಿ, ಶ್ರೀ ಅಶೋಕ್ ಕುಲಕರ್ಣಿ ಹಾಗೂ ರಮಾಕಾಂತ ಕುಲಕರ್ಣಿ ಅವರಿಗೆ, ಶ್ರೀ ಗುರುಗೋಪಾಲಾಂತರ್ಗತ ಶ್ರೀರಾಮನು ಆಯುರಾರೋಗ್ಯ ಐಶ್ವರ್ಯ ಕರುಣಿಸಲೆಂದು ಪ್ರಾರ್ಥನೆ. ಸದ್ಭಕ್ತರಿಗೆ ಈ ಗ್ರಂಥದ ಉಪಯೋಗವಾದಲ್ಲಿ ಎಲ್ಲರ ಪರಿಶ್ರಮವು ಸಾರ್ಥದಾಯಕ ಎಂದು ನನ್ನ ಅನಿಸಿಕೆ.

**ಚಿಂತಿಸು ಈ ಪರಿ ಮನದಲ್ಲಿ ಸೃಷ್ಟಿಯ**
**ಸಂತತ ವಿಜಯ ವಿಠ್ಠಲ ಮಾಡುವನೆಂದು॥**

ಶ್ರೀರಾಮನವಮಿ
24.03.2010

**ಗುರುಮಧ್ವರಾವ್ ಉಪ್ಪಲಿ**

# ಕೃತಜ್ಞತೆಗಳು

ಶ್ರೀಹರಿ, ವಾಯು, ಗುರುಗಳ ಸ್ಮರಣೆ, ದಾಸರಾಯರ ಆರಾಧನೆ ಮಾಡುವುದೇ ಸಾಧನೆ. ಶ್ರೀಶೇಷದಾಸರ ಆರಾಧನೆ ಪಂಢರಾಪುರ, ತಿರುಪತಿ, ಉಡುಪಿ, ಮಂತ್ರಾಲಯ, ಮಳಖೇಡ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ಈವರೆಗೂ ಪೂಜ್ಯ ಶ್ರೀಗುರುಮಧ್ವರಾಮ ಉಪ್ಪಲಿ ನೇತೃತ್ವದಲ್ಲಿ ನಡೆದಂತೆ, ಈ ವರ್ಷ ಅಧಿಕ ವೈಶಾಖ ಶು॥ ಅಷ್ಟಮಿಯಂದು ಶೇಷದಾಸರ ಆರಾಧನೆ ನಮ್ಮ ಚಿಕ್ಕಗ್ರಾಮ, ಯರಗೇರಿ, ಶ್ರೀರಂಗನಾಥ ಸನ್ನಿಧಿಯಲ್ಲಿ ಪೂಜ್ಯ ತಾತಾ ಅವರು ಇಲ್ಲಿ ಮಾಡುವ ಸಂಕಲ್ಪ ತಿಳಿದು ಅತ್ಯಂತ ಸಂತೋಷವೆನಿಸಿತು. ಶ್ರೀದಾಸವರೇಣ್ಯರ ಸೇವಾ ಅವಕಾಶ ಕಲ್ಪಿಸಿ ಕೊಟ್ಟದ್ದಕ್ಕಾಗಿ, ಪೂಜ್ಯ ಶ್ರೀ ಗುರುಮಧ್ವರಾವಉಪ್ಪಲಿ ತಾತಾ ಅವರಿಗೆ ನಮ್ಮ ಕೃತಜ್ಞತಾ ಪೂರ್ವಕ ಅನಂತ ಪ್ರಣಾಮಗಳು.

ಈ ಆರಾಧನಾ ಸ್ಮರಣಾರ್ಥ ಗ್ರಂಥವೊಂದನ್ನು ಪ್ರಕಾಶನಗೊಳಿಸುವ ವಿಚಾರ ಸುಳಿದಾಗ, ಭಕ್ತರು ಸ್ವಯಂ ಪ್ರೇರಣೆಯಿಂದ ಪ್ರಕಟಣೆಗೆ ಸಹಾಯ ದೇಣಿಗೆ ನೀಡಲು ಮುಂದಾದರು. ಇದರ ಮುದ್ರಣಕಾರ್ಯದ ಹೊಣೆಗಾರಿಕೆ ಹಾಗೂ ಈ ಕಾರ್ಯ ನಿಭಾಯಿಸಲು ನಮ್ಮ ಮಿತ್ರರಾದ ಶ್ರೀ ಎಸ್.ಆರ್. ಕಟ್ಟಿಯವರು ಒಪ್ಪಿ, ಅದನ್ನು ಚೆನ್ನಾಗಿ ಸೇವೆ ಸಲ್ಲಿಸಿದ್ದಾರೆ. ಈ ಹೊತ್ತಿಗೆಯನ್ನು ಸುಂದರವಾಗಿ ಮುದ್ರಣ ಮಾಡಿಕೊಟ್ಟ, ಪ್ರೆಸ್ಸಿನ ಕಾರ್ಯಕರ್ತರಿಗೆ, ಶ್ರೀ ರಂಗನಾಥ ಸೇವಾ ಸಮಿತಿಯಿಂದ ಅನಂತ ಕೃತಜ್ಞತಾ ನಮನಗಳು.

ಶ್ರೀ ಶೇಷದಾಸರ ಆರಾಧನೆ ಯರಗೇರಾ ಗ್ರಾಮದಲ್ಲಿ ನಡೆಯುವಂತೆ, ಆಗಲು ಶ್ರೀಗುರು ವಿಜಯ ವಿಠ್ಠಲನ ದಾಸ, ದಾಸ, ದಾಸರ ಭಕ್ತರು ತಾವಾಗಿಯೇ ಮುಂದೆ ಬಂದು ತನು, ಮನ, ಧನದಿಂದ ಸೇವೆ ಸಲ್ಲಿಸಿದ್ದಾರೆ. ಇದೂ ಅಲ್ಲದೆ ಅನೇಕ ಪಂಡಿತರು, ಪ್ರವಚನಕಾರರು, ಭಗವದ್ಭಕ್ತರು, ಭಜನಾ ಮಂಡಳಿಯವರು ಈ ಆರಾಧನೆಗೆ ಆಗಮಿಸಿ, ಸಲ್ಲಿಸಿದ ಸೇವೆ ಹಾಗೂ ಆರಾಧನೆ ಯಶಸ್ವಿಗೊಳಿಸಲು ಶ್ರಮಿಸಿದ ಆ ಎಲ್ಲ ಭಕ್ತರಿಗೂ, ನಮ್ಮ ವಂದನೆಗಳು.

**ಕಿಶನರಾವ ಜಾಲಿಹಾಳ**
ಶ್ರೀ ಶೇಷದಾಸರ ಆರಾಧನ ಸಮಿತಿ
ಯರಗೇರ



ಶ್ರೀ ಲಕ್ಷ್ಮೀ ರಂಗನಾಥ, ಯರಗೇರಾ

ಶ್ರೀವಿಜಯವಿಠ್ಠಲಪ್ರಸನ್ನ.
ಶ್ರೀವಿಜಯರಾಯ ವಿಜಯತೆ.
ಶ್ರೀಗಣಪತಿಅಂಶಸಂಭೂತರು, ಜಾತಾಪರೋಕ್ಷಿಗಳಾದ,
ಭಾಗಣ್ಣದಾಸಾರ್ಯರ ಅನುಜರಾದ
ಶ್ರೀಗುರುಗೋಪಾಲದಾಸಾರ್ಯರಿಂದ ನಿರೂಪಿಸಲಾದ

# ಅಧಃಸೃಷ್ಟಿಕ್ರಮಾ

ಶ್ರೀವಿಜಯರಾಯಗುರುಭ್ಯೋನಮಃ.
ಶ್ರೀಪ್ರಲ್ಹಾದವರದ ಲಕ್ಷ್ಮೀನರಸಿಂಹಪ್ರಸನ್ನ.

ಶ್ರೀಗುರುಭ್ಯೋನಮಃ । ಹರಿಃ ಓಂ। ಮೂಲರೂಪಿ ನಾರಾಯಣನು ಸೃಷ್ಟಿ ಆದಿಕಾಲದಲ್ಲಿ, ನಾರಾಯಣ, ವಾಸುದೇವ,ಸಂಕರುಷಣ,ಪ್ರದ್ಯುಮ್ನ, ಅನಿರುದ್ಧರೆಂಬ ವ್ಯೂಹರೂಪದಿಂದ ಆತ್ಮಸೃಷ್ಟಿಮಾಡಿಕೊಂಡು, ಋಜುಗಣಕ್ಕೆ ಕಡಿಮಿಯಾದವನನ್ನು ಸಾಧನಪೂರ್ತಿಮಾಡಿಕೊಂಬುವುದಕ್ಕೆ, ಜೀವರಾಶಿಯಿಂದ ಒಬ್ಬ ಸೂತ್ರನಾಮಕ ಜೀವನನ್ನು ಕಡೆಗೆ ತೆಗೆದು ಸೃಷ್ಟಿಗೆತಂದು ಅದರಸಂಗಡಬಂದ ಅನಾದಿಲಿಂಗ ಸಹಿತರಾದ ಜೀವಕ್ಕೆ ಇದ್ದ ಮೇಲ್ಭಾಗದಲ್ಲಿ ಅವ್ಯಕ್ತ ಅನಿರುದ್ಧ ದೇಹವನ್ನು ಕೊಟ್ಟು ಈ ಜೀವರು ಸೂತ್ರದಸೃಷ್ಟಿಗೆಯಲ್ಯಾರು ಅಂತ ಭಿನ್ನಮಾಡಿ ಲಯಕಾಲದಲ್ಲಿ ನಾಶವಾಗದಂಥಾ ಸ್ಥಾನದಲ್ಲಿ ಇಟ್ಟಿರುತ್ತಾನೆ. ಲಿಂಗದೇಹ, ಅನಿರುದ್ಧದೇಹ, ಅವ್ಯಕ್ತದೇಹಗಳ ಕ್ರಮ ಮುಂದೆ ಹೇಳಲ್ಪಡುತ್ತದೆ. ಅನಿರುದ್ಧದೇಹದಿಂದ ಬದ್ಧನಾದ ಜೀವನು ತ್ರಿವೃತ್ತಿರ್ಣರಾಶಿಯಿಂದ ಬ್ರಹ್ಮಾಂಡದ ಮಧ್ಯದಲ್ಲಿ ವಿರಾಟ್‌ಸೃಷ್ಟಿಯಲ್ಲಿ ಸ್ಥೂಲದೇಹವು ಜ್ಞಾನಕ್ಕೂ,ಕರ್ಮಕ್ಕೂ ಸಾಧನವಾದಂಥಾದ್ದು. ಈ ವಿರಾಟ್ ರೂಪಿಂಯು ಇನ್ನು ಅನೇಕ ಜೀವಇಲ್ಲದದೇಹಗಳನ್ನು ಸೃಷ್ಟಿವಾಡಿ ಯಾತನಾಯೋಗ್ಯವಾದ ದೇಹಗಳನ್ನು ಯಮದೇವರಿಗೂ, ಸ್ವರ್ಗಕ್ಕೆ ಹೋಗಲು ಯೋಗ್ಯವಾದ ಜೀವವಿಲ್ಲದ ದೇಹಗಳನ್ನು ಇಂದ್ರನಿಗೂ, ಸ್ವರ್ಗದಮೇಲಿನ ಲೋಕಗಳಿಗೆ ಹೋಗತಕ್ಕ ಜೀವವಿಲ್ಲದದೇಹಗಳನ್ನು ವಿಷ್ಣುದೂತರಿಗೂ ಕೊಟ್ಟೂ, ಅಪ್ರವೃದ್ಧದೇಹದಿಂದ ಉತ್ಕ್ರಾಂತರಾಗಿ ಪುನಃ ಪುನಃ ಭೂಲೋಕದಲ್ಲಿ ಸ್ಥೂಲದೇಹವನ್ನು ಹೊಂದುತ್ತಾರೆ.

1. ಮೊದಲು ಧೂಮ್ರಸ್ಥಾನದಲ್ಲಿ ಸ್ವರ್ಗದಿಂದ ಬರುವರು. ಅಲ್ಲಿ ಕಿಂಚಿತ್ಕಾಲ ಭೋಗಮಾಡಿ, ಆಭೋಗ ತೀರುತ್ತಲೆ, ಪುನಹ.
2. ಅಬ್ರನೀರಿಲ್ಲದ ಮನುಷ್ಯ ಜನ್ಮಕ್ಕೆ ಬರುವನು.
3. ಅಲ್ಲಿಂದ ಹನಿಗಳದ್ವಾರಾ ಧಾನ್ಯ ಜನನಕ್ಕೆ ಬರುವನು. ಅಂದರೆ ತಿಲಾಮಾಷನಿಗೆ.

4. ಭೋಜನದ್ವಾರಾ ಪುರುಷನ ಉದರದಲ್ಲಿ ಹೊಕ್ಕು 9ತಿಂಗಳು ಇರುವನು. ಈಸ್ಥಾನದಲ್ಲಿ ಇರುವಾಗ್ಗೆ ಜೀವನಿಗೆ ಸುಖದುಃಖ ಜ್ಞಾನವಿಲ್ಲ.

5. ಪುರುಷನ ಉದರದಿಂದ ರೇತೋಮಾರ್ಗವಾಗಿ ಸ್ತ್ರೀಉದರ ಪ್ರವೇಶಮಾಡಿ ದತ್ತ ಜಾತೀಯ ದೇಹಗಳನ್ನು ಹೊಂದುವನು. ಆಯೋನಿಯಲ್ಲಿ ಗರ್ಭನಿಂದ್ರುವಹಾಗೆ ವಾಸುದೇವ ರೂಪಿ ನಾರಾಯಣನು ವೃದ್ಧಿಮಾಡುವನು. ಅಜಾದಿನಾಮಕನಾಗಿ ಪ್ರದ್ಯುಮ್ನ ನಾಮಕ ನಾರಾಯಣನು, ಆರೇತಸ್ಸನ್ನು ಎಲ್ಲಿ ಇಡಬೇಕೋ ಅಲ್ಲಲ್ಲೇ ಇಡುವನು. ಸಂಕರುಷಣ ನಾಮಕ ನಾರಾಯಣನು ತ್ವಷ್ಟನಾಮಕನಾಗಿ, ಆರೇತಸ್ಸನ್ನು ಆಕಾರಮಾಡಲು ಉಪಕ್ರಮಿಸುವನು. ಅನಿರುದ್ಧನಾಮಕ ನಾರಾಯಣನು ಧಾತೃನಾಮಕನಾಗಿ ಆಗರ್ಭವನ್ನುತುಂಬುವನು. ಅನಿರುದ್ಧ ಅಂದರೆ ಶ್ವಾಸನಿರೋಧವಾಗದಂತೆ ಮಾಡುತ್ತಾನಾದಕಾರಣ 'ಅನಿರುದ್ಧನೆಂದು ಹೆಸರು.'

6. ದಶಮರಾತ್ರಿಗೆ ಕಲಿಲವಾಗುವದು.

7. ಹದಿನೈದುದಿನಕ್ಕೆ ಉಬ್ಬಿಕೊಂಡು ಗುಳ್ಳೆಯಂತೆ ಆಗುವುದು.

8. ಕಠಿಣ (ಗಟ್ಟಿಯಾಗುವುದು)

9. ವಂದುಮಾಸಕ್ಕೆ ತತ್ತಿ.

10. ಮಾಸ ಎರಡಕ್ಕೆ ಅಂಗ ಕೈಕಾಲುಗಳು.

11. ಮೂರನೇಮಾಸಕ್ಕೆ ಉಗುರು, ರೋಮಗಳು,ಅಸ್ತಿ,ಚರ್ಮ.

12. ನಾಲ್ಕನೇಮಾಸಕ್ಕೆ ಸಪ್ತಧಾತುಗಳು.

13. ಐದನೇಯಮಾಸಕ್ಕೆ ಹಸಿವಿತೃಷೆಗಳು.

14. ಆರನೇಮಾಸಕ್ಕೆ ಜರಾಯುಜಮಾಸದಿಂದ ಆಚ್ಛಾದಿತನಾಗಿ ದಕ್ಷಿಣಕುಕ್ಷಿಯಲ್ಲಿ ತಿರುಗುವನು.

15. **ಏಳನೇ ತಿಂಗಳಿಗೆ :** ಬಾರಿ ಬಾರಿಗೆ ಪೂರ್ವಕರ್ಮದ ಸ್ಮರಣೆ ಆಗಿ ಸುಖ-ದುಃಖವಾಗಿ ಗರ್ಭಯಾತನೆ ಶ್ರಮದಿಂದ ಸುಜೀವಿಯು ಇಂಥಾ ಗರ್ಭಯಾತನೆ ಬಿಡಿಸೆಂದು ಶ್ರೀಹರಿಯು ಸ್ತೋತ್ರ ಮಾಡುವನು.

16. **ಯೆಂಟನೇ ತಿಂಗಳಿಗೆ :** ತಾಯಿಯು ಉಂಡ ಅನ್ನ, ರಸ, ಕಟು, ಕ್ಷಾರ. ತೀಕ್ಷಣ, ಉಷ್ಣ, ಶೀತ, ಆಮ್ಲಾದಿ ಉಲ್‌ಬಣದಿಂದ ಪೀಡೆ.

17. **ವೊಂಭತ್ತನೆ ತಿಂಗಳಿಗೆ :** ಕ್ರೂರವಾದ ಕ್ರಿಮಿಗಳ ಕ್ಷತ. ಕಡಿತದಿಂದ ಸರ್ವಾಂಗ ಭಗ್ನವಾಗಿ ಮೋರೆಕೆಳಗಾಗಿ ಮೊಳಕಾಲಿನ ಸಂದಿಯಲ್ಲಿ ತಲೆಯುಸಿಕ್ಕಿ, ಮಹಾನರಕ ಪೋಲುವ ಗರ್ಭದಲ್ಲಿ ಬಿದ್ದು, ದುರ್ಗಂಧ ಸನ್ನದ್ಧರಾಗಿ ಶರೀರವೆಲ್ಲ ಮುರಿದು ಮುಟ್ಟಿಗೆಮಾಡಿ ಕಟ್ಟಿ, ಗರ್ಭಚೀಲದೊಳಗೆ ಅಳಲಿ ಬಳಲಿ ಸೂತಕಗಾಳಿಯಿಂದ ಹೊಡೆಸಿಕೊಂಡು ಭೀತಗಾತುರದಿಂದ ಅಧೋಮುಖನಾಗಿ ಸಂಕಟಪಟ್ಟು ಭೂತಳದೊಳಗೆ ಪುಟ್ಟುವನು. ಇಂಥಾ ಮಾತೆಯ ಗರ್ಭಯಾತನೆ ಬಿಡುಗಡೆಯಾಗಿ ಹುಟ್ಟಿದ ಮೇಲೆ ಬಾಲ್ಯ-ಯವ್ವನ-ವೃದ್ಧಾಪ್ಯದಲ್ಲಿ ಸಾಧನ ಮಾಡುತ್ತಾ ಮುಕ್ತೀ ಯೋಗ್ಯನಾದ ಜೀವನು ಅನೇಕ ಜನ್ಮಗಳನ್ನು ಹೊಂದಿ ಪುನಃ ಮಾತೆಯಗರ್ಭ ಕೊಡಬೇಡ. ಇನ್ನು ಪುಟ್ಟಿಸುವುದು ಬಿಡಿಸೆಂದು ಶ್ರೀಹರಿಯನ್ನು ಸ್ತೋತ್ರ ಮಾಡಿ, ಚರಮದೇಹವನ್ನು ಪೊಂದಿ, ನೀತ ಗುರುಗಳ ದ್ವಾರಾ, ಶ್ರೀಹರಿ ಬಿಂಬರೂಪವನ್ನು ಕಂಡು, ಸಂಚಿತ ಆಗಾಮಿ ಕಳೆದು ಮುಂದೆ ಪ್ರಾರಬ್ಧ ಅನುಭವಿಸಿ, ಶ್ರೀಹರಿಯ ಪ್ರಸಾದದಿಂದ "ಲಿಂಗ ಭಂಗ" ವೈದಿ, ದ್ವಿದಳಾತ್ಮಕ ಸ್ವರೂಪಾನಂದ. ಅನುಭವ ರೂಪ ಮೋಕ್ಷ ಹೊಂದುವನು. ಇತಿ ಆತ್ಮಸೃಷ್ಟಿ ಚಿಂತನಾ.

## ಅಥಃಸ್ಥಿತಿಚಿಂತನಾ:

**ಶ್ಲೋಕ :** "ಸ್ನಾನಮೂಲಮಿದಂಕರ್ಮ। ಜ್ಞಾನಮೂಲಮಿದಂತಪಃ । ಬ್ರಹ್ಮಮೂಲಮಿದಂ ಸರ್ವಂ । ನಾಮಮೂಲಮಿದಮ ತಪಃ ॥ ಎಂದು ಉಕ್ತಿಇರುವುದರಿಂದ ಮೊದಲು ಸ್ನಾನಮಾಡಬೇಕು. ಅದು ಬಾಹ್ಯಸ್ನಾನ. ಕಾಮಕ್ರೋಧಗಳೆಂಬ ಅಂತರ್ಮಲಗಳನ್ನು ಕಳೆಯುವುದುಕ್ಕಾಗಿ ಹರಿಧ್ಯಾನವೆಂಬ ಜಲದಲ್ಲಿ ಮುಳುಗುವುದೆ ಅಂತರ್‌ಸ್ನಾನವೆನಿಸುವುದು.

ಇದು ಮಾನಸಿಕಸ್ನಾನ. ಇದು ಬಾಹ್ಯಸ್ನಾನಕ್ಕಿಂತಲೂ ಶತಗುಣಾಧಿಕ ಫಲವನ್ನು ಕೊಡುತ್ತದೆ. ಮಾನಸಿಕ ಸ್ನಾನವಿಲ್ಲದೆ ಬಾಹ್ಯಸ್ನಾನವು ಕೇವಲ ಕಾಕತೀರ್ಥಸ್ನಾನದಂತೆ ಆಗುವುದು.

## ಮಾನಸಿಕಸ್ನಾನದಕ್ರಿಯ

ದೇಹದಲ್ಲಿ ಮೂಲಾಧಾರದಿಂದ ಮೂರುನಾಡಿಗಳು ಮ್ಯಾಲಕ್ಕೆ ಬಂದಿರುವುವು. ಬಲಗಡೆ ಪಿಂಗಳ (ಯಮುನಾ), ಎಡಗಡಿ ಇಡಾ (ಗಂಗಾ),

ಮಧ್ಯದೇಹದಲ್ಲಿ ಸುಷುಮ್ನಾ (ಸರಸ್ವತಿ), ಇವು ಹೃದಯಸ್ಥಾನದವರೆಗೆ ವ್ಯಾಪಿಸಿ, ಅಲ್ಲಿ ಇಡಾನಾಡಿಯ ಎಡದಿಂದ ಬಲಕ್ಕೆ ಸುಷುಮ್ನಾ ನಾಡಿಗೆ ಹೊಂದಿಕೊಂಡು ಬಂದಿದೆ. ಪಿಂಗಳಾನಾಡಿಯು ಬಲದಿಂದ ಎಡಕ್ಕೆ ಸುಷುಮ್ನನಾಡಿಗೆ ಹೊಂದಿಕೊಂಡುಬಂದಿದೆ. ಈ ಮೂರುನಾಡಿಗಳ ಸಂಧಿಸ್ಥಳವೇ ತ್ರಿವೇಣಿಸಂಗಮ. ಇದು ವಕ್ಷಸ್ಥಳದಲ್ಲಿದೆ. ಇದನ್ನೇ ಪ್ರಯಾಗಕ್ಷೇತ್ರವೆಂದು ತಿಳಿದು, ಆ ತ್ರಿವೇಣಿಸಂಗಮದಲ್ಲಿ ಅಷ್ಟಾಕ್ಷರ ಮಂತ್ರಾನುಸಂಧಾನ ಪೂರ್ವಕ ಅಘಮರ್ಷಣಸ್ನಾನವನ್ನು ಮಾಡಿ ಶುದ್ಧನಾಗಿ, ನಿರ್ಜನಸ್ಥಾನದಲ್ಲಿ ಕುಳಿತು ಏಕಾಗ್ರಚಿತ್ತನಾಗಿ ತನ್ನದೇಹದಲ್ಲಿರುವ ಭಗವದ್ರೂಪಗಳನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು. ಲಿಂಗಬದ್ಧನಾದ ಜೀವನಿಗೆ ಲಿಂಗದೇಹದಮ್ಯಾಲೆ (10) ಹತ್ತುವಿಧ ಕವಚಗಳು ಇರುತ್ತವೆಂದು ತಿಳಿಯಬೇಕು. ಅವು ಯಾವೆಂದರೆ.

## ಕವಚಪ್ರಕರಣ

1. ಅನ್ನಮಯ; 2. ಪ್ರಾಣಮಯ; 3. ಮನೋಮಯ; 4. ವಿಜ್ಞಾನಮಯ; 5.ಆನಂದಮಯ; ಕವಚದ ಕೆಳಗೆ ತೋರಿಸಿದಂತೆ ವಂದರವಳಗೆ ವಂದು ಹೊಂದಿಕೊಂಡು ಇರುತ್ತದೆ. ಇವು ಲಿಂಗದೇಹಕ್ಕೆ ಆವರ್ಕವಾಗಿ ಇವೆ. ಇವು ಅನ್ನಮಯ ಕವಚದಮಾ –ಇರುವ 5 ವಿಧಕವಚಗಳು. ಇವುಗಳ ಮ್ಯಾಲೆ ಮತ್ತೆ ಐದು ಕವಚಗಳುಇವೆ. ಅವು ಯಾವೆಂದರೆ 1. ಚಕ್ಷುಮಯ; 2.ಶ್ರೋತ್ರುಮಯ; 3.ವಾಙ್ಮಯ; 4.ವಾಸುದೇವ; 5.ನಾರಾಯಣ; ಎಂತ 5 ಕವಚಗಳು. ವಂದರಮ್ಯಾಲೆ ಒಂದು ಸಂಪೂರ್ಣ ವ್ಯಾಪಿಸಿ ಹಿಂಡು ಇದೆ. ಈ ಪ್ರಕಾರ ಅನುಸಂಧಾನಕ್ಕೆ ತಂದುಕೊಂಡರೆ ಅಶುಭದೋಷ ಎಂದಿಗೂ ಬರಲಾರದು. ಕೃಷ್ಣಾಜಿನದಲ್ಲಿ ಹುದುಗಿದೆ ಎಂದರೆ ಸುತ್ತಿಇಟ್ಟ ಪ್ರತಿಮ ವಸ್ತ್ರಾದಿಗಳಂತೆ. –ಇತಿಕವಚಪ್ರಕರಣಂ.

ದೇಹದಲ್ಲಿ ಮೂರುವರೆಕೋಟಿ ರೋಮಕೂಪಗಳುಂಟು, ಅವುಗಳಲ್ಲಿ ಹಿಂಕಾರನಾಮಕ ಪ್ರದ್ಯುಮ್ನರೂಪ ವ್ಯಾಪ್ತವಾಗಿರುತ್ತದೆ. ಈ ರೋಮಕೂಪಗಳಲ್ಲಿ, ಮೂರುವರೆಕೋಟಿ ತೀರ್ಥಾಭಿಮಾನಿದೇವತೆಗಳು ಇರುತ್ತಾರೆ. ಅವರುಗಳ ನಿಯಾಮಕ ಭಗವದ್ರೂಪಗಳು ತತ್ತದಾಕಾರವಾಗಿ ಇರುತ್ತವೆಂದು ಚಿಂತನ ಮಾಡಬೇಕು.

# ಅಥ ಧಾತು ಪ್ರಕರಣ

1.ತ್ವಕು; 2.ಚರ್ಮ; 3.ಮಾಂಸ; 4.ರಕ್ತ; 5.ಮೇಧಸ್ಸು; 6.ಮಜ್ಜ; 7.ಅಸ್ತಿ; ಎಂತ ಏಳು ತರಹಾ ಧಾತುಗಳು. ಇವು ಸಹ ವಂದರವಳಗೆ ವಂದು ಇರುತ್ತವೆ.

1. **ತ್ವಕು:** ತ್ವಕುನಲ್ಲಿ ಅನಿರುದ್ಧ, ವಾಸುದೇವನಾಮಕ ಭಗವದ್ರೂಪ, ಪ್ರಸ್ತಾವನಾಮಕ ಸಾಮ ಲಾವಣ್ಯ ಆದ ಕಾಮರೂಪ ಉಂಟು.

2. **ಚರ್ಮ:** ಚರ್ಮದಲ್ಲಿ ಪ್ರದ್ಯುಮ್ನನಾಮಕ, ಉದ್ಗೀತನಾಮಕ ಅಥವಾ ಅನಿರುದ್ಧ ನಾಮಕ ಭಗವದ್ರೂಪವು, ಪ್ರತಿಹಾರನಾಮಕ ಸಾಮವ್ರಣ ನಿವಾರಣ ಲಕ್ಷ್ಮೀಪತಿರೂಪ ಉಂಟು.

3. **ಮಾಂಸ:** ಮಾಂಸದಲ್ಲಿ ಸಂಕರುಷಣನಾಮಕ ಭಗವದ್ರೂಪವು, ಪ್ರತಿಹಾರನಾಮಕ ಅಥವಾ ನಿಧನನಾಮಕ ಸಾಮಪುಷ್ಟಿಪ್ರದ ನಾಮಕ ಭಗವದ್ರೂಪ ಉಂಟು.

4. **ರಕ್ತ:** ರಕ್ತದಲ್ಲಿ ವಾಸುದೇವನಾಮಕ ಭಗವದ್ರೂಪವು, ಪಸ್ರವ ಸಾಮನಾರಾಯಣನಾಮಕ ಭಗವದ್ರೂಪವು, ಉದ್ಗೀತನಾಮಕ ಸಾಮಶರೀರ ಬಲಪ್ರದ, ಶಾಂತಸಂವಿತು ಎಂಬ ಭಗವದ್ರೂಪ ಉಂಟು.

5. **ಮೇಧಸ್ಸು:** ಮೇಧಸ್ಸುನಲ್ಲಿ ನಾರಾಯಣನಾಮಕ ಭಗವದ್ರೂಪ ನಿಧನನಾಮಕ ಸಾಮವು ಅಥವಾ ವಿಷ್ಣುನಾಮಕ ಭಗವದ್ರೂಪವು ವಷಟ್‌ಕಾರ ನಾಮ ಸಾಮವು ಐಶ್ವರ್ಯಗುಣಪ್ರದ ನಾಗಿ ಷಡ್ಗುಣನೆಂಬ ಭಗವದ್ರೂಪ ಉಂಟು.

6. **ಮಜ್ಜಾ:** ಮಜ್ಜಾದಲ್ಲಿ ಪ್ರದ್ಯುಮ್ನನಾಮಕ ಸಾಮ 360 ಮಜ್ಜಾನಾಮಕ ಸಂಧ್ಯಾದೇವತ ಭಗವದ್ರೂಪ. ಭಗವದ್ರೂಪ ಸಾತ್ಮನಾಮಕ ಭಗವದ್ರೂಪ ಉಂಟು. ಮದಜನಕವಾದ ಕಾರಣ ಮಜ್ಜಾಎಂತಹೆಸರು. ಇದೇಮಜ್ಜಾವೇ ರೇತಸ್ಸು. ಆ ರೇತಸ್ಸಿನಲ್ಲಿ ಮುಖ್ಯಪ್ರಾಣನಿರುತ್ತಾನೆ. ಆತನಲ್ಲಿ ನಾರಾಯಣನಿರುತ್ತಾನೆ. ಆದ್ದರಿಂದ ಗರ್ಭರೂಪವಾಗುತ್ತದೆ.

7. **ಅಸ್ತಿ:** ಅಸ್ತಿಯಲ್ಲಿ ನರಸಿಂಹನಾಮಕ ಭಗವದ್ರೂಪವು, ಉಪದ್ರವ ಅಥವಾ ಸಾಮ 360 ಅಸ್ತಿನಾಮಕ ಭಗವದ್ರೂಪ ಉಂಟು. ಸ್ಥಿರವಾಗಿರುವುದರಿಂದ ಅಸ್ತಿ ಎಂದು ಹೆಸರು.

360ಪರ್ವಗಳಲ್ಲಿ ಉತ್ತಮಜ್ಞಾನ ಸ್ವರೂಪಗಳಾದ ಕಾರಣ ಪರ್ವಾ ಎಂಬ ನಾಮ ದಿಂದ ಕರೆಯಲ್ಪಡುವುದು. ಅದರಭಿಮಾನಿದೇವತ ಭಗವದ್ರೂಪಗಳು

ಉಂಟು. ಈ ಪ್ರಕಾರ ಮಜ್ಜ, ಅಸ್ತಿ ಪರ್ವಗತದಿಂದ (1080) ಭಗವದ್ರೂಪಗಳನ್ನು ಪ್ರತಿದಿನ ಅನುಸಂಧಾನಮಾಡುವುದರಿಂದ ಎಷ್ಟುಹೊತ್ತು ಅನುಸಂಧಾನ ಮಾಡುತ್ತಾನೋ ಅಷ್ಟು ಸಾವಿರ ಘಳಿಗಿಗಳು ಆಯುರಭಿವೃದ್ಧಿ ಆಗುವುದೆಂದು ಧೃಢವಾಗುತ್ತದೆ.

ಈ ಸ್ಥೂಲದೇಹದಲ್ಲಿ 9 ಕೋಟಿ ತತ್ವಾಭಿಮಾನಿ ದೇವತೆಗಳು ಇದ್ದಾರೆ. ಅವರಲ್ಲಿ ಮುಖ್ಯತತ್ವಾಭಿಮಾನಿದೇವತೆಗಳು ಕೇಶವಾದಿ 24 ಭಗವದ್ರೂಪಗಳು ಆಯಾತತ್ವಕ್ಕೆ ನಿಯಾಮಕರಾಗಿರುತ್ತಾರೆ.

## ಅಥ ಕೋಶಗಳವಿವರ

### ಅನ್ನಮಯಕೋಶ:

1.ಅನ್ನಮಯಕೋಶ:– ತ್ವಕ್ಕಿಗೆ ಚರ್ಮದಲ್ಲಿ ಅಂತರ್ಧಾನ ಹೇಳಬೇಕು. ಇದು (ಅನ್ನಮಯ ಕೋಶ) ಚರ್ಮಮಾಂಸದಮಧ್ಯದಲ್ಲಿ ಇರುತ್ತದೆ. ಅದರಲ್ಲಿ ಶಾಂತಿಪತಿ ಅನಿರುದ್ಧ ಪ್ರಾಣ ನಾಮಕ ವಾಯುದೇವರು ಇರುತ್ತದೆ. ಇಲ್ಲಿರುವ ಅನಿರುದ್ಧನಿಗೆ 'ಅನ್ನಮಯ' ನೆಂದು ಹೆಸರು. ಈಕೋಶದಲ್ಲಿ ತತ್ವಗಳು ಇವೆ. ಅವು ಯಾವುಯಂದರೆ.

1. **ಪೃಥ್ವಿತತ್ವ :** ಇದಕ್ಕೆ ಧರಣೀದೇವಿಯು, ಶನೈಶ್ಚರನು. ಧರಣಿನಾಮಕದೈತ್ಯನು ಅಭಿಮಾನಿಗಳು ಇದಕ್ಕೆ ಉಪಾಸನಾಜನಕ ವಾದ ತನ್ಮಾತ್ರಗಣ.
2. **ಗಂಧತತ್ವ :** ಇದಕ್ಕೆ ಸಮಾನನಾಮಕ ಅಪಾನವಾಯುವು ಅಭಿಮಾನಿ, ಸಮಾನ ನಾಮಕ ದೈತ್ಯನು ಅಭಿಮಾನಿ.
3. **ಘ್ರಾಣೇಂದ್ರಿಯ :** ಇದಕ್ಕೆ ಅಶ್ವಿನಿದೇವತೆಗಳು ತನ್ನಾಮಕ ದೈತ್ಯನು ಅಭಿಮಾನಿಗಳು.
4. **ಪಾಯು :** ಕರ್ಮೇಂದ್ರಿಯ ಇದಕ್ಕೆ ಮಿತ್ರನಾಮಕ ದೇವತೆ ತನ್ನಾಮಕದೈತ್ಯರು ಅಭಿಮಾನಿಗಳು.
5. **ಜಲತತ್ವ :** ಇದಕ್ಕೆ ಗಂಗಾವರುಣ ಅಭಿಮಾನಿಗಳು,ತನ್ನಾಮಕ ದೈತ್ಯರು ಅಭಿಮಾನಿಗಳು.
6. **ರಸತನ್ಮಾತ್ರ :** ರಸತನ್ಮಾತ್ರ ಗುಣಕ್ಕೆ ಉದಾನನಾಮಕ ವಾಯು ತನ್ನಾಮಕದೈತ್ಯರು ಅಭಿಮಾನಿಗಳು.

7. **ಜಿಹ್ವೇಂದ್ರಿಯ** : ಇದಕ್ಕೆ ವರುಣನು ತನ್ನಾಮಕ ಅಭಿಮಾನಿಗಳು.

8. **ಉಪಸ್ಥ** : ಕರ್ಮೇಂದ್ರಿಯಇದಕ್ಕೆ ಸ್ವಾಯಂಭುವುಮನು ತನ್ನಾಮಕದೈತ್ಯನು ಅಭಿಮಾನಿಗಳು.

## 2. ಪ್ರಾಣಮಯಕೋಶ:

ಇದು ಮಾಂಸ, ರಕ್ತಕ್ಕೆ ಮಧ್ಯದಲ್ಲಿ ಇರುತ್ತದೆ. ಇದರಲ್ಲಿರುತಿಪ್ಪ ಪ್ರದ್ಯುಮ್ನ. ಈತಗೆ 'ಪ್ರಾಣಮಯನೆಂದು ಹೆಸರು'. ಅಪಾನನಾಮಕವಾಯ ನಿಯಾಮಕನಾಗಿ ಇರುತ್ತಾರೆ. ಈಕೋಶದಲ್ಲಿ 12 ತತ್ವಗಳುಂಟು. ಅವುಯಾವುದೆಂದರೆ:

1. **ತೇಜಸ್ತತ್ವ** : ಇದಕ್ಕೆ ಭೂವಾಗ್ನಿಯುತ ತನ್ನಾಮಕನಾದ ದೈತ್ಯನು. ಅಭಿಮಾನಿಗಳು.

2. **ರೂಪತನ್ಮಾತ್ರ** : (ಗುಣ) ಇದಕ್ಕೆ ವ್ಯಾನನಾಮಕವಾಯುವು ತತ್ತನ್ನಾಮಕ ದೈತ್ಯಾಭಿಮಾನಿ.

3. **ಚಕ್ಷುಸು** : ಜ್ಞಾನೇಂದ್ರಿಯ ಇದಕ್ಕೆವಿವಸನ್ನಾಮಕಸೂರ್ಯನು ತನ್ನಾಮಕದೈತ್ಯನು ಅಭಿಮಾನಿಗಳು.

4. **ವಾಚ** : ಕರ್ಮೇಂದ್ರಿಯ ಇದಕ್ಕೆ ಇಂದ್ರಕುಮಾರ ಜಯಂತ ತನ್ನಾಮಕ ದೈತ್ಯಾಭಿಮಾನಿಗಳು.

5. **ವಾಯು** : ವಾಯುತತ್ವ ಇದಕ್ಕೆ ಪ್ರಾಣನಾಮಕ ಭೂತವಾಯುವು ತನ್ನಾಮಕ ದೈತ್ಯನು ಅಭಿಮಾನಿಗಳು.

6. **ಸ್ಪರ್ಶ** : ಸ್ಪರ್ಶತನ್ಮಾತ್ರ (ಗುಣ) ಇದಕ್ಕೆ ಅಪಾನನಾಮಕವಾಯುವು ತನ್ನಾಮಕದೈತ್ಯನು ಅಭಿಮಾನಿಗಳು.

7. **ತ್ವಕು** : ತ್ವಕು ಜ್ಞಾನೇಂದ್ರಿಯ. ಇದಕ್ಕೆ ಅಹಂಕಾರಿಕಪ್ರಾಣ ಅಭಿಮಾನಿ- ತನ್ನಾಮಕ ದೈತ್ಯನು ಅಭಿಮಾನಿ.

8. **ಪಾಣಿ** : ಕರ್ಮೇಂದ್ರಿಯ ಇದಕ್ಕೆ ದಕ್ಷನು. ತನ್ನಾಮಕದೈತ್ಯನು ಅಭಿಮಾನಿ.

9. **ಆಕಾಶ** : ಆಕಾಶತತ್ವ ಇದಕ್ಕೆ ಗಣೇಶನು ಅಭಿಮಾನಿ ತನ್ನಾಮಕ ದೈತ್ಯನು ಅಭಿಮಾನಿಗಳು.

10. **ಶಬ್ದ** : ಶಬ್ದ ತನ್ಮಾತ್ರ (ಗುಣ)ಇದಕ್ಕೆ ಬೃಹಸ್ಪತಿ ಪ್ರಾಣನಾಮಕವಾಯು. ತನ್ನಾಮಕ ದೈತ್ಯನು ಅಭಿಮಾನಿಗಳು.

11. **ಶ್ರೋತ್ರ** : ಜ್ಞಾನೇಂದ್ರಿಯ ಇದಕೆ ದಿಗ್ದೇವತಿಗಳು ತನ್ನಾಮಕ ದೈತ್ಯರು ಅಭಿಮಾನಿಗಳು.

12. **ವಾಕ್ಕು** : ಕರ್ಮೇಂದ್ರಿಯ ಇದಕ್ಕೆ ಅಗ್ನಿಯು ತನ್ನಾಮಕ ದೈತ್ಯರು ಅಭಿಮಾನಿಗಳು.

## ೩. ಮನೋಮಯಕೋಶ.

ಇದು ರಕ್ತ ಮೇಧಸ್ಸುಗಳ ಮಧ್ಯದಲ್ಲಿದೆ. ಅಲ್ಲಿ ಜಯಾಪತಿ ಸಂಕರುಷಣನು. ಈತಗೆ ಮನೋ ಮಯನೆಂದು ಹೆಸರು. ಈ ಕೋಶದಲ್ಲಿ ಎರಡು ತತ್ವಗಳಿವೆ. ಅವುಯಾವುದೆಂದರೆ.

1. **ಅಹಂಕಾರತತ್ವ:-** ಇದುವೈಕಾರಿಕ, ತೈಜಸ, ತಾಮಸ,ಗಳೆಂದು ಮೂರುಪ್ರಕಾರ. ಇದಕ್ಕೆ ಗರುಡ,ಶೇಷ,ರುದ್ರರು ಅಭಿಮಾನಿಗಳು.

2. **ಮನಸ್ತತ್ವ:-** ಇದು 1.ಚಿತ್ತ,2.ಅಹಂಕಾರ,3. ಬುದ್ಧಿ,4.ಮನಸ್ಸು, 5.ಅಂತಃಕರಣ ಅಂತ 5ಬೇಧ.

| ಸಂಖ್ಯೆ | ಕ್ರಮ | ದೇವತೆ | ದೈತ್ಯ. |
|---|---|---|---|
| 01 | ಚಿತ್ತ | ಬ್ರಹ್ಮ | ಕಲಿ. |
| 02 | ಅಹಂಕಾರ | ಗರುಡ, ಶೇಷ, ರುದ್ರ. | ಅಂಧಕಾಸುರ. |
| 03 | ಬುದ್ಧಿ | ಸೌಪರುಣಿ, ವಾರುಣಿ, ಪಾರ್ವತಿ. | ಅಂಧಕಾಸುರನ ಪತ್ನಿಯರು. |
| 04 | ಮನಸ್ಸು | ಇಂದ್ರ, ಚಂದ್ರ, ಕಾಮನು. | ಮಧು, ಕೈಟಭ, ವಿಪ್ರಚಿತ್ತಿ, ಕಾಲನೇಮಿ, ಶಂಬರಾಸುರ |

5. ಅಂತಃಕರಣ. ಇದಕ್ಕೆ ಕೆಳಭಾಗದಲ್ಲಿ ಅ) ಜ್ಞಾನ, ಆ) ವಿಜ್ಞಾನ, ಉ) ಕ್ರೋಧ, ಊ) ನಾದ, ಸಹ್ರುತ್ವಗಳೆಂಬ 5 ವಿದ್ಯಾಪಂಚಕಗಳು, ಅದಕ್ಕೆ ಕ್ರಮವಾಗಿ ಅನಿರುದ್ಧ,ಪ್ರದ್ಯುಮ್ನ, ಸಂಕರುಷಣ,ವಾಸುದೇವ, ನಾರಾಯಣರೆಂಬ ಪಂಚಕವು (ದೇವಿ) ಪ್ರಾಣ,ಅಪಾನ,ವ್ಯಾನ,ಉದಾನ,ಸಮಾನ ನಾಮಕ ಮುಖ್ಯಪ್ರಾಣಪಂಚಕವು. ಇಲ್ಲಿ ದೈತ್ಯ ಪ್ರವೇಶವಿಲ್ಲ.

ಇದರ ಹೊರಭಾಗದಲ್ಲಿ 1.ಮೋಹ, 2.ಮಹಾಮೋಹ, 3.ತಾಮಿಸ್ರ, 4.ಅಂಧತಾಮಿಶ್ರ, 5.ಅಂಧತಮಸ್ಸು. ಎಂಬ ಅವಿದ್ಯಾಪಂಚಕವು. ಇದಕ್ಕೆ ಕ್ರಮದಿಂದ 1.ಕೃದ್ಧೋಲ್ಕ,; 2.ವೀರೋಲ್ಕ; 3.ದ್ಯುಲ್ಕ; 4. ಮಹೋಲ್ಕ ; 5.ಸಹಸ್ರೋಲ್ಕ. ವೆಂಬದೇವತಾಪಂಚಕವು, ಮತ್ತು ಕಲಿ, ಅಂಧಕಾಸುರ, ಮಧುಕೈಟಭ; ವಿಪ್ರಚಿತ್ತಿ; ಕಾಲನೇಮಿ (ಶಂಬರ) ದೈತ್ಯಕಲ್ಯಾದಿಮೂಲಪಂಚಕವು ತದಾಭಿಮಾನಿಗಳು ಇವರು ಕೃಷ್ಣವರ್ಣದವರು.

## 4. ವಿಜ್ಞಾನಮಯಕೋಶ.

ಇದು ಮೇಧಸ್ಸು ಮಜ್ಜು ಇವುಗಳ ಮಧ್ಯೆಇದೆ. ಇಲ್ಲಿ ಮಾಯಾಪತಿ ವಾಸುದೇವರು. ಈತಗೆ ವಿಜ್ಞಾನ ಮಯನೆಂದು ಹೆಸರು. ಉದಾನನಾಮಕವಾಯು ಅಭಿಮಾನಿಗಳಾಗಿ ಇರುತ್ತಾರೆ. ಈಕೋಶದಲ್ಲಿ ಮಹತತ್ವ ವಂದೇ ಇದೆ. ಇಲ್ಲಿ ಕಲಿ ನಿಯಾಮಕನಾಗಿ ಇದ್ದಾನೆ.

## ೫. ಆನಂದಮಯಕೋಶ.

ಇದು ಮಜ್ಜಾ ಅಸ್ತಿಗಳ ನಡುವೆ ಇದೆ. ಇಲ್ಲಿ ಲಕ್ಷ್ಮೀಪತಿ ನಾರಾಯಣನು ಈತಗೆ ಆನಂದಮಯನೆಂದು ಹೆಸರು. ಸಮಾನವಾಯು ನಿಯಾಮಕನು. ಇಲ್ಲಿ ಅವ್ಯಕ್ತತತ್ವವಿದೆ. ಇದಕ್ಕೆ ಸರಸ್ವತಿ, ಭಾರತೀದೇವಿಯರು ಅಭಿಮಾನಿಗಳು. ಇವರು ಕೇವಲ ಉದ್ದೀಶ್ಯ ಇರುತ್ತಾರೆಂದು ಭಾವಿಸಬೇಕು. ಇದು ಗುಣತ್ರಯಾತ್ಮಕ ವಾದದ್ದು. ಇಲ್ಲಿ ಶ್ರೀದೇವಿಇದ್ದು ಮೋಕ್ಷಫಲವನ್ನು ಕೊಡುತ್ತಾರೆ. ಇಲ್ಲಿ ಕಲ್ಯಾದಿಗಳಿಗೆ ಪ್ರವೇಶವಿಲ್ಲ. ಈಆನಂದಮಯ ತಿಳಿಯುವುದರಿಂದ ಇಂದ್ರಿಯಪಾಟಕತ್ವ ಬರುತ್ತದೆಂದು ತಿಳಿಯಬೇಕು.

(ಮಾತೃಕಾನ್ಯಾಸ ವಿದ್ಯಾ:) ಅಥ ಶರೀರದಲದಲಿರುವ ಭಗವದ್ರೂಪಗಳ ಧ್ಯಾನಪ್ರಕರಣ.

1. **ಶಿರಸ್ಸು** : ಮೇಲೆಬ್ರಹ್ಮರಂದ್ರಸ್ಥಾನದಲ್ಲಿ ಅಜನಾಮಕ ಭಗವದ್ರೂಪ ಉಂಟು.

2. **ಅಂಗಳು** : ಅಂದರೆ ಬಾಯಿವಳಗಡಿ ಮೇಲುಭಾಗದಲ್ಲಿ ಅನಂತನೆಂಬ ಭಗವದ್ರೂಪ.

3. **ಮುಖ** : ಮುಖದಸುತ್ತಲು ಆನಂದನಾಮಕ ಭಗವದ್ರೂಪ.

4. **ಶ್ರೋತೃ :** ಅಂದರೆ ಕಿವಿಯವಳಗಡಿಯ ಬಹಿ ರಂಧ್ರದಲ್ಲಿಕ್ಕೆ ಬಯಲು ಎಂತಹೇಳಬೇಕು. ಶಬ್ದಗ್ರಹಣ ನಾದಕಾರಣ ಧನಂಜಯವಾಯುವು. ದಿಗ್ದೇವತೆಗಳು 10 ಮಂದಿ ಅದರಲ್ಲಿ ಚಂದ್ರನೆಂಬುವ ದೇವತೆ ಹತ್ತಂಶಗಳಿಂದ ದಶದಿಕ್ಕುಗಳಿಗೆ ಅಭಿಮಾನಿದೇವತೆಯಾಗಿರುತ್ತಾರೆ. ಇಂದ್ರಾದಿ ದಿಕ್ಪಾಲಕರು 1.ಚಂದ್ರನೆಂಬ ಅಂಶದಲ್ಲಿ 'ಬೃಹತ್ಪಾಂಡು' ಎಂಬ ಭಗವದ್ರೂಪವು. 2.ದೇವನೆಂಬ ಅಂಶದಲ್ಲಿ 'ರಾಜಾ'ಎಂಬ ಭಗವದ್ರೂಪವು.

ಈ ಎಂಟು ಅಂಶಗಳಲ್ಲಿಯೂ:

| ಸಂಖ್ಯೆ | ಅಂಶ | ಭಗವದ್ರೂಪ |
|---|---|---|
| 01 | ಚಂದ್ರ | ಬೃಹತ್ಪಾಂಡು |
| 02 | ದೇವ | ರಾಜಾ |
| 03 | ಸಕ್ರನಲ್ಲಿ | ಧನ್ವಂತರಿ |
| 04 | ಪ್ರಮಾಣ ಅಂಶ | ಧನ್ವಂತರಿ |
| 05 | ಇಮಿಯಲ್ಲಿ | ಹಯಗ್ರೀವ |
| 06 | ಜ್ಞಾನಲ್ಲಿ | ಚಿಂತಾಮಣಿ |
| 07 | ಇಂಬುನಲ್ಲಿ | ಹಂಸ |
| 08 | ವಿದ್ಯುನಲ್ಲಿ | ವಾಮನ |
| 09 | ಅಚ್ಚನಲ್ಲಿ | ವಾಮನ |
| 10 | ಜೀವಾತ್ಮಕನಲ್ಲಿ | ವಾಮನ |

ಈ ಐದು ಭಗವದ್ರೂಪಗಳು ಇನ್ನೂ ಅಜಾದಿ 16ಭಗವದ್ರೂಪಗಳು ವ್ಯಾಪ್ತವಾಗಿರುತ್ತವೆ. ಹಯಗ್ರೀವರೂಪವು ದಿಕ್ಕುವಿದಿಕ್ಕುಗಳಲ್ಲಿ ವ್ಯಾಪ್ತವಾದದ್ದು, ನಿಯಾಮಕವಾದದ್ದು ಪ್ರದ್ಯುಮ್ನ ರೂಪವು.

5. **ಬಲಗಿವಿ :** ಬಲಗಿವಿಯಮೇಲೆ ಉಗ್ರನೂ, ವಿಪ್ರನಬಲಗಿವಿಯಲ್ಲಿ ಭಾಗೀರತ್ಯಾದಿತೀರ್ಥಗಳು ಇರುತ್ತವೆ. ಬಲಗೈಯಿಂದ ಆಕಿವಿಯ ಸ್ಪರ್ಶಮಾಡಿದರೆ ಶುದ್ಧನಾಗುತ್ತಾನೆ. ಇದೆಶ್ರೋತೌಚಮನ ಎಂದು ತಿಳಿಯಬೇಕು. ಯಾವಕಾಲದಲ್ಲಿ ಶ್ರೋತೌಚಮನಮಾಡಬೇಕೆಂದರೆ ಶೀನು ಬಂದಾಗ, ಉಗುಳುವಾಗ,

ತೇಗುಬಂದಾಗ, ಅಪಾನವಾಯು ಸಡಲಿದಾಗ, ಕೇಶ, ನಖಾದಿಸ್ಪರ್ಶ ಮಾಡಿದಾಗ, ಜಪಕಾಲದಲ್ಲಿ ಚಾಂಡಾಲಾದಿ ಶಬ್ದಶ್ರವಣಮಾಡಿದರೆ, ಅಕಸ್ಮಾತ್ ಶೂದ್ರಾದಿಗಳ ದರ್ಶನಮಾಡಿದರೆ, ದಂತಧಾವನಮಾಡಿದನಂತರ ಇಂಥಹಸಮಯಗಳಲ್ಲಿ ಶ್ರೋತೌಚಮನ ಮಾಡಬೇಕು.

6. **ಎಡಕಿವಿ :** ಮ್ಯಾಲೆ ಊರ್ಜನಿದ್ದಾನೆ.

7. **ಬಲಗಣ್ಣು :** ಬಲಕಣ್ಣಿನಲ್ಲಿ ಇಂದ್ರನಾಮಕ ಭಗವದ್ರೂಪವು, ಸ್ತಂಬರೂಪಿಯಾದ ವಿಷ್ಣುವು ಇದ್ದಾನೆ. ಆಸ್ತಂಬಕ್ಕೆ ಹಗ್ಗರೂಪಿಯಾದ ಲಕ್ಷ್ಮಿ ಇದ್ದಾಳೆ. ಆಕಳುಕರುವುನ ರೂಪದಿಂದ ವಾಯುದೇವರು ಹಗ್ಗದಿಂದ ಬದ್ಧರಾಗಿಹಾರೆ.

8. **ಎಡಗಣ್ಣು :** ಎಡಗಣ್ಣಿನಲ್ಲಿ ಈಶನಾಮಕ ಭಗವದ್ರೂಪಉಂಟು.

9. **ಎರಡುಕಣ್ಣು :** ಎರಡುಕಣ್ಣುಗಳ ಅಭೀಮಾನಿ ವಿವಸ್ವಾನ್‌ನಾಮಕ ಸೂರ್ಯ,ಅದಕ್ಕೆ ನಿಯಾಮಕನಾದ ನಾರಾಯಣನ ರೂಪಗಳಾವುಯಂದರೆ.

1.ಪ್ರತಿಷ್ಠಾ; 2.ವಾಜನವಸು; 3.ಕಪಿಲ; 4.ಮೂರ್ಧರಾಜ; 5.ಉತ್, ಎಂದು ಇವು ಅಲ್ಲದೆ ಅಜಾದಿ 16 ಭಗವದ್ರೂಪಗಳು ವಲಯಾಕಾರವಾಗಿದೆ.

10. **ಎರಡುಕಣ್ಣುಗಳಲ್ಲಿರುವ ಕೆಂಪುರೇಖೆಗಳಲ್ಲಿ :** ಗೌತುಮನಾಮಕ ರುದ್ರ.

11. **ಬಿಳಿಗುಡ್ಡಿನಲ್ಲಿ :** ಇಂದ್ರ, ವಶಿಷ್ಠನಾಮಕನು.

12. **ಕರಿಗುಡ್ಡಿನಲ್ಲಿ :** ಅಗ್ನಿ,ಜಮದಗ್ನಿನಾಮಕನು.

13. **ಕಣ್ಣಿನಪಾಪಿಯಲ್ಲಿ :** ಸತ್ಯ,ಭರದ್ವಾಜನು.

14. **ಕಣ್ಣೀರು :** ವರುಣ ವರ್ಚಸ್ಸುನಾಮಕನು.

15. **ಕೆಳರೆಪ್ಪೆಯಲ್ಲಿ :** ಕಾಶ್ಯಪನಾಮಕ ಪೃಥಿವಿ.

16. **ಮೇಲಿನರೆಪ್ಪೆ :** ದ್ಯುನಾಮಕ ಭಾರತೀದೇವಿಯರು ಇರುತ್ತಾರೆ. ಇವರೇಳುಮಂದಿಯು ಅಕ್ಷಿಯಲ್ಲಿರುವ ವಿಶ್ವನಾಮಕ ಪರಮಾತ್ಮನ ಉಪಾಸನೆ ಮಾಡುತ್ತಾರೆ. ಆ ವಿಶ್ವನಾಮಕ ಪರಮಾತ್ಮನು ಹ್ಯಾಗೆ ಇದ್ದಾನೆಂದರೆ 2ಕಾಲುಗಳು; ನಡುವಿನಂತೆಯಿ ಆನೆಯುಸೊಂಡಲಿನಂತೆ, 19ಮುಖಗಳು, ಅವುಗಳಲ್ಲಿ ನಡುವಿನಮುಖ ಗಜಮುಖ, ಉಭಯಪಾಶ್ವಕಗಳಲ್ಲಿರುವ ಮುಖಗಳು ಮನುಷ್ಯರಮುಖಗಳಂತಿವೆ, ಈತನು ಅಷ್ಟದಿಕ್ಪಾಲಕರಿಂದ ಸೇವಿತನಾಗಿರುತ್ತಾನೆ.

ದೇವತೆಗಳಿಗೆ ಸರ್ವದಾ ಜಾಗೃತಾವಸ್ಥೆ ಕೊಡತಕ್ಕವನು. ಇದರಂತೆ ಚಿತ್ರಗಾರನಿಂದ ಪಟಬರಿಸಿ ನೋಡಿದರೆ ವಿಶ್ವನಾಮಕ ಪರಮಾತ್ಮನ ರೂಪಮನಸ್ಸಿಗೆ ಬರುತ್ತದೆ.

17. **ಶಿರಸ್ಸು :** ಶಿರಸ್ಸಿನಮೇಲ್ಭಾಗದಲ್ಲಿ ತುರಿಯನಾಮಕ ವಾಸುದೇವನು ಸಾಕ್ಷಿಯಾಗಿರುವನು. ಈವಾಸುದೇವನು ಆದಿತ್ಯನಾಮಕನಾಗಿ ಆದಿತ್ಯನಲ್ಲಿರುತ್ತಾನೆ. ಅದೇವಾಸುದೇವನೇ ದಕ್ಷಣಾಕ್ಷಿ ಯುಲ್ಲಿರುತ್ತಾನೆ.ಆ ವಾಸುದೇವನು ಚಕ್ಷುರ್ಮಂಡಲವನ್ನು ಬಿಟ್ಟುಹೋದರೆ ಈಜೀವನು ಸೂರ್ಯಮಂಡಲವನ್ನು ಕಾಂತಿರಹಿತವಾಗಿ ಕಾಣುತ್ತಾನೆ. ಇಂಥಾ ಪ್ರಾಣಿಯು 7ರಾತ್ರಿಗಳ ವಳಗೆ ಮೃತನಾಗುತ್ತನೆ ಎಂಬುದಕ್ಕೆ ಸೂಚನೆ.ಕಣ್ಣಿನಲ್ಲಿ ವಿಷ್ಣುವು ವಾಮನರೂಪ ನಾಗಿರು ತ್ತಾನೆ.ಆತ ಅನಂಗನಾದ ಪ್ರಯುಕ್ತ ನೇತ್ರವು ಅನಂಗವಾಗಿರುತ್ತದೆ.

18. **ನಿಮಿಷೋನ್ಮೇಶ** : ನಿಮಿಷೋನ್ಮೇಶಗಳಲ್ಲಿ ಕೂರ್ಮನಾಮಕ ವಾಯುದೇವರು .

19. **ನಾಶಿಕ :** ನಾಶಿಕಾಕ್ಕೆ ಅಶ್ವಿನಿದೇವತೆಗಳು ಇಲ್ಲಿ ಧನ್ವಂತರಿನಾಮಕ ವ್ಯಾಧಿ ನಿವಾರಕ ನಾಗಿರುತ್ತಾನೆ.

20. **ಬಲಹೊಳ್ಳಿ :** ಬಲಹೊಳ್ಳಿಯಲ್ಲಿ 'ತುಮರಾ'ಎಂಬ ಭಗವದ್ರೂಪ.

21. **ಎಡಹೊಳ್ಳಿ :** ಎಡಹೊಳ್ಳಿಯಲ್ಲಿ 'ಮೋಕ್ಷಾ' ಎಂಬ ಭಗವದ್ರೂಪ.

22. **ಮೂಗಿನಮ್ಯಾಲೆ :** ಮೂಗಿನಮೇಲೆ ತಗ್ಗಿಗೆ ಸೂರ್ಯಲೋಕವೆಂದು ಹೆಸರು. ಅಲ್ಲಿ ಆದಿತ್ಯ ನಿರುತ್ತಾನೆ. ಆತನಲ್ಲಿ ಐರಾ ನಾಮಕ ಭಗವದ್ರೂಪ ಉಂಟು. ಈಭಗವದ್ರೂಪಕ್ಕೆ ಹಿರಣ್ಮಯವೆಂದು ಹೆಸರು.

23. **ನಾಸಾಗ್ರದಲ್ಲಿ :** ನಾಸಾಗ್ರದಲ್ಲಿ ಗಂಧಗ್ರಹಣಕ್ಕೆ ಕಾರಣನಾದ ಕೃಕಲನಾಮಕವಾಯುವಿರುವನು.

24. **ಊರ್ಧ್ವಶ್ವಾಸ :** ಊರ್ಧ್ವಶ್ವಾಸದಲ್ಲಿ ಭಾರತಿಯು.

25. **ಅಧೋಶ್ವಾಸ :** ಅಧೋಶ್ವಾಸದಲ್ಲಿ ಮುಖ್ಯಪ್ರಾಣನಿರುತ್ತಾನೆ.

26. **ಬಲಗಡಿಶ್ವಾಸದಲ್ಲಿ :** ಬಲಶ್ವಾಸದಲ್ಲಿ ಸೂರ್ಯನು.

27. **ಎಡಗಡಿಶ್ವಾಸದಲ್ಲಿ :** ಎಡಗಡಿಶ್ವಾಸದಲ್ಲಿ ಚಂದ್ರನು ಇರುತ್ತಾನೆ. ಶ್ವಾಸಕ್ಕೆ ಅಭಿಮಾನಿ ಹಂಸ. ಇದೇಪೆಸರಿನಿಂದ ವಾಯುದೇವರು ಇರುತ್ತಾರೆ. ಅದರಲ್ಲಿ ಅದೇಹೆಸರಿನಲ್ಲಿ ಪರಮಾತ್ಮನ ಉಪಾಸನೆಮಾಡುತ್ತಾರೆ. ಆದಕಾರಣ ಪ್ರಾಣಾಯಾಮಕಾಲದಲ್ಲಿ ಕುಂಭಕದಿಂದ ಸಮಸ್ತ ಪಾಪಗಳು ಪರಿಹಾರವಾಗುತ್ತವೆ.

28. **ಬಲಕಪೋಲದಲ್ಲಿ** : ಬಲಕಪೋಲದಲ್ಲಿ ಲೃಸಾ ಎಂಬ ಭಗವದ್ರೂಪವಿದೆ.

29. **ಎಡಕಪೋಲದಲ್ಲಿ** : ಎಡಕಪೋಲದಲ್ಲಿ ಲೃಜಾ ಎಂಬ ಭಗವದ್ರೂಪವಿದೆ.

30. **ಮೇಲ್ತುಟಿಯಲ್ಲಿ** : ಮೇಲ್ತುಟಿಯಲ್ಲಿ ಪವಾತ್ಮನು.

31. **ಕೆಳಗಿನತುಟಿಯಲ್ಲಿ** : ಓಜನು.

32. **ಮೇಲಿನದಂತಪಂಕ್ತಯಲ್ಲಿ** : ಮೇಲಿನ ದಂತಪಂಕ್ತಿಯಲ್ಲಿ ಓಜಬೃತ.

33. **ಕೆಳಗಿನ ದಂತ ಪಂಕ್ತಿಯಲ್ಲಿ** : ಚೌರಸಾ.

34. **ಅಂಗಳ ಎಂದರೆ ಬಾಯಿವಳಗಿನ ಮೇಲ್ಭಾಗದಲ್ಲಿ** : 'ಅಂತ'.

35. **ಜಿಂಹ್ವಾಭಿಮಾನಿ** : ವರುಣನು ತನ್ನಿಯಾಮಕ ಭಗವದ್ರೂಪ ನಾರಶಿಂಹ, ವಾಕ್ಯದಲ್ಲಿ. ದೇವದತ್ತವಾಯು ಅಭಿಮಾನಿ.

36. **ಕಿರಿನಾಲಿಗಿಯಲ್ಲಿ** : ವಾಕ್ಕಿಗೆ ಉದ್ಬೋದನಾದಕಾರಣ ನಾಗವಾಯುವು. ಉಪೇಂದ್ರನಾಮಕ ಭಗವದ್ರೂಪ ಇರುತ್ತದೆ.

37. **ವಾಗಿಂದ್ರಿಯುದಲ್ಲಿ** : ವಹ್ನಿ ಇರುತ್ತಾನೆ. ಭಯುರಸವನ್ನು ಅಸಹ್ಯಪಡುವಲ್ಲಿ ಭಾರ್ಗವನಾಮಕ ರೂಪವು ಇರಿತ್ತದೆ. ಇದೇ ರಾತ್ರಿ ಸೂಕ್ತಪ್ರತಿಪಾದ್ಯರೂಪವು.

38. **ವಾಕ್‌ನಲ್ಲಿ** : ಅರ್ಧಗರ್ಭನಾಮಕ ಭಗವದ್ರೂಪವು. ಅಲ್ಲಿ ಸರಸ್ವತಿಯು ವಾಗೀಶ್ವರ ನಾಮದಿಂದ ಬ್ರಹ್ಮಜೀವರು ಇರುತ್ತಾರೆ. ಪವಿಎಂಬನಾಮದಿಂದ ವಿಷ್ಣುವಿರುತ್ತಾನೆ. 'ಕುರು' ಎಂಬನಾಮದಿಂದ ಸ್ತ್ರೀರೂಪನಾಗಿ ಹಯಗ್ರೀವನಿರುತ್ತಾನೆ. ಈಹಯಗ್ರೀವನ ಉಪಾಸನಾದಿಂದ ವಿದ್ಯಾಫಲಿತವಾಗುತ್ತದೆ.

39. **ಬಾಹುಗಳಿಗೂ, ಪಾಣಿದ್ವಯಕ್ಕು** : ದಕ್ಷಪ್ರಜೇಶ್ವರ ಅಭಿಮಾನಿ.

40. **ದಕ್ಷಿಣಹಸ್ತದಲ್ಲಿ** : ಮಧುಸೂಧನ

41. **ವಾಮಹಸ್ತದಲ್ಲಿ** : ಶ್ರೀಧರ.

42. **ಉಭಯಹಸ್ತದಲ್ಲಿ** : 'ಪ್ರಿಯ'ನಾಮಕರಾಮಚಂದ್ರನಿರುತ್ತಾನೆ.

43. **ದಕ್ಷಿಣಬಾಹು ಸಂಧಿಘಳ ಅಗ್ರಭಾಗಹದಲ್ಲಿ** : ಕಪಿಲ, ಖಪತಿ, ಗರುಡಾಸನ, ಘರ್ಮ, ಓಸಾರ ನಾಮಕ ಹರಿಮೂರ್ತಿ ಪಂಚಕವು.

44. **ವಾಮಬಾಹುಸಂಧಿಗಳಲ್ಲಿ :** ಅಗ್ರಭಾಗದಲ್ಲಿ ಚಾರ್ವಾಂಗ. ವ್ರಂದೋಗಮ್ಯ' ಜನಾರ್ಧನ. ಘಂಟಾಕಾರ. ಇಮೆಂಬಹರಿನಾಮಕ ಪಂಚಕವು.

45. **ದಕ್ಷಿಣಹಸ್ತಾಂಗುಲಿ :** ಮೂಲದಲ್ಲಿ ಬ್ರಹ್ಮ ತೀರ್ಥವಿದೆ.ಅದರಿಂದ ಆಚಮನ ಮಾಡಬೇಕು.

46. **ಕನಿಷ್ಟಾಂಗುಲಿ :** ಕನಿಷ್ಟಾಂಗುಲಿ ಮೂಲದಲ್ಲಿ ಪ್ರಜಾಪತಿತೀರ್ಥ ವಿರಿವುದರಿಂದ, ಅದರಿಂದ ಋಷಿತರ್ಪಣಕೊಡಬೇಕು.

47. **ತರ್ಜನಿಮೂಲದಲ್ಲಿ :** ತರ್ಜನಿಮೂಲದಲ್ಲಿ ವೈಕೃತ ತೀರ್ಥವಿದೆ. ಅದರಿಂದ ಪಿತೃತರ್ಪಣ ಕೊಡಬೇಕು.

48. **ಅಂಗುಲಿಗಳ ಅಗ್ರಭಾಗದಲ್ಲಿ :** ಅಂಗುಲಿಗಳ ಅಗ್ರಭಾಗದಲ್ಲಿ ದೇವತೀರ್ಥವಿದೆ. ಅದರಿಂದ ದೇವತರ್ಪಣಕೊಡಬೇಕು.

49. **ಅಂಗೈಯಮಧ್ಯಭಾಗದಲ್ಲಿ :** ಅಂಗೈಮಧ್ಯಭಾಗದಲ್ಲಿ ಅಗ್ನಿತೀರ್ಥವಿದೆ. ದೋಷಾದಿಗಳ ಪರಿಹಾರಾರ್ಥ ಸೂರ್ಯ್ಯಗೆ ಶ್ವೇತ ಮಂತ್ರದಿಂದ ಆಚಮನಮಾಡುತ್ತಾರೆ.

50. **ತುಂದಿ :** ಎಂದರೆ ಹೊಟ್ಟೆಯಲ್ಲಿ ಮನುನಾಮಕ ಭಗವದ್ರೂಪ ಉಂಟು. ದಕ್ಷಿಣ ಪಾರ್ಶ್ವ ದಲ್ಲಿ 'ಪರಾ' ಎಂಬ ಭಗವದ್ರೂಪ ಉಂಟು.

51. **ಎಡಪಾರ್ಶ್ವದಲ್ಲಿ :** ಎಡಪಾರ್ಶ್ವದಲ್ಲಿ ಫಲಿಎಂಬ ಭಗವದ್ರೂಪ.

52. **ಬೆನ್ನಿಗೆ :** ಬೆನ್ನಿಗೆ ಬಲಿ ಎಂಬಭಗವದ್ರೂಪ.

53. **ಹೃದಯದಲ್ಲಿ :** ಹೃದಯದಲ್ಲಿ ಯಜ್ಞನಾಮಕ ಭಗವದ್ರೂಪ.

54. **ಕಟಿಯಲ್ಲಿ :** ಕಟಿಯಲ್ಲಿ ಅನಿರುದ್ಧರೂಪ.

55. **ಉಪಸ್ಥದಲ್ಲಿ :** ಉಪಸ್ಥದಲ್ಲಿ ಸ್ವಾಯಂಭುವುಮನು ಅಭಿಮಾನಿದೇವತೆ, ಭಗನಾಮಕ ಭಗವದ್ರೂಪ. ಈತಗೆ ಪ್ರಜಾಪತಿ ಎಂಬ ನಾಮಉಂಟು.

56. **ಪುರುಷನ ರೇತಸ್ಸಿಗೆ :** ಪುರುಷನ ರೇತಸ್ಸಿಗೆ ಅಭಿಮಾನಿ ಆದಿತ್ಯನಾಮಕ ಭಗವ ದ್ರೂಪವ ವಿರುವುದು. ಇದು ಪುರುಷರೂಪವಿರುವಕಾರಣ ಪತ್ನಿಯರು ತನ್ನ ಪುರುಷನ ಶುಕ್ಲ ವರ್ಣನೋಡಿ ಅಸಹ್ಯಪಡಬರದು. : ಮಿಥುನವಿದ್ಯಾ:-

57. **ಸ್ತ್ರೀಯರಕೆಂಪು ರೇತಸ್ಸಿನಲ್ಲಿ :** ಅಗ್ನಿಯಿರುತ್ತಾನೆ. ಆಕೆಯಲ್ಲಿ ಅಗ್ನಿನಾಮಕ ಭಗವಂತ ಸ್ತ್ರೀರೂಪ ದಿಂದ ಇರುತ್ತಾನೆ. ಸ್ತ್ರೀಲೋಹಿತನೋಡಿ ಪುರುಷನು ಅಸಹ್ಯಪಡಬಾರದು. ಅಂಶಾಂಶಗಳಿಂದಲೇ ಸ್ತ್ರೀಪುರುಷಕೂಡಿ ಪುತ್ರತ್ವವನ್ನು ಹೊಂದುತ್ತೇವೆ. ಅದಕ್ಕೆ ಉಪಾದಾನ ಕಾರಣ ರೇತಸ್ಸು ಆದೇಹಕ್ಕೆ ಚೇದನುಲೇಪನ ವಳಗೆ ಇದ್ದು ಅಭಿಮಾನಿಯಾಗಿರುತ್ತಾನೆ. ಪರಮಾತ್ಮನು ಅಂಶಾಂಶಗಳಿಂದ ಉಭಯರೇತಸ್ಸಿನಲ್ಲಿದ್ದು ದೇಹ ಉತ್ಯಮಮಾಡುವ ಇಚ್ಛಾ ಇದ್ದರೆ ಸಂತತಿ ಉತ್ಪತ್ತಿಯಾಗುತ್ತದೆ. ಹಾಗೆ ಇಲ್ಲದಿದ್ದರೆ ಎಲ್ಲಿ ಪುರುಷನ ರೇತಸ್ಸು ಅಧಿಕವಾದರೆ ಪುರುಷದೇಹವು, ಸ್ತ್ರೀರೇತಸ್ಸು ಅಧಿಕವಾಗದ್ದು ಆ ಸ್ತ್ರೀದೇಹವು ಎರಡು ಸಮವಾಗಿದ್ದರೆ ಸಂತ ದೇಹವು ಹುಟ್ಟುವುದು. ಅದರೊಳಗೆ ಸ್ತ್ರೀ ಮುಟ್ಟಾದ ಸಮದಿನಗಳಲ್ಲಿ ಯೋಗವಾದರೆ ಪುತ್ರ. ಬೆಸದಿನಗಳಲ್ಲಿ ಯೋಗವಾದರೆ ಪುತ್ರಿಹುಟ್ಟುವಳು. ಆದಿತ್ಯ ಅಗ್ನಿಯು ಇವರ ಪ್ರೇರಣೆಯಿಂದ ಸ್ವಭಾವತಃ ಮಿಥುನಕ್ರಮಹುಟ್ಟುತ್ತದೆ. ಪುರುಷನಲ್ಲಿ ಅನಾದ ನಾಮಕ ಪರಮಾತ್ಮನು ಸ್ತ್ರೀಯಲ್ಲಿ ಇರುವ ರಮಾನಾಮಕ ಲಕ್ಷ್ಮೀ ಈಎರಡೂ ದಂಪತಿಗಳಿಗೆ ಪರಸ್ಪರ ರತಿಯನ್ನು ಹುಟ್ಟಿಸಿ ಈಮಿಥುನಕರ್ಮ ನಡೆಸುತ್ತಾನೆ. ಆದ್ದರಿಂದ ಅಲ್ಲಿರುವ ಭಗವದ್ರೂಪಕ್ಕೆ 'ಮಿಥುನ ನೆಂದು ಹೆಸರು. ಈಪರಮಾತ್ಮನು 5ನಾಮದಿಂದ ಇರುತ್ತಾನೆ. ಅವು ಯಾವೆಂದರೆ.

1. ಋತುಸಂಕೇತವನ್ನು 'ಹಿಂಕಾರ' ನಾಮಕ ಸೋಮಮಾಡುತ್ತಾನೆ. ಈತನೇ ಪ್ರದ್ಯುಮ್ನ.
2. ಅದರಿಂದ ಉಂಟಾಗುವ ಪರಿಣಾಮವನ್ನು ಅನುಭವ ಮಾಡಿಸುವನು. ಪ್ರಸ್ತಾರನಾಮಕನಾದ ವಾಸುದೇವನು.
3. ಅಹಸ್ಸು ರತದಲ್ಲಿ ಉದ್ಗೀತನಾಮಕ ಲಕ್ಷ್ಮೀನಾರಾಯಣನು.
4. ಉಪರಿಸುರತದಲ್ಲಿ ಪ್ರತಿಹಾರನಾಮಕ ಅನಿರುದ್ಧನು.
5. ರೇತ್ಸಂತರದಲ್ಲಿ ನಿಧನನಾಮಕ ಸಂಕರುಷಣನು ಈ ಪ್ರಕಾರ ಐದು ರೂಪಗಳನ್ನು ತಿಳಿದರೆ (ಸ್ತ್ರೀಸಂಭೋಗದಿಂದ) ವಾಮದೇವ ಯಜ್ಞಫಲಬರುತ್ತದೆ. ಇತಿ ಮಿಥುನಾವಿದ್ಯಾ:-

58. **ವಾಯುವಿನಲ್ಲಿ :** ವಾಯುವಿನಲ್ಲಿ ಮಿತ್ರನಾಮಕವಾಯುವಲ್ಲಿ ಪ್ರದ್ಯುಮ್ನ ನಿಯಾಮಕನು.

59. **ಬಲತೊಡೆಯ** : ಬಲತೊಡೆಯ ನಾಲ್ಕು ಸಂಧಿಗಳಲ್ಲಿ ಅಗ್ರಭಾಗಕ್ಕೆ 1.ಟಂಕ; 2.ಡಳಕ, 3.ಡರಕ; 4.ಧರಣಿ; 5.ಣಾತ್ಮ; ಎಂಬ 5 ಭಗವದ್ರೂಪಗಳು ಉಂಟು.

60. **ಎಡತೊಡೆಯ** : ಎಡತೊಡೆಯನಾಲ್ಕು ಸಂಧಿಗಳಲ್ಲಿ ಅಗ್ರಭಾಗಕ್ಕೆ 1.ತಾರ;2.ಧಬ; 3.ದಂಡಿ; 4.ಧನ್ವಿ; 5.ನೆಮ್ಸ; ಎಂಬ 5 ಭಗವದ್ರೂಪಗಳು ಉಂಟು.

61. **ಉಭಯಪಾದಗಳಲ್ಲಿ** : ಉಭಯಪಾದಗಳಲ್ಲಿ ಜಯಂತ ಇಂದ್ರನಮಗ ಯಜ್ಞ ನಾಮಕ ಪರಮಾತ್ಮ (ಸ್ವಾಯಂಭುವುನಮಗ ದೌಹಿತ್ರ) ಅಕೂತಿದೇವಿಯಮಗ.

62. **ದಕ್ಷಿಣಪಾದಾಂಗುಷ್ಟದಲ್ಲಿ** : ದಕ್ಷಿಣಪಾದಾಂಗುಷ್ಟದಲ್ಲಿ ವಾಯುದೇವರು ಇರುತ್ತಾನೆ. ಆತನಲ್ಲಿ ತೀರ್ಥಪಾದನಾಮಕ ನಾರಾಯಣನಿರುತ್ತಾನೆ. ಅದು ದೇಹಕ್ಕೆ ಆಧಾರಭೂತವಾದದ್ದು. ವಿಷ್ಣುವಿನ ಆಜ್ಞಾದಿಂದ ಅಲ್ಲಿ ಸರ್ವತೀರ್ಥಗಳು ಇರುತ್ತವೆ. ಆದ್ದರಿಂದ ಬ್ರಾಹ್ಮಣರ ಪಾದಪ್ರಕ್ಷಾಳನಾ ಉದಕ ಮಹಾಪವಿತ್ರ.

ವಾಕ್ಕು, ಪಾಣಿ, ಧೃಕ್, ಶ್ರೋತ್ರ, ಮನಸ್ಸು, ಹೃದಯ. ಈ 6 ಸ್ಥಾನಗಳಲಲ್ಲಿ ಆಕಾಶನಾಮಕ ಲಕ್ಷ್ಮೀ ರೂಪಗಳಿರುತ್ತವೆ. ಅವುಗಳಲ್ಲಿ ಕ್ರಮದಿಂದ. ಪ್ರಾಜ್ಞ; ಪ್ರಿಯ; ಸತ್ಯ; ಅನಂತ; ಆನಂದ. ಸ್ಥಿತಿ. ಎಂತ 6 ಭಗವದ್ರೂಪಗಳು ಇವೆ. ಹೀಗೆ ತಿಳಿದವನು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳನ್ನು ಗೆಲ್ಲುತ್ತಾನೆ. ಇತಿಮಾತೃಕಾನ್ಯಾಸ ವಿದ್ಯಾ.

63. **ತಲೆಯ ಮೇಲಿನ ಕೂದಲು** : ತಲೆಯ ಮೇಲಿನ ಕೂದಲು ಬುಡದಲಿ (ಲೃ)ಎಂಬ ಹೆಸರಿನಿಂದ ಸಂಕರುಷಣ ನಿರುತ್ತಾನೆ.

64. **ತಲಿಬುರುಡಿವ್ಯಾಲೆ** : ತಲಿಬುರುಡಿವ್ಯಾಲೆ ವಾಸುದೇವನು ಸಾಕ್ಷೀಭೂತನಾಗಿರುತ್ತಾನೆ.

65. **ತಾಲುದೇಶದಲ್ಲಿ** : ತಾಲುದೇಶದಲ್ಲಿ ಕೇಶಭಾಗದಲ್ಲಿರೋ ಪ್ರದೇಶಕ್ಕೆ ಇಂದ್ರಯೋನಿ ಎಂದು ಹೆಸರು.ಅಲ್ಲಿ ಪ್ರದ್ಯುಮ್ನನಾಮಕ ಭಗವಂತನಿರುತ್ತಾನೆ.

66. **ಹೃದಯಾಕಾಶದಲ್ಲಿ** : ಹೃದಯಾಕಾಶದಲ್ಲಿ ಪುರುಷನಾಮಕ ಅನಿರುದ್ಧ ರೂಪ ವ್ಯಾಪ್ತ ನಾಗಿರುತ್ತಾನೆ. ಮತ್ತು ವಾಮನರೂಪವು ಇರುತ್ತದೆ. ಈತಪ್ರಾಣನನ್ನು ಮೇಲೆ, ಅಪಾನನ್ನು ಕೆಳಗೆಬೆಟ್ಟ ಮಾಡಿಸುತ್ತಾನೆ. ವಿಶ್ವೇದೇವತೆಗಳು ಈತನನ್ನು ಉಪಾಸನೆ ಮಾಡುತ್ತಾರೆ.

## ಪ್ರಾಣಾಗ್ನಿವಿದ್ಯಾ

67. **ಹೃತ್ಪದ್ಮದಲ್ಲಿ :** ಹೃತ್ಪದ್ಮದಲ್ಲಿ ಗಾಯಿತ್ರಿಯು ತನ್ನಪತಿಯಾದ ಬ್ರಹ್ಮದೇವರಿಂದ ಸಹಿತಳಾಗಿ ಇರುತ್ತಾಳೆ. ಆಗಾಯಿತ್ರಿಯಲ್ಲಿ ಗಾಯಿತ್ರಿಯಂಬೋ ಹೆಸರಿನಿಂದ ವಿಷ್ಣುವಿನ ಸ್ತ್ರೀರೂಪ ವಿರುತ್ತದೆ. ಆತಗೆ ಪ್ರಾಣಎಂತಹೆಸರು. ಗಾಯನಮಾಡಿದವರನ್ನು ಪಾಲನಮಾಡುತ್ತಾನೆ. ಆದಕಾರಣ ಗಾಯಿತ್ರೀಎಂದು ಹೆಸರು. ಪ್ರಾಣನಾಮಕನಾದ ಭಗವಂತನು ಅರ್ಕನಾಮಕ ಮುಖ್ಯಪ್ರಾಣನಿಂದ ಉಪಾಸನಮಾಡಿಸಿಕೊಳ್ಳುತ್ತಾನೆ. ಇದೇಕ್ರಮವಾಗಿ ಪಂಚಪ್ರಾಣಾಗ್ನಿಗಳಲ್ಲಿ ಶ್ರೀಹರಿ ಇರುತ್ತಾನೆ. ಅದರ ಕ್ರಮಹ್ಯಾಂಗೆಂದರೆ:

1. ಮುಖದಲ್ಲಿ ಅಹವನೀಯ ಅಗ್ನಿ ಇರುತ್ತದೆ. ಇದಕ್ಕೆ ಪ್ರಾಣಾಗ್ನಿ ಎಂದು ಹೆಸರು. ಅಲ್ಲಿಪ್ರಾಣ ನಾಮಕನಾಗಿ ಅನಿರುದ್ಧರೂಪದಿಂದ ವೈಶ್ವಾನರ ನಿರುತ್ತಾನೆ. ಹೋತೃವಾಗಿ ಪ್ರಾಣವಾಯುವು ಹೃದಯದಲ್ಲಿ ಇರುತ್ತಾನೆ. ಈತನೇ ಪ್ರಾಣಾಗ್ನಿಸ್ತನಾದ ವೈಶ್ವಾನರಂಗೆ ಉತ್ತರದ್ವಾರಪಾಲಕನಾಗಿ ಸೂರ್ಯರೂಪದಿಂದ ಇರುತ್ತಾನೆ. ಈತಗೆ ಅಧಿಷ್ಠಾನದ್ವಾರ "ಪ್ರಾಣಾಯಸ್ವಾಹಾ." ಅಂತ ಆಹುತಿಕೊಟ್ಟರೆ ಪ್ರಾಣಾಗ್ನಿಸ್ತನಾದ ಪ್ರಾಣನಾಮಕ ಅನಿರುದ್ಧರೂಪಿಯಾದ ವೈಶ್ವಾನರನು ತೃಪ್ತನಾಗುತ್ತಾನೆ.

2. ನಾಭಿಯಲ್ಲಿ "ದಕ್ಷಿಣಾಗ್ನಿ" ಇರುತ್ತದೆ.ಆ ಅಗ್ನಿಗೆ 'ವ್ಯಾನಾಗ್ನಿ' ಎಂತಹೆಸರು. ಅಲ್ಲಿ ವ್ಯಾನ ನಾಮಕನಾಗಿ ಪ್ರದ್ಯುಮ್ನರೂಪದಿಂದ ವೈಶ್ವಾನರನಿರುತ್ತಾನೆ. ಪ್ರತಿಹಕ್ತೃನಾಗಿ ವ್ಯಾನನಾಮಕ ವಾಯುವು ಸರ್ವಶರೀರವ್ಯಾಪಿಸಿಕೊಂಡು ಇರುತ್ತಾನೆ. ಈತನೇ ವ್ಯಾನಾಗ್ನಿನಾದ ವೈಶ್ವಾನರಗೆ ದಕ್ಷಿಣದ್ವಾರ ಪಾಲಕನಾಗಿ ಚಂದ್ರರೂಪದಿಂದ ಇರುತ್ತಾನೆ. ಈತನ ಅಧಿಷ್ಠಾನದ್ವಾರ "ವ್ಯಾನಾಯಸ್ವಾಹಾ". ಎಂತಾಹುತಿಕೊಟ್ಟರೆ ವ್ಯಾನಾಗ್ನಿಸ್ತನಾದ ಪ್ರದ್ಯುಮ್ನರೂಪಿಯಾದ ವೈಶ್ವಾ ನರನು ಪ್ರೀತನಾಗುತ್ತಾನೆ.

3. ಹೃದಯಭಾಗದಲ್ಲಿ "ಗಾರ್ಹಪತ್ಯಅಗ್ನಿ" ಇರುತ್ತದೆ.ಆ ಅಗ್ನಿಗೆ 'ಅಪಾನಾಗ್ನಿ' ಎಂತಹೆಸರು. ಅಲ್ಲಿ ಅಪಾನ ನಾಮಕನಾಗಿ ಸಂಕರುಷಣ ರೂಪದಿಂದ ವೈಶ್ವಾನರನಿರುತ್ತಾನೆ. ಉದ್ಗಾತೃನಾಮಕ ಅಪಾನನಾಮಕ ವಾಯುದೇವರು ಗುದಸ್ಥಾನದಲ್ಲಿರುತ್ತಾನೆ. ಈತನೇ ಅಪಾಗ್ನಿಸ್ತನಾದ ವೈಶ್ವಾನರಗೆ ಪಶ್ಚಿಮದ್ವಾರದಲ್ಲಿ ದ್ವಾರಪಾಲಕನಾಗಿ ಅಗ್ನಿರೂಪದಿಂದ ಇರುತ್ತಾನೆ. ಈತನ ಅಧಿಷ್ಠಾನದ್ವಾರಾ "ಅಪಾನಯಸ್ವಾಹಾ" ಎಂದು ಆಹುತಿ ಕೊಟ್ಟರೆ ಅಪಾಗ್ನಿಸ್ತನದ ಅಪಾನನಾಮಕ ಸಂಕರುಷಣ ರೂಪಿಯಾದ ವೈಶ್ವಾನರನು ತೃಪ್ತನಾಗುವನು.

4. ನಾಭಿಯ ಎಡಭಾಗದಲ್ಲಿ "ಅವಸಥ್ಯೆಂಬ ಅಗ್ನಿಇರುತ್ತಾದೆ.ಅದಕ್ಕೆ 'ಸಮಾನಾಗ್ನಿ' ಎಂತಹೆಸರು. ಅಲ್ಲಿ ಸಮಾನ ನಾಮಕನಾಗಿ ವಾಸುದೇವರೂಪದಿಂದ ವೈಶ್ವಾನರನಿರುತ್ತಾನೆ. ಯಜಮಾನ ನಾಗಿ ಸಮಾನವಾಯುವು ನಾಭಿಯಲ್ಲಿರುತ್ತಾನೆ. ಈಸಮಾನಾಗ್ನಿಸ್ತ ವೈಶ್ವಾನರಗೆ ಪೂರ್ವ ದ್ವಾರಪಾಲಕನಾಗಿ ಇಂದ್ರರೂಪದಿಂದ ಇರುತ್ತಾನೆ. ಈತನ ಅಧಿಷ್ಠಾನದ್ವಾರಾ "ಸಮಾನಾಯ ಸ್ವಾಹಾ" ಎಂತ ಆಹುತಿ ಕೊಟ್ಟರೆ ಸಮಾನನಾಮಕ ನಾರಾಯಣನು ಪ್ರೀತನಾಗುತ್ತಾನೆ.

5. ನಾಭಿಯು ಬಲಭಾಗದಲ್ಲಿ "ಸಭ್ಯಾಗ್ನಿ" ಇರುತ್ತದೆ.ಆ ಅಗ್ನಿಗೆ 'ಉದಾನಾಗ್ನಿ' ಎಂತಹೆಸರು. ಅಲ್ಲಿ ಉದಾನನಾಮಕನಾಗಿ ನಾರಾಯಣರೂಪದಿಂದ ವೈಶ್ವಾನರನಿರುತ್ತಾನೆ. ಅಧ್ವರ್ಯುವಾಗಿ ಉದಾನವಾಯುವು ಗಂಡಸ್ಥಾನದಲ್ಲಿ ಆಕಾಶನಾಮಕ ಲಕ್ಷ್ಮಿಯಿಂದ ಆವಿಷ್ಠನಾಗಿ ಇರುತ್ತಾನೆ. ಈ ಉದಾನಾಗ್ನಿಸ್ತನಾದ ವೈಶ್ವಾನರಗೆ ಊರ್ಧ್ವದ್ವಾರಪಾಲಕನಾಗಿ ವಾಯು ರೂಪದಿಂದ ಇರುತ್ತಾನೆ.ಈತನ ಅಧಿಷ್ಠಾನದ್ವಾರಾ "ಉದಾನಾಯಸ್ವಾಃಹಾ" ಎಂದು ಆಹುತಿಕೊಟ್ಟರೆ ಉದಾನಾಗ್ನಿಸ್ಥನಾದ ಉದಾನನಾಮಕ ನಾರಾಯಣ ರೂಪನಾದ ವೈಶ್ವಾನರನು ತೃಪ್ತನಾಗುತ್ತಾನೆ. ಅನೇಕ ಗುಣಗಳಸಂಬಂಧ ಉಳ್ಳನಾದ್ದರಿಂದಲೂ, ನಾಶರಹಿತನಾದ್ದರಿಂದಲೂ, ಹೃದಯುಕಮಲದ ಅಗ್ರಭಾಗದಲ್ಲಿ ಶ್ರೇಷ್ಠನಾದ್ದರಿಂದಲೂ. ಅಗ್ರೇಶನೆಂತಲು ವೈಶ್ವಾನರನೆಂತಲು ಹೆಸರು ಬಂತು. ಈಪ್ರಾಣಾಗ್ನಿಹೋತ್ರ ಎಂಬಯಜ್ಞದಲ್ಲಿ ಪಂಚಪ್ರಾಣರೂಪದಿಂದ ವಾಯುದೇವರು ಪಂಚಾಗ್ನಿಗತನಾದ ಹರಿಯನ್ನು ಕುರಿತು ಯಾಗ(ಪೂಜೆ) ಮಾಡುತ್ತರಾದ ಕಾರಣವಾಯುದೇವರಿಗೆ ಯಜ್ಞ ಎಂಬಹೆಸರುಬಂತು. ಪ್ರಾಣಾಪಾನಾದಿಗಳಿಂದ ಸಹಿತನಾಗಿ ಜೀವನಿಂದ ಕೊಡಲ್ಪಟ್ಟ ಅನ್ನವನ್ನು ಪಚನಮಾಡಿ ಅಸಾರವನ್ನು 'ಶೂಭಾ' ಎಂದತಸ್ವೀಕಾರ ಮಾಡುತ್ತಾನೆ. 'ಅಶುಭ'ಎಂತ ಸ್ವೀಕಾರಮಾಡೋದಿಲ್ಲ. ಆದಕಾರಣ ಈವೈಶ್ವಾನರ ಸಂತೃಪ್ತ ನಾದರೆ ದೇವತೆಗಳೆಲ್ಲರೂ ತೃಪ್ತರಾಗಿ ಈವಿದ್ಯಾಸಾಧನಮಾಡುವ ಜನರಿಗೆ ಅಕ್ಷಯಫಲ ಕೊಡುತ್ತಾರೆ. ಅನಿರುದ್ಧಾದಿ ಪಂಚರೂಪನಾಗಿ ಹರಿಯ ಭೋಜನ ಮಾಡುತ್ತಾ ಈಸ್ಥೂಲ ದೇಹದಲ್ಲಿರುತ್ತಾನೆ. ಸಂಕರುಷಣ ಪ್ರದ್ಯುಮ್ನ ಈ ಇಬ್ಬರು ಭೋಜನಮಾಡುವ ಜೀವರಿಗೆ ಕೊಟ್ಟು, ತಾವು ಭೋಜನಮಾಡುತ್ತಾರೆ. ವಾಸುದೇವ ಅವಕಾಶಕೊಡುತ್ತಾನೆ. ನಾರಾಯಣ ಅನಿರುದ್ಧ ಈ ಇಬ್ಬರು ಭೋಜನ ಮಾಡತಕ್ಕ ಪದಾರ್ಥದಲ್ಲಿ ಇರುತ್ತಾರೆ. ಹೀಗೆ ತಿಳಿದು ಅಮೃತಾಸನ ಎಂದರೆ 'ಯಜ್ಞಶೇಷಭೋಜನ" ಮಾಡಿದ ವಾಗುತ್ತದೆ. ಇದಕ್ಕೆ ಪ್ರಮಾಣ, ಮಾನಸಸ್ಮೃತಿ. ಗೀತಾಭಾಷ್ಯ, ಪ್ರಮೇಯದೀಪಿಕಾ, ತತ್ವಪ್ರಕಾಶಿಕಾ, ಇವುಗಳಲ್ಲಿ ಇರುತ್ತವೆ. ಇತಿ ಪ್ರಾಣಾಗ್ನಿ ವಿದ್ಯಾ:-

## ಅಥಸ್ಥೂಲಬಿಂಬಪ್ರತಿಬಿಂಬವಿದ್ಯಾ

ಹೃದಯದಲ್ಲಿ ಶ್ರೀಹರಿಯು ಆತ್ಮ, ಅಂತರಾತ್ಮ ಎಂಬ ಎರಡು ರೂಪದಿಂದ ಇರುತ್ತಾನೆ ಆತ್ಮೆಂದರೆ ಸ್ಥೂಲಬಿಂಬ ಜೀವಗೆ ಅಭಿಮುಖನಾಗಿರುತ್ತಾನೆ. ಅಂತರಾತ್ಮ ಎಂದರೆ ಜೀವಗೆ ಚೇಷ್ಟ ಗಳನ್ನು ಮಾಡುತ್ತಾನೆ. ಜೀವನದೇಹದಲ್ಲಿ ಇರುತ್ತಾನೆ. ಜೀವ ಎಂತಹಮುಖ ಇರುತ್ತಾನೋ ಅದೇಮುಖವಾಗಿರುತ್ತಾನೆ. ಈಎರಡು ರೂಪಗಳು ವಂದಕ್ಕೊಂದು ಎದುರು ಬಿದುರಾಗಿ ಇರುತ್ತವೆ. ಜೀವಸತ್ಕರ್ಮಫಲವನ್ನು ಪ್ರೀತಿಯಿಂದ ಸ್ವೀಕಾರಮಾಡುತ್ತಾನೆ. ಆಸತ್ಕರ್ಮಫಲವನ್ನು ಅಪ್ರೀತಿಯಿಂದ ಸ್ವೀಕರಿಸುತ್ತಾನೆ. ಪೂರ್ಣನಾದಂಥವನಿಗೆ ಅನುಭೋಗೋಪ ಯೋಗ್ಯ ವಾಗದೇ ಇದ್ದಾಗ್ಯೂ ಸ್ವಾಮಿತ್ವದಿಂದ ಸ್ವಾಧೀನಕ್ಕೆ ಸ್ವೀಕಾರ ಎಂತ ತಿಳಿಯಬೇಕು.

## ಅಥ ಜಠರಾಗ್ನಿಘೋಷವಿದ್ಯ

ಜಠರಾಗ್ನಿಯಲ್ಲಿದ್ದ ಅಗ್ನಿನಾಮಕ ವೈಶ್ವಾನರನನ್ನು ವಾಯುದೇವರು ಅಗ್ನಿರೂಪದಿಂದ ಅವಿಚ್ಛಿನ್ನವಾದ ಘೋಷರೂಪದಿಂದ ಸ್ತೋತ್ರಮಡುತ್ತಾರೆ. ಕಿವಿಮುಚ್ಚಿಕೊಂಡರೆ ಸರ್ವದೇವರಿಗೂ ಆ ಘೋಷ ಕೇಳಿಸುತ್ತದೆ. ಈ ಘೋಷವನ್ನು ಯಾರು ಕೇಳುವುದಿಲ್ಲವೋ, ಅವರು ಶೀಘ್ರದಲ್ಲಿ ದೇಹಬಿಟ್ಟು ಉತ್ಕ್ರಾಂತಿಯನ್ನು ಹೊಂದುತ್ತಾರೆಂದು ತಿಳಿಯಬೇಕು. ಈ ವಿಷಯವನ್ನು ಯಾರು ತಿಳಿಯುತ್ತಾರೋ ಆ ಪುರುಷನು ಇದೇ ಘೋಷರೂಪ ಸ್ತೋತ್ರದಿಂದ ಶ್ರೀಹರಿಯನ್ನು ಸ್ತೋತ್ರಮಡಿ ಶ್ರೀಹರಿಯನ್ನು ಹೊಂದುತ್ತಾನೆ. ಇತಿ ಜಠರಾಗ್ನಿ ಘೋಷಾವಿದ್ಯಾ:

## ಅಥ ದೇಹ ರಥವಿದ್ಯಾ

ಈ ಸ್ಥೂಲದೇಹವು ವಿಷ್ಣುವಿಗೆ ರಥವು. ಸೂರ್ಯನು ಆತನಪತ್ನಿಯಿಂದ ಛಾಯಾದೇವಿಯು ನೇತ್ರದ್ವಯಗಳಲ್ಲಿ ಕೆಂಪುವಾಹನಾಶ್ವಗಳ ರೂಪದಿಂದ ಇದ್ದಾರೆ. ಚಂದ್ರನು ತ್ವತ್ಪತ್ನಿಯಾದ ರೋಹಿಣಿಯೊಂದಿಗೆ ಕಿವಿಗಳ ಪಾರ್ಶ್ವಗಳಲ್ಲಿ ಬಿಳಿಯಬಣ್ಣದ ವಾಜಿರಾಶ್ವಗಳಾಗಿದ್ದಾರೆ. ವಾತ್ಸಾಸನದಲ್ಲಿ ಉಮಾದೇವಿ ಕುದುರೆಗಳ ಹಗ್ಗವಾಗಿರುತ್ತಾಳೆ. ಮನಸ್ಥಾನದಲ್ಲಿದ್ದ ಶಿವನು ಆಹಗ್ಗವನ್ನು ಹಿಡಿದು ನಡಿಸುತ್ತಾ ಸಾರಥಿಯಾಗಿಹಾನೆ. ರಥದಲ್ಲಿ ಅಶ್ವಮುಖನಾಗಿ ಶ್ರೀಕೃಷ್ಣ ಜ್ಞಾನಸ್ವರೂಪನಾದಕಾರಣ ಪ್ರಾಣಮಯನಾದ ವಾಯುಕೂತಿರುತ್ತಾನೆ. –ಅಶ್ವ ವಕ್ತ್ರನಾಗಿ ಆರಥದಲ್ಲಿ ಕೂತು ಇರುತ್ತಾನೆ.ಇವರಿಬ್ಬರಿಗೂ ಅಶ್ವಿನೌ ಎಂತಹೆಸರು. ಇತಿ ದೇಹರಥ ವಿದ್ಯಾ:

## ಅಥ ನಾಡಿ ವಿದ್ಯಾ

ವೃಷಣ ಗುದ ಇವುಗಳ ನಡುವೆ ಗೆಣಸಿನಗಡ್ಡೆ ಯಂತೆ ದುರಕ್ಕೆ ಎರಡು ಬೆರಳು ಎತ್ತರ ವಾಗಿ ನಾಲ್ಕು ಬೆರಳು ಅಗುಲವಾಗಿ ದೇಹಾಧಾರಭೂತ ವಾಗಿದ್ದು ಸಮಸ್ತನಾಡಿಗಳಿಗೂ ಆಶ್ರಯಭೂತವಾಗಿದೆ. ನಡುವ ದೊಡ್ಡದಾದ ಒಂದುಗಡ್ಡೆಇದೆ. ಅದಕ್ಕೆ ಮೂಲಾಧಾರವೆಂದು ಹೆಸರು. ಇದರ ಮಧ್ಯಭಾಗದಲ್ಲಿ ಸುಷುಮ್ನ ಎಂಬ ನಾಡಿಯು ಮೇಲಕ್ಕೆ ನೆಟ್ಟಗೆ ಹೊರಟು ಬ್ರಹ್ಮರಂಧ್ರ ಪರಿಯಂತರ ಸೂಕ್ಷ್ಮರೂಪದಿಂದ ಹೋಗಿ ಇದೆ. ಇದಕ್ಕೆ ಬಿದುರು ಕೊಳವೆಯಂತೆ ನಡುವೆ ತೂತು ಇದೆ. ಇದು ಬ್ರಹ್ಮದೇವರ ವರವಾಗಿ ಕೆಂಪುವರಣ ವಿಶಿಷ್ಟವಾಗಿರುತ್ತದೆ. ಅಲ್ಲಿದೆ ಅಲ್ಲಿರಕ್ತವರ್ಣನಾಗಿ ನಾರಾಯಣನಿರುತ್ತಾನೆ. ಇದೆ ಸರಸ್ವತಿನದಿ ಇದಕ್ಕೆ ನಾಲ್ಕು ದಿಕ್ಕು ಗಳಿಂದಲೂ ನಾಲ್ಕು ಅಂಶನಾಡಿಗಳು ಹತ್ತಿಕೊಂಡಿವೆ.

1. ಪೃಷ್ಠಭಾಗದಲ್ಲಿ ವಜ್ರಿಕಾನಾಡಿ ಇದೆ. ಅದು ಎಳಿಹಸಿರುಬಣ್ಣ ವುಳ್ಳದ್ದು.

2. ಅದರ ಎಡಭಾಗದಲ್ಲಿ ಆರ್ಯಮೆಂಬ ನಾಡಿ ಇದೆ. ಅದಕ್ಕೆ ಇಡಾನಾಡಿ ಎಂತಲು ಹೆಸರು. ಅಲ್ಲಿ ನೀಲವರ್ಣ ವಿಶಿಷ್ಠ ಅನಿರುದ್ಧನಿರುತ್ತಾನೆ.

3. ಅದರ ಮುಂಭಾಗದಲ್ಲಿ ಪ್ರಕಾಶಿನಿ ಎಂಬ ನಾಡಿ ಇದೆ. ಇದಕ್ಕೆ ಧಾರಿಣಿ ನಂದಿನಿ ಎಂಬ ಹೆಸರುಗಳು ಉಂಟು. ಅದರಲ್ಲಿ ಸ್ಫಟಿಕವರ್ಣವುಳ್ಳ ವಾಸುದೇವನು ಇರುತ್ತಾನೆ.

4. ಅದರ ದಕ್ಷಿಣಭಾಗದಲ್ಲಿ ವೈಧೃತನಾಡಿ ಇರುತ್ತದೆ. ಅದಕ್ಕೆ ಪಿಂಗಳ ಎಂತಲೂ ಹೆಸರು. ಇದು ಸೂರ್ಯ ತಾಪವಾದದ್ದು. ಅಲ್ಲಿ ಪೀತವರ್ಣ ಉಳ್ಳಸಂಕರುಷಣ ನಿರುವನು. ಇದೇಯಮುನಾ ನದಿ. 1.ಇಡಾ; 2.ವಜ್ರಿಕ; 3.ಪಿಂಗಳ; 4.ಪ್ರಕಾಶಿನಿ. ಈ ನಾಲ್ಕು ನಾಡಿಗಳಲ್ಲಿ ಈಕ್ರಮದಿಂದ "ಓಂಭೂ–ಓಂಭುವಃ–ಓಂಸ್ವಾಃ= ಓಂಭೂರ್ಭುವಸ್ವಾಃ" ಎಂಬುವ ವ್ಯಾಹೃತಿಗಳು. ಅದಕ್ಕೆ ಪ್ರತಿಪಾದ್ಯರಾದ ಅನಿರುದ್ಧ,ಪ್ರದ್ಯುಮ್ನ, ಸಂಕರುಷಣ, ವಾಸುದೇವಾದಿ ಚತುರ್ಮೂರ್ತಿಗಳನ್ನು, ಕ್ರಮದಿಂದ ಇರುತ್ತಾರೆ. ಬಲಭಾಗದಲ್ಲಿ ಇರುವ ಪಿಂಗಳಾನಾಡಿಯು ಹೃದಯದವರೆಗೂ ಬಂದು ಅಲ್ಲಿಂದಾ ಸುಷುಮ್ನ ನಾಡಿಯ ಹಿಂಭಾಗ ಹೊಂದಿಕೊಂಡು 500 ಶಾಖಾಗಳಿಂದ ಎಡಕಿವಿಯಪರಿಯಂತರ ಹೋಗಿ ಇದೆ.

5. ಅದರ ಎಡಭಾಗದಲ್ಲಿರುವ ಇಡಾನಾಡಿಯು, ಪಿಂಗಳನಾಡಿಯಂತೆ ಹೃದಯದವರೆಗು ಬಂದು ಅಲ್ಲಿಂದ ಸುಷುಮ್ನ ನಾಡಿಯ ಮುಂಭಾಗದಲ್ಲಿ

ಹೊಂದಿಕೊಂಡು ಬಲಭಾಗಕ್ಕೆ 500 ಶಾಖೆಗಳಾಗಿ ಬಲಕಿವಿಯಪರಿಯಂತ ಹೋಗಿ ಇದೆ. ಇದಕ್ಕೆ ಗಂಗಾನದಿಯು ಮಧ್ಯದಲ್ಲಿರುವ ಸುಷುಮ್ನಾನಾಡಿಯು, ಈಗಂಗಾಯುಮುನಾ ಸರಸ್ವತಿನದಿಗಳು ಹೃದಯಸ್ಥಾನದಲ್ಲಿ ಸಂಗಮ ವಾಗಿರುವುದರಿಂದ ಹೃದಯಾಸ್ತ ಪ್ರಯಾಗಕ್ಷೇತ್ರ ವೆಂದು ತಿಳಿದು ಅಲ್ಲಿರುವ ಹರಿಧ್ಯಾನದಲ್ಲಿ ಮುಳುಗಿದ್ದಾರೆ, ಮಾನಸ ಸ್ನಾನದ ಫಲ ಬರುವುದು. ಸುಷುಮ್ನಾಕ್ಕೆ ಬಲಭಾಗಕ್ಕೆ 36000 ಸೂಕ್ಷ್ಮ ನಾಡಿಗಳುಇವೆ. ಅದರಲ್ಲಿ ಆಯುಸ್ಸಿಗೆ ನಿಯಾಮಕ ದೇವತಿಗಳಾಗಿ, ಪುರುಷರಿಗೆ ಆಯುಷ್ಯ ಕೊಡತಕ್ಕವನಾದ ಪರಮಾತ್ಮನ ಪುರುಷರೂಪಗಳು ಇದೆ. ಸುಷುಮ್ನಕ್ಕೆ ಎಡಭಾಗ ದಲ್ಲಿ ಸೂಕ್ಷ್ಮ ನಾಡಿಗಳು 36000 ಅವುರಾತ್ರಿ ನಿಯಾಮಕರೂಪಗಳಾಗಿ ಸ್ತ್ರೀಯರಿಗೆ ಆಯುಷ್ಯ ಕೊಡತಕ್ಕ ಪರಮಾತ್ಮನ ರೂಪಗಳಾಗಿರುತ್ತವೆ. ಈ 72000 ನಾಡಿ ಬೃಹತಿಸಹಸ್ರ ಶೃತಿಗತವಾದ (36000ಪು.ರೂಪಗ) ವರಣಗಳಿಂದ ಪ್ರತಿಪಾದ್ಯವಾಗಿರುತ್ತದೆ. ಆಋಕ್ಕಿನ ಆಚ್ವರ್ಣ(ಅಚ್ಚು) ಗಳಿಂದ ಪ್ರತಿಪಾದ್ಯವಾದವು 36000 ಸ್ತ್ರೀರೂಪಗಳು. ಆಯಸ್ಸಿನ (ಹಲ್ವರ್ಣ) ಹಲ್ಲುವರಣ ಗಳಿಂದ ಪ್ರತಿಪಾದ್ಯವಾದವು. ಈ 72000 ನಾಡಿಗಳಿಗೆ 'ಪುರಾ' ಎಂತ ಹೆಸರು ಉಂಟು. ಶ್ರೀಹರಿಯು ಇಂದುನಾಮಕನಾಗಿ ಅವುಗಳಲ್ಲಿ ಪ್ರವಿಷ್ಟನಾಗಿ ಅವುಗಳ ಭುಕ್ತಪಸಾಧಕಗಳ ಸಾರವನ್ನು ತೆಗೆದು ಆ ನಾಡಿಗಳ ರಕ್ಷಣೆ ಮಾಡುತ್ತಾನೆ. ಈ ಭಗವದ್ರೂಪಗಳನಾಮಗಳನ್ನು ತಿಳಿಯಲು ಸಾಧ್ಯವಿಲ್ಲ.

| ಸಂಖ್ಯೆ | ಸಾನಾಡಿಗಳು | ಸ್ತ್ರೀಪುರುಷ ನಾಡಿಗಳು. |
|---|---|---|
| 01 | 24000 | ನಾಡಿಗಳು ಗುದದಲ್ಲಿರುತ್ತವೆ.ಅದರಲ್ಲಿ 12000 ಪುರುಷ ನಾಡಿಗಳು ಬಲಭಾಗದಲ್ಲಿ, 12000 ಸ್ತ್ರೀನಾಡಿಗಳು ಎಡಭಾಗದಲ್ಲಿ |
| 02 | 28000 | ನಾಡಿಗಳು ಮಧ್ಯದೇಹದಲ್ಲಿರುತ್ತವೆ.ಅದರಲ್ಲಿ 14000 ಪುರುಷ ನಾಡಿಗಳು ಬಲಭಾಗದಲ್ಲಿ, 14000 ಸ್ತ್ರೀನಾಡಿಗಳು ಎಡಭಾಗದಲ್ಲಿ |
| 03 | 8000 | ನಾಡಿಗಳು ಬಾಹುಗಳಲ್ಲಿರುತ್ತವೆ.ಅದರಲ್ಲಿ 4000 ಪುರುಷ ನಾಡಿಗಳು ಬಲಭಾಗದಲ್ಲಿ, 4000 ಸ್ತ್ರೀನಾಡಿಗಳು ಎಡಭಾಗದಲ್ಲಿ |

| | | |
|---|---|---|
| 04 | 12000 | ನಾಡಿಗಳು ಶಿರಸ್ಸಿನಲ್ಲಿರುತ್ತವೆ.ಅದರಲ್ಲಿ 6000 ಪುರುಷ ನಾಡಿಗಳು ಬಲಭಾಗದಲ್ಲಿ, 6000 ಸ್ತ್ರೀನಾಡಿಗಳು ಎಡಭಾಗದಲ್ಲಿ |
| ಒಟ್ಟು | 72000 | |

ಅಂತು 72000 ಅವಯವಗಳಲ್ಲಿ ಭಗವದ್ರೂಪಗಳನ್ನು, ವ್ಯಾಪಾರಗಳನ್ನು, ನಾಡಿಗಳನ್ನು ತಿಳಿದು ವಂದುಪ್ರಾಣಿಗೆ ಕಿಂಚಿತಾದರು ಆಹುತಿ ಕೊಟ್ಟರೆ 36000 ದಂಪತಿ ಭೋಜನ ಮಾಡಿಸಿದ ಫಲಬರುತ್ತದೆ. ಈ ಸುಷುಮ್ನ ನಾಡಿಗೆ 12 ಸ್ಕಂಧ ನಾಡಿಗಳುಂಟು, ಅವು ಶರೀರದ

ನವದ್ವಾರಗಳಲ್ಲಿರುತ್ತದೆ. ಅದರ ವಿವರ:

| ಸಂಖ್ಯೆ | ಸ್ಕಂಧನಾಡಿಗಳು | ಇರುವ ಸ್ಥಳ | ಯಾವನದಿ |
|---|---|---|---|
| 01 | ಇಡಾಎಂಬುವ ನಾಡಿ ಮೂಲದಿಂದ ಬಂದ ಇಡಾನಾಡಿ ದಶೆಯಿಂದ ಪ್ರತ್ಯೇಕವಾದದ್ದು. ಸುಷುಮ್ನಾದಿಂದ ಹೊರಟು ಇರುತ್ತದೆ. | ಬಲಕಿವಿ | ಗಂಗಾನದಿ |
| 02 | ಪಿಂಗಳಾ ಮೂಲದಿಂದ ಹೊರಟ ಪಿಂಗಳಾ ನಾಡಿಯಿಂದ ಪ್ರತ್ಯೇಕವಾದದ್ದು. ಸುಷುಮ್ನಾ ನಾಡಿಯಿಂದ ಹೊರಟು ಇರುತ್ತದೆ. | ಎಡಗಿವಿ | ಯಮುನಾ ನದಿ |
| 03 | ಹಸ್ತಿನಿ ಇದು ಸುಷುಮ್ನಾದಿಂದ ಹೊರಟು ಇರುತ್ತದೆ. | ಎಡಗಣ್ಣು | ಸಿಂಧೂನದಿ |
| 04 | ಗಾಂಧಾರಿ ಸುಷುಮ್ನದಿಂದ ಹೊರಟು ಇರುತ್ತದೆ. | ಬಲಗಣ್ಣು | ಕಾವೇರಿನದಿ |
| 05 | ಲಂಬೂಸಾ ಸುಷುಮ್ನಾದಿಂದ ಹೊರಟಿದೆ. | ಬಲಮೂಗು | ತಾಂಬ್ರಪರ್ಣಿನದಿ |
| 06 | ಮದ್ಯೆಂಬುವನಾಡಿ ಸುಷುಮ್ನಾದಿಂದ ಹೊರಟಿದೆ. | ಎಡಮೂಗು | ಗೋಮತಿನದಿ |

| | | | |
|---|---|---|---|
| 07 | ಸರಸ್ವತಿ ಸುಷುಮ್ನಾದಿಂಡ ಹೊರಟಿದೆ. | ವದನದಲ್ಲಿ | ಗಂಡಿಕಾನದಿ |
| 08 | ನಂದಾಎಂಬುವನಾಡಿ ಸುಷುಮ್ನಾದಿಂದ ಹೊರಟಿದೆ. | ಸ್ತ್ರೀಪುರುಷರ ವುಪಸ್ತದಲ್ಲಿ | ಕೃಷ್ಣವೇಣಿ |
| 09 | ವಾರುಣಿ | | ಗೋದಾವರಿ |
| 10 | ಪೂರ್ಣಾ | — | ಪಯಸ್ವಿನಿ |
| 11 | ಶಂಬಿನಿ | ಗುದಸ್ಥಾನ | ತಮಸಾ |
| 12 | ಕುಮುದಿನಿ | | ನರ್ಮದಾ |

ಹೀಗೆ ಅನುಸಂಧಾನ ಮಾಡುವುದರಿಂದ ಆಯಾಸ್ಥಾನಸ್ಪರ್ಶ ಮಾಡುವುದರಿಂದ ಆಯಾ ನದಿಗಳಸ್ನಾನದ ಫಲಬರುತ್ತದೆಂದು ತಿಳಿಯಬೇಕು. ಈನಾಡಿಗಳಿಗೆ ಕೇಶವಾದಿ ದಾಮೋದರ ಪರಿಯಂತರ 12 ಭಗವದ್ರೂಪಗಳು ಕ್ರಮದಿಂದ ಇರುತ್ತವೆ. ಉತ್ಕ್ರಾಂತಿ ಚಿಂತನಕ್ರಮ ಇದೀ ಪ್ರಕಾರ ತಿಳಿಯಬೇಕು.

1. ಮೂಲಧಾರಗಳು ನಾಡಿಗೆ ಇರುವ 500ಶಾಖಾದಿಗಳು ವಾಮಕರ್ಣದಲ್ಲಿ ಇರುತ್ತದೆ. ಅದಕ್ಕೆ ದಕ್ಷಿಣಾಯನ ಎಂತಹೆಸರು. ಅವುಗಳಲ್ಲಿ ಸೂರ್ಯನಕಿರಣಗಳು ವ್ಯಾಪಿಸಿಕೊಂಡು ಇರುತ್ತವೆ. ಇದೇ ದಕ್ಷಿಣಾಯನಮಾರ್ಗ. ಇದಕ್ಕೆ ಧೂಮ್ರಮಾರ್ಗವೆಂತಲು, ಪಿತೃಮಾರ್ಗವೆಂತಲು ಹೆಸರು.

ಈ ದಕ್ಷಿಣಾಯನ ಮಾರ್ಗದಿಂದ ನಿತ್ಯಸಂಸಾರಿಗಳಿಗೂ ತಮೋ ಯೋಗ್ಯರಿಗೂ ಉತ್ಕ್ರಾಂತಿ ಪ್ರಮಾಣ ಉಂಟಾಗುವುದು.

2. ಮೂಲ ಇಡಾನಾಡಿಗೆ ಇರುವ 500 ಶಾಖಾನಾಡಿಗಳು ದಕ್ಷಿಣಕರ್ಣದಲ್ಲಿ ಇರುತ್ತವೆ. ಇದಕ್ಕೆ ಉತ್ತರಾಯಣ ಎಂತ ಹೆಸರು. ಅವುಗಳಲ್ಲಿ ಸೂರ್ಯನಕಿರಣಗಳು ವ್ಯಾಪಿಸಿದೆ. ಇದೇ ಉತ್ತರಾಯಣ ಮಾರ್ಗ ಇದಕ್ಕೆ ಅರ್ಚಿರಾದಿಮಾರ್ಗ, ದೇವಯಾನವೆಂತಲೂ ಹೆಸರು. ಉತ್ತರಾಯಣ ಮಾರ್ಗದಿಂದ ಉತ್ಕ್ರಾಂತಿ ಹೊಂದಿದ ಜೀವರು ಅರ್ಚಿರಾದಿಲೋಕವೆಂದರೆ ಜನೋಲೋಕದಲ್ಲಿರುತ್ತಾರೆ. ಅವರಿಗೆ ಮತ್ತೆ ಕರ್ಮಭೂಮಿಯಲ್ಲಿ ಪುನರ್ಜನ್ಮವೆಂಬುವುದು ನಿರ್ಭದಿಂದ ಬರಲಾರದು.

3. ಸುಷುಮ್ನನಾಡಿಯಿಂದ ಉತ್ಕ್ರಾಂತಿ ಹೊಂದಿಹೋಗುವ ಮಾರ್ಗಕ್ಕೆ ಬ್ರಹ್ಮಯಾನ ಎಂತ ಹೆಸರು. ಈಮಾರ್ಗದಿಂದ ಮೋಕ್ಷಸಾಧನವು ಪೂರ್ತಿಯಾಗಿ ಪ್ರಾರಬ್ಧಾನುಭವ ಮಾಡುವ ಜೀವರು ತಮ್ಮ ಯೋಗಸಾಮರ್ಥ್ಯದಿಂದ ಮನಸ್ಸು

ಪರಮಾತ್ಮನಲ್ಲಿ ಇಟ್ಟು ತತ್ವಗಳಿಗೂ, ತತ್ವಾಭಿಮಾನಿದೇವತೆಗಳಿಗೂ ಲಯಚಿಂತನೆಮಾಡಿ ಬಿಂಬರೂಪಿಯಾದ ಶ್ರೀಹರಿಯಿಂದಲು ಪ್ರಾಣರಿಂದಲೂ ಕೂಡಿಕೊಂಡು ಸುಷುಮ್ನಮಾರ್ಗದಿಂದಲೂ ಹೋಗಿ ಬ್ರಹ್ಮರಂಧ್ರದಿಂದ ಉತ್ಕ್ರಾಂತಿ ಹೊಂದಿ ಬ್ರಹ್ಮದೇವರ ಸತ್ಯಲೋಕದಲ್ಲಿ ವಾಸವಾಗಿದ್ದು ಆತನಕೂಡಾ ಮೋಕ್ಷಕ್ಕೆ ಹೋಗುತ್ತಾರೆ. ಇವರೇ ಪ್ರತೀಕಾಲಂಬನಜೀವರು. ಅಪ್ರತೀಕಾಲಂಬನರಾದ ವ್ಯಾಪ್ತೋಪಾಸಕರು ಇದೇಮಾರ್ಗದಿಂದ ಹೊರಟು ಸತ್ಯಲೋಕ ಅತಿಕ್ರಮಿಸಿ ವೈಕುಂಠಲೋಕ ಭೂಭಾಗದಲ್ಲಿದ್ದು ಕಾಲಬಂದಾಗ್ಯೆ ಬ್ರಹ್ಮನಿಂದ ಕೂಡಿ ಮೋಕ್ಷಕ್ಕೆ ಹೋಗುತ್ತಾರೆ. ಬ್ರಹ್ಮಯಾನದವರು ಪುನಃ ಜನ್ಮಕ್ಕೆ ಬರುವುದಿಲ್ಲ. ಈಮೂರುಮಾರ್ಗವನ್ನು ತಿಳಿದಜೀವರು ಉತ್ತಮಬುದ್ಧಿ ಉಳ್ಳವರಾಗಿ ಮುಕ್ತಿ ಮಾರ್ಗವನ್ನು ಹೊಂದುತ್ತಾರೆ. ಇತಿನಾಡಿವಿದ್ಯಾ:

## ಅಥ ಪದ್ಮ ವಿದ್ಯಾ

1. **ಮೂಲಾಧಾರಚಕ್ರ** : ಇದು ಸುಷುಮ್ನ ಮೂಲಭಾಗದಲ್ಲಿ ಕುಂಡಲೀ ಸರ್ಪಾಕಾರವಾಗುತ್ತದೆ. ಇದಕ್ಕೆ ಸ್ಥಾನನಿಯಾಮಕ ಅನಿರುದ್ಧಮೂರ್ತಿ. ಸಪ್ತಮರುತ್ತುಗಳು ಅಲ್ಲಿ ಅಪಾನವಾಯುವು ಸಂಚಾರಮಾಡುತ್ತಿರುತ್ತಾನೆ. ಇಲ್ಲಿ ಉಪಾಸನಾ ಮಾಡಿಸಿಕೊಳ್ಳುವವನು ಅನಿರುದ್ಧಮೂರ್ತಿ. ಅಲ್ಲಿ ತತ್ವಾಭಿಮಾನಿಯಾಗಿ ಸ್ವಾಯಂಭುವು ಮನು ಇರುತ್ತಾನೆ. ಈಚಕ್ರದಮ್ಯಾಲೆ ಕೆಂಪು ಬಣ್ಣವುಳ್ಳ 5 ಪದ್ಮಗಳು ಇವೆ. ಅಲ್ಲಿ ಅನಿರುದ್ಧಾದಿ ಪಂಚಮೂರ್ತಿಗಳು ಪ್ರತಿ ಪದ್ಮಕ್ಕೂ ಇವೆ. ಕೆಳಗಿನ ನಾಲ್ಕುದಳದ ಪದ್ಮದಲ್ಲಿ ಕ್ರಮದಿಂದ ನಾಲ್ಕುವೇದಗಳು ಇರುತ್ತವೆ. ಹಾಗೂ ಸೋಮ,ಬುಧ, ಗುರು, ಶನಿಗಳು, ಇರುತ್ತಾರೆ. "ರ,ಲ,ವ,ಶ," ಈ ಅಕ್ಷರಗಳಲ್ಲಿ ಉತ್ಪನ್ನ ವಾಗುತ್ತವೆ. ಪ್ರತಿ ಪದ್ಮದಲ್ಲಿ ಒಂದೊಂದು ತ್ರಿಕೋಣಾಗ್ನಿ ಮಂಡಲಗಳುಂಟು. ಇದೇ ಭೂಲೋಕವು.

2. ನಾಭಿಚಕ್ರ ಇದರಲ್ಲಿ 6 ದಳಗಳುಳ್ಳ ಪದ್ಮಗಳು ಉಂಟು. ಈಪದ್ಮಗಳು ಕೆಂಪು ಬಣ್ಣ ಉಳ್ಳವು. ತುದಿಗೆ ಸ್ವಲ್ಪ ನೀಲವರ್ಣವಾಗಿರುತ್ತವೆ. ಅಲ್ಲಿ 1.ಜಾಂಬವತಿ; 2.ಕಾಳಿಂದಿ; 3.ಮಿತ್ರವಿಂದ; 4.ನೀಲ; 5.ಭದ್ರ; 6.ಲಕ್ಷಣ; ಎಂಬ ಷಣ್ಮಹಿಷಯರು ಆರುದಳಗಳಲ್ಲಿ ಅಭಿಮಾನಿಗಳಾಗಿ ಇರುತ್ತಾರೆ. ಗಣಪತಿಯು ಸರ್ವದಳಗಳಿಗು ಅಭಿಮಾನಿಯಾಗಿ ವಿಶ್ವನಾಮಕ ಭಗವಂತನ ಉಪಾಸನಮಾಡುತ್ತಾನೆ. ಇದಕ್ಕೆ ಪ್ರದ್ಯುಮ್ನ ನಿಯಾಮಕ ರೂಪ. ಸಪ್ತಮರುತ್ತರು ಸಮಾನವಾಯು ಇರುತ್ತಾರೆ. ಆ ಕಮಲದ ಬುಡದಲ್ಲಿ ಆತುಕೊಂಡು ವಾಮನಮೂರ್ತಿ ಕೂತಿರುತ್ತಾನೆ. ಈತನು ಪ್ರಾಣವಾಯುವನ್ನು ಊರ್ಧ್ವಕ್ಕೆ ಅಪಾನವಾಯು ಅಧೋಭಾಗಕ್ಕೆ ಕಳಿಸುತ್ತಾನೆ.

ಈತನನ್ನು ವಿಶ್ವದೇವತೆಗಳು ಉಪಾಸನೆ ಮಾಡುತ್ತಾರೆ. ಆರುದಳಗಳಿಗೆ "ಪ,ಫ,ಬ,ಭ,ಮ,ಯ" ಅಕ್ಷರಗಳಿವೆ. ಇದೇಭುವರ್ಲೋಕವು. ಪ್ರತಿ ಪದ್ಮ ಷಟ್ಕೋಣವಾಯು ಮಂಡಲ ಉಂಟು. ಈಪದ್ಮದಲ್ಲಿ ಅನಿರುದ್ಧಾದಿ ಪಂಚ ಮೂರ್ತಿ ಗಳಿವೆ. "ಯಂ" ಎಂಬುವ ಬೀಜದಿಂದ ಪಾಪ ಪುರುಷನನ್ನು ಶೋಷಿಸಬೇಕು.

## ಅಷ್ಟದಳಕಮಲ

3. ಹೃದಯಚಕ್ರಮಂಡಲದಲ್ಲಿ ಕೆಂಪುವರ್ಣ ಉಳ್ಳ ಅಷ್ಟದಳಗಳುಳ್ಳ ಪದ್ಮಗಳು 5 ಇರುವುದು. ಅನಿರುದ್ಧಾದಿ ಪಂಚಮೂರ್ತಿಗಳು ಸರ್ವಪದ್ಮದಲ್ಲೂ ವ್ಯಾಪಿಸಿವೆ. ಅಲ್ಲಲ್ಲಿ ತ್ರಿಕೋಣಾಗ್ನಿ ಮಂಡಲಗಳು ಉಂಟು. ಪ್ರಾಣವಾಯುಗಳ ಸಹಿತ ಸಪ್ತಮರುತರು ಪ್ರತಿ ಪದ್ಮದಲ್ಲು ಇರುತ್ತಾರೆ. 8 ದಳಗಳಲ್ಲಿ ಅಷ್ಟವಸುಗಳು, ಅಷ್ಟ ದಿಕ್ಪಾಲಕರುಗಳು ಅಭಿಮಾನಿಗಳಾಗಿ ಇರುತ್ತಾರೆ. ಅವರು ತಮ್ಮಬಿಂಬರೂಪವನ್ನು ಉಪಾಸನಮಾಡುತ್ತಾರೆ.

| ಸಂಖ್ಯಾ | ದಿಕ್ಪಾಲಕರು | ಬಿಂಬಮೂರ್ತಿ | ಸಂಖ್ಯಾ | ದಿಕ್ಪಾಲಕರು | ಬಿಂಬಮೂರ್ತಿ |
|---|---|---|---|---|---|
| 01 | ಇಂದ್ರ | ಉಪೇಂದ್ರ | 02 | ಅಗ್ನಿ | ಭಾರ್ಗವ |
| 03 | ಯಮ | ಶ್ರೀರಾಮ | 04 | ನಿಋತಿ | ಜನಾರ್ಧನ |
| 05 | ವರುಣ | ಮತ್ಸ್ಯ | 06 | ಪ್ರವಹವಾಯು | ಹಯಗ್ರೀವ |
| 07 | ಕುಬೇರ | ಕಲ್ಕಿ | 08 | ಈಶಾನ್ಯ | ಶ್ರೀನಾರಸಿಂಹ |

ಈಪದ್ಮಕ್ಕೆ ಸಂಕರುಷಣ ನಿಯಾಮಕ ತ್ರಿಕೋಣಾಗ್ನಿಮಂಡಲದಲ್ಲಿ "ರಂ" ಎಂಬುವ ಅಗ್ನಿಬೀಜ ದಿಂದ ಪಾಪಪುರುಷ ಕಲಿಯನ್ನು ದಹನ ಮಾಡಬೇಕು. "ಡ,ಢ,ಣ,ತ,ಥ,ದ,ಧ,ನ" ಈ ಅಕ್ಷರಗಳು ಪ್ರತಿದಳದಲ್ಲಿ ಒಂದೊಂದರಂತೆ ಇದೆ. ಈಅಷ್ಟದಳಗಳಲ್ಲಿ ಅಷ್ಟಭುಜ ಲಕ್ಷ್ಮೀ ನಾರಾಯಣನು ಗರುಡಾರೂಢನಾಗಿ ಶಂಖ,ಚಕ್ರ,ಗದಾ,ಪದ್ಮ,ಧನಸ್ಸು, ಬಾಣ,ಖಡ್ಗ, ಚಮಟ ಗಳೆಂಬ 8 ಆಯುಧಗಳನ್ನು ಹಿಡಿದು ಅಷ್ಟದಳಗಳಲ್ಲು ಪಹರೆ ತಿರುಗುತ್ತಾನೆ. ಈಪರಮಾತ್ಮ ದಾವದಿಕ್ಕಿಗೆ ಬಂದರೆ ಆದಿಗಭಿಮಾನಿಯು ಮಡುವ ಕಾರ್ಯ ದಾವುದೆಂದರೆ.

1. ಇಂದ್ರದಿಕ್ಕಿಗೆ ಬಂದರೆ ಐಶ್ವರ್ಯಾಪೇಕ್ಷ: 2. 1.ಅಗ್ನಿದಿಕ್ಕಿಗೆ ಬಂದರೆ ಆರೋಗ್ಯಾಕಾಂಕ್ಷೆ.

3. ಯಮದಿಕ್ಕಿಗೆ ಬಂದರೆ ಧರ್ಮಾಕಾಂಕ್ಷೆ: 4. ನಿಋತಿ ದಿಕ್ಕಿಗೆ ಬಂದರೆ ಪಾಪಕಾರ್ಯಾಪೇಕ್ಷ:

5. ವರುಣದಿಕ್ಕಿಗೆ ಬಂದರೆ ರಸಾಪೇಕ್ಷ: 6. ವಾಯುದಿಕ್ಕಿಗೆ ಬಂದರೆ ಜ್ಞಾನೋತ್ಪತ್ತಿ:

7. ಕುಬೇರನದಿಕ್ಕಿಗೆ ಬಂದರೆ ಧನಾಕಾಂಕ್ಷೆ: 8. ಈಶಾನ್ಯದಿಕ್ಕಿಗೆ ಬಂದರೆ ವೈರಾಗ್ಯ:

ಇದೇ ಪಿಂಡಾಂಡದಲ್ಲಿ ಸ್ವರ್ಲೋಕವು. ಹೃದಯಮಧ್ಯಕಮಲವು ಸುಷುಮ್ನಕ್ಕೆ ಪ್ರತ್ಯೇಕವಾಗಿ ತುಂಬುವಡೆದು ಊರ್ಧ್ವನಾಳಗಳಾಗಿರುತ್ತದೆ. ಆದಕಾರಣ ಪೂರ್ವನಾಳ ಎಂತ ಹೆಸರು. ಆ ಕಮಲದಕೋಣೆಗಳು ಮುದುರಿ ಇರುವುದರಿಂದ ಆಕಮಲವು ಅಧೋಮುಖವಾಗಿರುತ್ತದೆ. ಅದಕ್ಕೆ ಮೂವತ್ತೆರಡು (32) ಕೇಸರಗಳುಂಟು. ಇದಕ್ಕೆ ಸಂಪುಟ ಎಂದು ಹೆಸರು. ಅದರಲ್ಲಿ ನಾರಾಯಣನಾಮಕ ಬಿಂಬರೂಪ ಇರುತ್ತದೆ. ಈತಗೆ ಸ್ಥೂಲಬಿಂಬನೆಂದು ಹೆಸರು. ಈತನ ಅಪರೋಕ್ಷವೇ ಸ್ಥೂಲಾಪರೋಕ್ಷ ವೆನಿಸುತ್ತದೆ.

4. ಹೃದಯದಮ್ಯಾಲೆ ವಕ್ಷಸ್ಥಳದಲ್ಲಿ ದ್ವಾದಶದಳವುಳ್ಳ ಕಮಲವಿದೆ. ಇದು ಮುತ್ತಿನವರ್ಣ ಉಳ್ಳದ್ದು. ಸೂರ್ಯಕಾಂತಿ ಹೂವಿನಂತೆ ಎದುರುಬಿದುರಾಗಿ ಇವೆ. ಅದರಲ್ಲಿ 12ಮಂದಿ ಸೂರ್ಯರು ಇದ್ದಾರೆ. ಶಕ್ತ,ಪ್ರತಿಷ್ಠಾದಿ 12ಕಳಾಮೂರ್ತಿಗಳು ಉಂಟು. ಈ 12ರಲ್ಲಿ 11 ವಿಷ್ಣುವಿನ ಸ್ತ್ರೀರೂಪಗಳು 1 ಪುರುಷರೂಪವು. ಚತುರ್ಮುಖಬ್ರಹ್ಮ, ಆತನಲ್ಲಿ ಪುರುಷ ನಾಮಕಭಗವಂತನಿರುತ್ತಾನೆ. ಅದಕ್ಕೆ ರುದ್ರ ಅಭಿಮಾನಿ ನರಸಿಂಹನನ್ನು ಉಪಾಸನಾ ಮಾಡು ತ್ತಿರುತ್ತಾನೆ. ಇಲ್ಲಿನಿಯಾಮಕರೂಪಹರಿ "ಕ,ಖ,ಗ,ಘ,ಙ,ಚ,ಛ,ಜ,ಝ,ಞ,ಟ,ಠ". ಈದಳಗಳಲ್ಲಿ ಹುಟ್ಟುತ್ತವೆ. ಇದೆ ಪಿಂಡಾಂಡದಲ್ಲಿ ಮಹರ್ಲೋಕ. ಇಲ್ಲಿ ಅನಿರುದ್ಧಾದಿ ಪಂಚಮೂರ್ತಿಗಳಿವೆ.

5. ಕಂಠದೊಳಗೆ ಹೊಂದಿಕೊಂಡು ಶುಕ್ಲವರ್ಣ ದೇತನಾದ 16 ದಳುಳ್ಳ ಪದ್ಮಉಂಟು. ಉದಾನವಾಯುವಿನಿಂದ ಸಹಿತಸಪ್ತಮರುತರು ಷೋಡಶಕಳಾಭಿಮಾನಿ ದೇವತೆಗಳು, ಚಂದ್ರನು ಅಲ್ಲಿ ಅಭಿಮಾನಿಗಳಾಗಿ ದಧಿವಾಮನನ್ನು ಉಪಾಸನಮಾಡುತ್ತಾರೆ. ಅಲ್ಲಿ ಶೇಷನು ಅಭಿಮಾನಿಯಾಗಿ ಸಂಕರುಷಣನನ್ನು ಉಪಾಸನಾ ಮಾಡುತ್ತಾನೆ. ಅಲ್ಲಿ ಸ್ಥಾನ ನಿಯಾಮಕನು ನಾರಾಯಣನು. ಅಲ್ಲಿ ಅಕಾರಾದಿ ಷೋಡಶ ವರ್ಣಗಳು ಹುಟ್ಟುತ್ತವೆ. ಈಪದ್ಮವು ಪೂರ್ವಪದ್ಮದಂತೆ ಸೂರ್ಯಕಾಂತಿಹುವ್ವಿನಂತೆ ಎದುರಾಗಿರುತ್ತದೆ.

6. ಕಂಠಕ್ಕೆ ಹೊಂದಿ ಮೇಲ್ಭಾಗದಲ್ಲಿ ಇಂದ್ರಯೋನಿಯೆಂಬುವ ಪ್ರದೇಶದಲ್ಲಿ ಶ್ವೇತವರ್ಣ ದಂತಿರುವ ದ್ವಿದಳಪದ್ಮಗಳು 5 ಉಂಟು. ಅಲ್ಲಿ ಅನಿರುದ್ಧಾದಿ ಪಂಚಮೂರ್ತಿಗಳು ಉದಾನ ವಾಯು ಸಹಿತ ಸಪ್ತಮರುತ್ತರು ಇರುತ್ತಾರೆ. ಅಲ್ಲಿ ವರ್ತುಲವಾದ ಚಂದ್ರಮಂಡಲಗಳು ಐದು ಇವೆ. ಈ ದಳಗಳಿಗೆ ಬ್ರಹ್ಮವಾಯುಗಳು ಅಭಿಮಾನಿಗಳು. ತಮ್ಮ ತಮ್ಮ ಭಾರ್ಯರಸಹಿತ ಇರುತ್ತಾರೆ. ಇವರುಗಳು ಹಂಸ ರೂಪಿ ಪರಮಾತ್ಮನನ್ನು ಉಪಾಸನಾ ಮಾಡುತ್ತಾರೆ. ಉದಾನ ವಾಯುವು ಅನ್ನೋದಕಗಳಿಗೆ ಅವಕಾಶಪ್ರದನಾಗಿ ಇರುತ್ತಾನೆ. ಇಲ್ಲಿ "ಷ,ಸ" ಎಂಬ ಎರಡಕ್ಷರಗಳು ಹುಟ್ಟುತ್ತವೆ.ಇದೇಪಿಂಡಾಂಡದಲ್ಲಿ ಜನೋಲೋಕವು. ಅನಿರುದ್ಧಾದಿ ಪಂಚ ಮೂರ್ತಿಗಳು ಈಐದು ಪದ್ಮಗಳಲ್ಲಿ ಇದ್ದಾರೆ. ಸ್ಥಾನಾಭಿಮಾನಿ ಲಕ್ಷ್ಮಿನಾರಾಯಣರು, ಶೇಷ ದೇವರು ದಳಾಭಿಮಾನಿಗಳಾಗಿದ್ದು ಸಂಕರುಷಣನನ್ನು ಉಪಾಸನಾ ಮಾಡುತ್ತಾರೆ.

7. ಭ್ರೂಮಧ್ಯದಲ್ಲಿ ಶುಕ್ಲವರ್ಣದ ನಾಲ್ಕುದಳವುಳ್ಳೈದು ಕಮಲಗಳುಇವೆ. ಅನಿರುದ್ಧಾದಿ ಪಂಚ ಮೂರ್ತಿಗಳು ವ್ಯಾನವಾಯುವುಸಹಿತ ಪಂಚಮರುಇದ್ದಾರೆ. ಪ್ರತಿಪದ್ಮದಮೇಲು ತ್ರಿಕೋಣಾಗ್ನಿ

ಮಂಡಲ ಉಂಟು. ಪ್ರತಿಪದ್ಮದಲ್ಲು ನಾಲ್ಕುವೇದಗಳು ಉಂಟು. ಇದು ಪಿಂಡಾಂಡದೊಳಗೆ ತಪೋಲೋಕವು. ಇದಕ್ಕೆ ಗರುಡಅಭಿಮಾನಿಯಗಿ ಶ್ರಕೃಷ್ಣನ ಉಪಾಸನಾ ಮಾಡುತ್ತಾನೆ. ಸ್ಥಾನ ನಿಯಾಮಕನು ಶ್ರೀಕೃಷ್ಣನಿದ್ದಾನೆ.

8. ಶಿರಸ್ಸಿನಲ್ಲಿ ಹನ್ನೆರಡು ದಳವುಳ್ಳ ಶ್ವೇತಪದ್ಮಗಳು ಐದುಉಂಟು. ಒಂದು ಮಧ್ಯದಲ್ಲಿ, ನಾಲ್ಕು ಚತುರ್ದಿಕ್ಕಿನಲ್ಲಿ ಇರುತ್ತವೆ. ಕರ್ಣಿಕದಲ್ಲಿ ಐದುವರ್ತುಲಚಕ್ರ ಮಂಡಲಗಳು ಇವೆ. ಅಲ್ಲಿ ಸಪ್ತಮರುತ್ತರು ಅನಿರುದ್ಧಾದಿ ಪಂಚಮೂರ್ತಿಗಳು ಇವೆ.

9. ಶಿರಸ್ಸಿನಲ್ಲಿ ಹನ್ನೆರಡು ದಳದ ಮೇಲೆ 12 ಅಂಗುಲ ಪರಿಮಿತಿ ಮ್ಯಾಲೆ ಸುಷುಮ್ನದ ಅಗ್ರ ಭಾಗದಲ್ಲಿ ಛತ್ರಾಕಾರವಾಗಿ ಸಹಸ್ರದಳುಳ್ಳ ಒಂದುಕಮಲವಿದೆ. ಅಲ್ಲಿ ಸ್ಥಾನ ನಿಯಾಮಕನಾದ ತುರಿಯನಾಮಕ ವಾಸುದೇವನು ಅಲ್ಲಿರುವ ಓಂಕಾರಕ್ಕೆ ಪ್ರತಿಮಾದ್ಯನಾಗಿರುತ್ತಾನೆ. ಇದು ವಜ್ರವರ್ಣೋಪೇತವಾದದ್ದು. ವಿಶ್ವಾದಿ ಸಹಸ್ರ ಮೂರ್ತಿಗಳು ಅಲ್ಲಿಇವೆ. ವಾಯುದೇವರು ಸಹಸ್ರ ರೂಪತೆಗೆದುಕೊಂಡು ಅವರನ್ನು ಸ್ತೋತ್ರಮಾಡುತ್ತಾರೆ. ಅಲ್ಲಿ"ಮ" ಎಂಬುವ ಅಮೃತ ಬೀಜ ಜಪದಿಂದ ಅಮೃತ ವೃಷ್ಠಿಯಾಗಿ ಶರೀರ ರಕ್ಷಣವಾಗುತ್ತದೆ. ಇಲ್ಲಿ ಬ್ರಹ್ಮದೇವರು ಅಭಿಮಾನಿಯಾಗಿ ಶ್ರೀರಂಗನಾಥನನ್ನು ಉಪಾಸನಾ ಮಾಡುತ್ತಾರೆ. ಈ ಪದ್ಮವಲ್ಲದೆ

ಶರೀರದಲ್ಲಿ 32 ಪದ್ಮಗಳು ಇವೆ. ಅಲ್ಲಿರುವ ಭಗವದ್ರೂಪಗಳನ್ನು ಬಂಧಮೋಚವಾಗುತ್ತವೆ. ಇತಿ ಪದ್ಮವಿದ್ಯಾ:-

## ಅಥ ಮಧು ವಿದ್ಯಾ

ಶರೀರದಲ್ಲಿರುವ ಇಡಾಪಿಂಗಳಾಂಶಗಳಾದ ಸಹಸ್ರನಡಿಗಳಲ್ಲಿ ಸೂರ್ಯಕಿರಣಗಳು ಇರುತ್ತವೆ. ಅಲ್ಲಿಯು ಇದೇ ಅನಿರುದ್ಧಾದಿ ಪಂಚಮೂರ್ತಿಗಳು ನಿಯಾಮಕರಾಗಿರುತ್ತಾರೆ. ಆಕಿರಣಗಳು ಪಂಚವರ್ಣವುಳ್ಳವು. ಮಂಡಲಕ್ಕೆ ಪೂರ್ವಭಾಗದಲ್ಲಿ ಇನ್ನೂರು ಕಿರಣಗಳು ಇರುತ್ತವೆ. ಅವು ಗಳಲ್ಲಿ ವಾಸುದೇವ ರೂಪವಿರುತ್ತದೆ. ಆರೂಪಕ್ಕೆ ಮಧು ಎಂದುಹೆಸರು. ಆತನು ಋಗ್ವೇದ ಪ್ರತಿಪಾದ್ಯನು. ಅಗ್ನಿಯೋಪಾದಿಲಿ ಕಾಂತಿಉಳ್ಳವನು. ಅಷ್ಟಾವಸುಗಳಿಂದಲೂ, ಅಗ್ನಿಯಿಂದಲೂ, ಉಪಾಸನೆಮಾಡಿಸಿಕೊಳ್ಳುತ್ತಾನೆ. ಸೂರ್ಯಮಂಡಲದ ದಕ್ಷಿಣಭಾಗದಲ್ಲಿ ಇನ್ನೂರು ಕಿರಣಗಳು ಗೌರವರ್ಣ ಎಂದರೆ ಗೋಕ್ಷೀರ, ಶಂಖ ಇವುಗಳವರ್ಣದಂತಾ ವರ್ಣ ಉಳ್ಳವುದಾಗಿ ಇರುತ್ತವೆ. ಅವುಗಳಲ್ಲಿ ಮಧುನಾಮಕನಗಿ ಶುಕ್ಲವರ್ಣ ವಿಶಿಷ್ಠನಾಗಿ ಸಂಕರುಷಣನಿರುತ್ತಾನೆ. ಆತನನ್ನು ಹನ್ನೊಂದನೇಯ ರುದ್ರನಾದವನು, ವಾಯುಜೀವರನ್ನು ಮುಂದೆಮಾಡಿಕೊಂಡು ದಶರುದ್ರರು ಖಂಡೋಕ್ತ ಪ್ರಕಾರ ಉಪಾಸನಾ ಮಡುತ್ತಾರೆ. ಸೂರ್ಯಮಂಡಲದ ಪಶ್ಚಿಮದಲ್ಲಿ ಎಲೆಹಸರು ವರ್ಣ ಉಳ್ಳ ಪ್ರದ್ಯುಮ್ನನಿದ್ದಾನೆ. ಈತನನ್ನು ಸಾಮವೇದಾಭಿಮಾನಿಗಳು ಏಕಾದಶ ಸೂರ್ಯರುಗಳು ಉಪಾಸನಾಮಾಡುತ್ತಾರೆ. ದ್ವಾದಶಸೂರ್ಯನಾದ ವಿಷ್ಣುವು ಸಾಮ ನಾಮಕನಾಗಿ ಪ್ರದ್ಯುಮ್ನನಲ್ಲಿ ಸಂಶ್ಲೋಷತ್ವವನ್ನು ಹೊಂದಿರುತ್ತಾನೆ. ಸೂರ್ಯ ಮಂಡಲದ ಮುಕ್ತರಭಾಗದಲ್ಲಿ ನೀಲವರ್ಣಉಳ್ಳ ಇನ್ನೂರು ಕಿರಣಗಳುಇವೆ. ಅಲ್ಲಿ ಅಥರ್ವಣವೇದ. ಇತಿಹಾಸಮಹಾಪ್ರತಿಪಾದ್ಯನಾದ ನೀಲವರ್ಣ ಅನಿರುದ್ಧನಿರುತ್ತಾನೆ. ಈತನಲ್ಲಿ ಸೋಮನನ್ನು ಮುಂದೆಮಾಡಿಕೊಂಡು. 49ಜನ ಮರುತ್ತರು ಉಪಾಸನಮಾಡುತ್ತಾರೆ. ಸೂರ್ಯಮಂಡಲದ ಮಧ್ಯ ಭಾಗದಲ್ಲಿ ಪೀತವರ್ಣವುಳ್ಳ 200 ಕಿರಣಗಳು ಉರ್ಧ್ವಭಾಗದಲ್ಲಿರುತ್ತವೆ. ಅವುಗಳಲ್ಲಿ ಅನಂದ ವೇದಪ್ರತಿಪಾದ್ಯನಿಂದ ಉದಿತ ಸೂರ್ಯಪ್ರಭಾ ಸಮಾನನಾದ ನಾರಾಯಣ ನಿಯಾಮಕನಾಗಿರುತ್ತಾನೆ. ವೇದಾಭಿಮಾನಿಗಳಾದ ವಾಣಿ, ಬ್ರಹ್ಮ, ವಾರುಣಿ, ಶೇಷ, ಸೌಪರಣಿ, ಗರುಡ, ಇವರಿಂದ ಉಪಾಸ್ಯಮಾನನಾಗಿರುತ್ತಾನೆ. ಈಮಧುವಿದ್ಯಾ ಸಾಧನಉಪಾಸಕರು ದೇವಪದಕ್ಕೆ ಯೋಗ್ಯರೆಂದು ನಿಶ್ಚಯಿಸಬೇಕು. ಇತಿ ಮಧುವದ್ಯಾ:-

## ಅಥ ಸ್ಥೂಲಬಿಂಬೋಪಾಸನಾ

ಇನ್ನುಮೇಲೆ ಹಿಂದೆ ಹೇಳಿದ ಸ್ಥೂಲಹೃದಯಕಮಲದಲ್ಲಿರುವ ಸ್ಥೂಲಬಿಂಬಮೂರ್ತಿ ಉಪಾಸನಾ ಹೇಳಲ್ಪಡುವುದು. ಈಹೃದಯವೆಂಬುವುದು ಪರಬ್ರಹ್ಮನ ಪಟ್ಟಣವು. ಅದಕ್ಕೆ ಹದಿಮೂರುದ್ವಾರಗಳು ಉಂಟು. ಅವುಹೇಗೆಂದರೆ ಪೂರ್ವದಿಕ್ಕಿಗೆ ಮೂರುದ್ವಾರಗಳು. ಪ್ರಥಮದ್ವಾರದಲ್ಲಿ ರಮಾದೇವಿಯರು ದ್ವಾರಪಾಲಕರು. ಅದರಮುಂದಿನ ದ್ವಿತೀಯದ್ವಾರದಲ್ಲಿ ಚಕ್ಷರಾಭಿಮಾನಿಯಾದ ಆದಿತ್ಯನಾಮಕ ಪ್ರಾಣವಾಯುದೇವರು. ಬಲಕ್ಕೆ ಎಡಕ್ಕೆ ದ್ಯುನಾಮಕ ಭಾರತಿ ದ್ವಾರಪಾಲರು. ಅದರಮುಂದಿನ ದ್ವಾರದಲ್ಲಿ ಜಯ ವಿಜಯರು. ದಕ್ಷಿಣದಿಕ್ಕಿಗೆ ಮೂರುದ್ವಾರಗಳು. ಪ್ರಥಮದ್ವಾರದಲ್ಲಿ ಶ್ರೀದೇವಿಯು. ಅದರ ಮುಂದಿನ ಎರಡನೇ ದ್ವಾರದಲ್ಲಿ ವ್ಯಾನನಾಮಕನಾದ ಶ್ರೋತ್ರಾಭಿಮಾನಿ ಯಾದ ಸೋಮನಾಮಕ ವಾಯುದೇವರು ಬಲಕ್ಕೆ ಎಡಕ್ಕೆ ದಿಗ್‌ನಾಮಕಭಾರತಿ ದ್ವಾರಪಾಲಕರು. ಅದರ ಮುಂದಿನ ಮೂರನೇ ಬಾಗಿಲಲ್ಲಿ ಬಲಕ್ಕೆ ಬಲ,ಪ್ರಬಲರು, ದ್ವಾರಪಾಲಕರು. ಪಶ್ಚಿಮದಿಕ್ಕಿಗೆ ಮೂರುದ್ವಾರಗಳು ಪ್ರಥಮದಲ್ಲಿ ಶ್ರೀದೇವಿ ಅದರ ಮುಂದಿನ ಎರಡನೇ ಬಾಗಿಲಲ್ಲಿ ವಾಗಿಂದ್ರಿಯಾಭಿಮಾನಿ ಯಾದ ಅಪಾನ ನಾಮಕವಾಯುದೇವರು ಬಲಕ್ಕೆ ಎಡಕ್ಕೆ ಪೃಥ್ವೀನಾಮಕ ಭಾರತಿ. ದ್ವಾರಪಾಲಕರು. ಮೂರನೇ ಬಾಗಿಲಲ್ಲಿ ಕುಮುದ ಕುಮದಾಕ್ಷ ದ್ವಾರಪಾಲಕರು. ಉತ್ತರದಿಕ್ಕಿಗೆ ಮೂರು ದ್ವಾರಗಳು ಅದರಲ್ಲಿ ಪ್ರಥಮದ್ವಾರದಲ್ಲಿ ಶ್ರೀದೇವಿ ಅದರಮುಂದಿನ ಬಾಗಿಲಲ್ಲಿ ಸಮಾನನಾಮಕನಾದ, ಮನೋಭಿಮನಿಯಾದ ಇಂದ್ರನಾಮಕ ವಾಯು ಬಲದಲ್ಲಿ ವಿದ್ಯುನ್ನಾಮಕಳಾದ ಭಾರತೀ ದೇವಿ, ಅದರ ಮುಂದಿನ ಮೂರನೇದ್ವಾರದಲ್ಲಿ ನಂದ ಸುನಂದರು. ಊರ್ಧ್ವಕ್ಕೆ ವಂದೇ ದ್ವಾರಉಂಟು. ಆಕಾಶನಾಮಕಳಾದ ಶ್ರೀದೇವಿಯು ದ್ವಾರಪಾಲಕಳು. ಉದಾನನಾಮಕ ವಾಯುದೇವರು ಬಲಕ್ಕೆ, ಎಡಕ್ಕೆ ವಾಗ್‌ನಾಮಕಳಾದ ಭಾರತೀದೇವಿಯು ದ್ವಾರಪಾಲಕಳು. ಇದೇಪ್ರಕಾರ ಶ್ವೇತದ್ವೀಪ, ವೈಕುಂಠ,ಅನಂತಾಸನ ಈಮೂರು ಪಟ್ಟಣಗಳಿಗೂ, ದ್ವಾರಗಳನ್ನು ದ್ವಾರಪಾಲಕರನ್ನು ತಿಳಿಯಬೇಕು. ಇಂಥಾ ಹೃದಯಾಖ್ಯ ಪಟ್ಟಣದಮಧ್ಯದಲ್ಲಿ ಸುಷುಮ್ನ ನಾಡಿಎಂಬ ಮಹಡಿಯಲ್ಲಿ ಪದ್ಮ ಉಂಟು. ಆಪದ್ಮವಿಸ್ತಾರ ಹಿಂದೆ ಹೇಳಿ ಇದೆ. ಈಪದ್ಮಕ್ಕೆ "ದಹರಾ" ಅಂತಹೆಸರು. ಈಪದ್ಮದ ಕರ್ಣಿಕಾದಲ್ಲಿ ಶ್ರೀದೇವಿಯನ್ನು ಕರ್ಣಿಕಾನಾಳದಲ್ಲಿ ಭೂ ದೇವಿಯನ್ನು ಮೂಲದಲ್ಲಿ ದುರ್ಗಾದೇವಿಯನ್ನು ಚಿಂತಿಸಬೇಕು. ಪೂರ್ವಾದಿಕ್ರಮದಿಂದ 8 ದಳಗಳಲ್ಲಿ ಶಕ್ತ್ಯಾದಿ ದ್ವಾದಶಮೂರ್ತಿಗಳನ್ನು ಚಿಂತಿಸಬೇಕು. ಹೇಗೆಂದರೆ–

| ಸಂಖ್ಯೆ | ದಿಕ್ಕುಗಳು | ಶಕ್ತ್ಯಾದಿ ದ್ವಾದಶಮೂರ್ತಿಗಳು |
|---|---|---|
| 01 | ಪೂರ್ವದಳಗಳಲ್ಲಿ | ಶಕ್ತಿ; ಪ್ರತಿಷ್ಟ |
| 02 | ಆಗ್ನೇಯ | ಸಂವಿತು |
| 03 | ದಕ್ಷಿಣ | ಪೂರ್ಣಿ; ಪ್ರಕೃತಿ |
| 04 | ನಿಋತಿ | ಕಾಳಾ |
| 05 | ಪಶ್ಚಿಮ | ಶದ್ಧಾ; ಮತಿ |
| 06 | ವಾಯುವ್ಯ | ನಿಮ್ಯ |
| 07 | ಉತ್ತರ | ಯಾಮಾ; ಎಲ |
| 08 | ಈಶಾನ್ಯ | ಪುರುಷ |

ಈ ಪ್ರಕಾರ ಹನ್ನರಡು ರೂಪಗಳಲ್ಲಿ 10ಸ್ತ್ರೀರೂಪಗಳು 11ನೇಯದು ಕಾಲ ಎಂಬುವ ಪುರುಷ ನಾಮಕ ಸ್ತ್ರೀರೂಪ.12ನೆಯದು ಪುರುಷಎಂಬುವ ಹೆಸರುಳ್ಳಚತುರ್ಮುಖಬ್ರಹ್ಮನು. ಅರಣಿ ಕಾದಮೇಲೆ ಅಂಗುಷ್ಟಪ್ರಮಾಣದಿಂದ ಪ್ರಾಜ್ಞನಿರುತ್ತಾನೆ.ಆತಗೆ ಅಗ್ರೇಶನೆಂದುಹೆಸರು. ದೇವರು ಗಳಿಗೆ ಸುಷುಪ್ತಿಕೊಡುವನು.ಆಹೃದಯಾಕಾಶದಲ್ಲಿ ಸುತ್ತುಮುತ್ತುವ್ಯಾಪಿಸಿಕೊಂಡು ಜೀವಾಧಾರ ನಾಗಿ 'ಪರ'ಶಬ್ದ ವಾಚ್ಯನಾಗಿ ಪುರುಷನಾಮಕ ವಾಸುದೇವ ನಿರುತ್ತಾನೆ. ಈತಗೆ ಪ್ರಾದೇಶ ನೆಂದುಹೆಸರು.ಕರ್ಣಿಕಾಮೂಲದಲ್ಲಿ ಅಂಗುಷ್ಟಪ್ರಮಾಣದಿಂದ ವಿಷ್ಣುವುಮೂಲೇಶನೆಂಬ ಹೆಸರಿ ನಿಂದ ಕೂತುಇರುತ್ತಾನೆ. ಈತಗೆ ವಿಜ್ಞಾನಾತ್ಮ ನೆಂದುಪ್ರಸಿದ್ಧಿ ಉಂಟು.ಈತಗೆ ಪ್ರತ್ಯಗಾತ್ಮನೆಂದು ಹೆಸರು. ಪ್ರತ್ಯಗಾತ್ಮ ಎಂದರೆ ಅಭಿಮುಖವಾಗಿರುವಾತ. ಈಮೂರು ರೂಪಗಳಿಗೂ 'ಹೃದಯ' ಎಂಬ ನಾಮ ಉಂಟು.

ಮೂಲೇಶನಪಾದದ ಮುಂದೆ, ಮೂಲೇಶಗೆ ಅಭಿಮುಖವಾಗಿ ಮುಖ್ಯ ಪ್ರಾಣನು ಕೃತಾಂಜಲಿಪುಟನಾಗಿ ಪೂರ್ವಾಭಿಮುಖನಾಗಿ ಕುಳಿತಿರುತ್ತಾನೆ. ಎಂದರೆ ಮೂಲೇಶ ಪಶ್ಚಿಮಕ್ಕೆ ಅಭಿಮುಖನಾಗಿಕೂತಿರುತ್ತಾನೆ. ಸಲಿಂಗಿಯಾದ ಜೀವನು ಮುಖ್ಯಪ್ರಾಣನಪಾದದ ಸಮೀಪ ದಲ್ಲಿ ಮುಖ್ಯಪ್ರಾಣನಂತೆ ಪೂರ್ವಾಭಿಮುಖನಾಗಿರುತ್ತಾನೆ. ಆ ಮುಖ್ಯ ಪ್ರಾಣನು ದಿನವಂದಕ್ಕೆ 21600 ಶ್ವಾಸರೂಪವಾದ 'ಹಂಸ'ಮಂತ್ರ ಜಪ ವನ್ನು ಮೂಲೇಶನಿಗೆ ಸಮರ್ಪಿಸಬೇಕು.

ಈ ಹೃತ್ಪದ್ಮಕರ್ಣಿಕಾದಲ್ಲಿ ಲಕ್ಷ್ಮಿರೂಪವಾದಂಥ ರತ್ನ ಖಚಿತ ವಾದಂಥ ಮಂಟಪಚಿಂತನೆ ಮಾಡಬೇಕು. ಅದರಲ್ಲಿ 12ಕೋಟಿಗಳುಳ್ಳ ಸೂರ್ಯಮಂಡಲ ವನ್ನು, ಅದರಮ್ಯಾಲೆ ವರ್ತುಲವಾದ ಸೂರ್ಯಮಂಡಲವನ್ನು, ಅದರಮ್ಯಾಲೆ ಶೇಷ ಪರ್ಯಂಕವನ್ನು, ಅದರಮ್ಯಾಲೆ ಲಕ್ಷ್ಮ್ಯಾತ್ಮಕವಾದ ಚಿತ್ತಾಸನವನ್ನು, ತಲೆದಿಂಬುಗಳನ್ನು, ಗಾದಿ ಗಳನ್ನು ಹಿತವಾದ ಹಾಸಿಕೆಗಳನ್ನು ಚಿಂತಿಸಬೇಕು. ಅದರಲ್ಲಿ ಬಿಂಬಮೂರ್ತಿ ನಾರಾಯಣ ನನ್ನು ಧ್ಯಾನಮಾಡಬೇಕು. ಆತಗೆ ಪರಮಾತ್ಮನೆಂದು ಹೆಸರು. ಈತ ಜೀವನಕಡೆಗೆ ಅಂದರೆ ಪಶ್ಚಿಮಾಭಿಮುಖನಾಗಿ ಬಲಮೊಗ್ಗಲು ಕೆಳಗೆ ಮಾಡಿಕೊಂಡು ಇರುತ್ತಾನೆ. ಶ್ವೇತದ್ವೀಪದಲ್ಲಿ ಶೇಷಶಾಯಿ ಆಗಿರುವ ವಿಷ್ಣುವಿಗೆ ಪರಿಯಂಕಬ್ರಹ್ಮನೆಂದು ಹೆಸರು. ಆತಗೂ ಈತಗೂ ಐಕ್ಯಚಿಂತನೆಮಾಡಬೇಕು. ಲೋಕಾರ್ಥಿಗಳು ಶಯನಮಾಡಿದ ಪರಿಯಂಕ ಬ್ರಹ್ಮನ ದರ್ಶನ ಅಗತ್ಯಮಾಡಬೇಕು. ಪೂಜಾಕಾಲದಲ್ಲಿ ಪ್ರಾಕೃತ ಪದಾರ್ಥಗಳಿಂದ ಪೂಜಾಮಾಡಬೇಕು. ಪ್ರಾಕೃತ ಪದಾರ್ಥಗಳಾವುದೆಂದರೆ ಮನಃ ಕಲ್ಪಿತ ವಾದ ವಾಸನಾಮಯ ಪುಷ್ಪಾದಿಗಳು. ಅವು ಪಂಚವ್ಯೂಹರೂಪಗಳಿಂದ. ಪಂಚನಾಮ ರೂಪಗಳಿಂದ ಯೋಜನಾಮಾಡಿದಂಥಾದ್ದು. ಯೋಜನಾ ಅಂದರೆ ಕೂಡಿಸುವುದು. ಈ ಮೋಚನಾಕ್ರಮ ಅತಿರಹಸ್ಯ ವಂದುಕಾರಣ. ವಿಸ್ತಾರವಾಗಿ ಹೇಳದೆ ವಟ್ಟು ತಾತ್ಪರ್ಯ ಹೇಳುತ್ತಾರೆ.

ಶ್ರೀಮದ್ವೇಶಾರ್ಪಣಮಸ್ತು.

## ಪ್ರಮೇಯಸಂಗ್ರಹ;

1. ಸೃಷ್ಟಿಕ್ರಮ.
2. ಪಂಚೀಕರಣ.
3. ಜಡಸೃಷ್ಟಿ.



84 ಎಂಭತ್ತುನಾಲ್ಕು ಲಕ್ಷ ವಿಧ ಸ್ತ್ರೀ.ಪುರುಷ ಪ್ರಕಾರಗಳು. ಮೂರುವಿಧ ಪರಮಾಣುಗಳು. ಅನಂತಾನಂತಸಂಖ್ಯ ಉಳ್ಳಾಂತವು. ಒಂದೊಂದು ಕೂಡಾ ಅನಂತಾನಂತ ಅಂಶಉಳ್ಳಂಥಾವು.

## ಜೀವಾಂತರ್ಯಾಮಿ ಬಿಂಬ ಪ್ರಕರಣ

1. ಚೇತನಾರೂಪನಾದ ಜೀವನಲ್ಲಿ, 2. ಚೇತನರೂಪರಾದ ರಮಾದೇವಿಯರು, 3. ರಮಾದೇವೇರಲ್ಲಿ ದೇವರು ಸೇರಿದ್ದಾರೆ. ಈ ಮೂರು ಮಂದಿ ವಂದೇ ಆಕಾರದಿಂದ ಇದ್ದಾರೆ. ಮೂರು ಮಂದಿ ಚೇತನರೇ. ಮೂರುಮಂದಿ ವಂದೇಕಾಲದಲ್ಲಿ ವಂದೇಕ್ರಿಯ ನಡೆಸುತ್ತಾರೆ. ಆದಕಾರಣ ಚೇತನದಲ್ಲಿ ಚೇತನನೇ ಐಕ್ಯ ಅಂತ, ಐಕ್ಯಚಿಂತನಾ ಯಾಕೆಮಾಡ ಕೂಡದು ಎಂದರೆ, ಜೀವನಲ್ಲಿ ರಮಾದೇವಿ ಸೇರೋಕಾಲಕ್ಕೆ ವಂದು ಅಂಶದಿಂದ ದೇಹ ಆವರ್ಕದಿಂದ ಸೇರಿದ್ದಾಳೆ. ದೇವಿದೇವಿಯರಲ್ಲಿ ದೇವರುಕೂಡಾ ವಂದುಆವರ್ಕ ಸೇರಿದ್ದಾನೆ. ಹಾಗ ಆವರ್ಕತಪ್ಪದೆಹೋದರೆ ಹೇಳಬಹುದು. ಆವರ್ಕ ಹೇಳೋನದರಿಂದ ವತಸ್ತಾಸ್ತಿತತ್ವಬಂತು. ಪರಕಾಲದಲ್ಲಿ ಕ್ರಿಯಾ ಮಾಡಿದರು ದೆವರು ತನ್ನಕ್ರಿಯಾ ಮಾಡಿ ರಮಾದೇವಿಯದ್ವಾರಾ ಜೀವನಿಂದ ಮಾಡಿಸುತ್ತಾನೆ. ಸೂಕ್ಷ್ಮಗಳಿಂದ ಕಾರಣ ಹೇಳೋದು ಕಷ್ಟ. ಹ್ಯಾಗೆಂದರೆ ಸಕ್ತಕಮಲಗಳನ್ನಿ ಇಟ್ಟುಬಂದು ಪ್ರಥಮಪತ್ರಪ್ರವೇಶ. ಕಾಲ, ಸ್ಥಿತಿ, ಲಯ ಪ್ರದೇಶಕಾಲೆಂದು ಹೇಳುವುದು. ಹ್ಯಾಗೆ ಸಾಧ್ಯವಿಲ್ಲವೋ ದೇವರ ವ್ಯಾಪಾರ–

## ದೇವರ ವಿವರ

ಹರಿಃ ಓಂ ವಂದೇವ್ಯಾಸಂ ಜಯತೀರ್ಥನುರೂನಪ । ರಾಘವೇಂದ್ರ ಗುರೂಂ ನತ್ವಾ ವಕ್ತೇಂದು ತತ್ವ ನಿರ್ಣಯಂ ॥

ಈಶಾಕಾಶದಲ್ಲಿ ವ್ಯಾಪಕವಾದಷ್ಟನ್ನಾದ ಪುರುಷನಾದ ಪ್ರಕಾಶ ರೂಪತ್ವನಾದ ನಾರಾಯಣನಿದ್ದಾನೆ. ಈಶಾರು ತಾಂಬ ವಂದು ಪ್ರದೇಶವುಂಟು. ರಮಾದೇವಿಯರಿಗೆ ಲಿಪ್ತವಾಗದೆ ಇದ್ದಂತ ಸ್ವಾಖ್ಯಪ್ರದೇಶ ಉಳ್ಳವನೆಂದು ಸಂಕರುಷಣೊಡೆಯರ ವ್ಯಾಖ್ಯಾನ. ಸರ್ವತ್ರವ್ಯಾಪಕ ನಾದವ. ಅಪರಿಚ್ಛಿನ್ನ ನಾದವ, ಅಂದರೆ ಪರಿಮಿತಿ ಇಲ್ಲದವ, ಪುರುಷಾಕಾರನಾದವ, ಪ್ರಕಾಶರೂಪನಾದವ. ನಾರಾಯಣ ಸಕಲವರ್ಣಾತೀತ, ಈತನಮಗೆ ಉಪದೇಶಮಾಳ್ಪ, ದೇಶ.ಕಾಲಮೀರಿ ತನಗೆ ತಾನೇ ಇಪ್ಪ. ವಾಜಿ,ಹಯಗ್ರೀವದಂತೆ ಅನಂತರೂಪಗಳು. ಅನಂತಶಬ್ದಕ್ಕೆ

ಅರ್ಥ. ಅನವಧಿಕ ಪರಿಮಾಣ. ನಾಶರಹಿತ ವಂದೇರೀತಿ ಇರತಕ್ಕವ ಗುಣಗಳು, ಅವಯವಗಳು, ಸಂಖ್ಯಾರಹಿತ ವಾದಂಥಾವು. ಅನಂತ ಎರಡು ಪ್ರಕಾರ: 1. ಅವಧಿ ಯುಕ್ತವಾದದ್ದು; 2. ಅನವಧಿಯುಕ್ತವಾದದ್ದು. ಲಕ್ಷ್ಮೀಮಯ ದೇವರು ಅನಂತ ಅವಧಿಯುಕ್ತ ವಾದದ್ದು. ದೇವರಅನಂತ ಅವಧಿಇಲ್ಲದೇ ಇದ್ದದ್ದು. ಚೇತನಾರೂಪ. ಇಂಥಾನಾರಾಯಣ ದೇವರ ತೇಜಸ್ಸು ಹೊರಟುಇದೆ. ಆತೇಜಸ್ಸಿನಲ್ಲಿ ಸರ್ವೇಂದ್ರಿಯಗಳ ಶಕ್ತಿ ಉಂಟು. ಆಕಾರಮಾತ್ರವಿಲ್ಲ. ಇದಕ್ಕೆ ಶೃತಿ "ಆಪಾದವಾಣಿಖ್ಯವನೋಶರಹಿತವಾಕ್ಯಂತ್ ಅಚಕ್ಷು; ಸಶ್ರು ಕರ್ಣೋರ್ತ್ಯಕರ್ಣಹ" ಅಂದರೆ ಕಣ್ಣಿಲ್ಲದೆನೋಡುವುದು; ಕಿವಿಇಲ್ಲದೆಕೇಳುವುದು; ಕೈಇಲ್ಲದೆ ತೆಗೆದುಕೊಂಬೋಣ; ಕಾಲಿಲ್ಲದೆನಡೆಯೋಣ; ಇಂಥಾ ಪ್ರಕಾಶ ಮತ್ತೊಂದರಲ್ಲಿ ಸೇರಿದರೆ "ಸಾಕಾರ' ವಾಗುತ್ತದೆ. ದಾವದರಲ್ಲಿ ಸೇರಿದೆ ಎಂದರೆ ಪ್ರಾಕೃತ ಅಪ್ರಾಕೃತ ಎಂಬ ಎರಡುವಿಧ ಜಡಗಳುಉಂಟು. ಇದಕ್ಕೆ ಪ್ರಮಾಣ" ಭಸಾರೋದ್ವಿವಿದುಯುಕ್ತ ಪ್ರಕೃತೋ ಅಪ್ರಾಕೃತೋ ಸ್ತದಂ'ಲೋಕದಲ್ಲಿ ಇರತಕ್ಕ ಪದಾರ್ಥಗಳು 'ಶುಭ ಅಶೂಭ' ಎಂತ ಎರಡುವಿಧ. ಶುಭ ಪದಾರ್ಥಗಳಾದುವು ದಾವುದು ಎಂದರೆ ಸರ್ವದಾಸಾರಭೂತವಾದದ್ದು. ಹೋಮದ್ರವ್ಯಗಳು. ಸರ್ವದಾಅಶುಭಪದಾರ್ಥಗಳು. ಉಳ್ಳಗಡ್ಡಿ ಮೊದಲಾದಪದಾರ್ಥಗಳು. ಅಪ್ರಾಕೃತ ಪದಾರ್ಥಗಳು ಮೂರು ಪ್ರಕಾರ ಇವೆ. ಶುಭ್ರವರ್ಣ. ರಕ್ತವರ್ಣ. ನೀಲವರ್ಣ. ಅಕ್ಕಿ ಮೊದಲಾದ ಸಾರ ಪದಾರ್ಥಗಳಲ್ಲಿ ಎರಡು ವಿಧ. 1.ಸಾರ; 2.ಅಸಾರ. ಪ್ರಾಕೃತಸಾರಪದಾರ್ಥಗಳಲ್ಲಿ, ಅಪ್ರಾಕೃತ ಸಾರದಪದಾರ್ಥಗಳು ಸೇರಿಇವೆ. ಗರುಡಪುರಾಣದಲ್ಲಿ 'ವೀರ್ಯಮಾಡತ್ತ ವೀರ್ಯಮಾನ್, ತದ್ವೀರ್ಯ ಮಹಾನ್ ಹರೇ ಸ್ವರೂಪ' ಇಂಥಾ ಅಪ್ರಾಕೃತವಾದ ಇಪ್ಪತ್ತುನಾಲ್ಕು ತತ್ವಾತ್ಮಕವನ್ನು, ಇಪ್ಪತ್ತು ತತ್ವಾತ್ಮಕವಾದ ಮೂಲ ಜಡಪ್ರಕೃತಿಯಲ್ಲಿ ಇಟ್ಟನು. ಎಂದು ಅರ್ಥ. ಆಮೂಲಜಡಪ್ರಕೃತಿ ವಂದುಸಾತ್ವಿಕ, ರಾಜಸ, ತಾಮಸ ಬೇಧದಿಂದ 84 ಲಕ್ಷವಿಧವಾದ ಆಕಾರುಳ್ಳಂಥಾದ್ದು. ಸಾತ್ವಿಕದಲ್ಲಿ 84 ಲಕ್ಷ. ರಾಜಸದಲ್ಲಿಯೂ ಅಷ್ಟ. ತಾಮಸದಲ್ಲಿಯೂ ಅಷ್ಟೆ. ಈಅಪ್ರಾಕೃತದಲ್ಲಿ ಮೂರು ಪ್ರಕಾರ. ದೇವರಸಂಬಂಧ ವಂದು. ರಮಾದೇವಿಯರಸಂಬಂಧ ವಾದುದು ವಂದು. ಜೀವಸಂಬಂಧವಾದುದು ವಂದು. ಜೀವರಸಂಬಂಧದವಳಗೆ, ಸಾತ್ವಿಕ, ರಾಜಸ. ತಾಮಸ. ವಂದೇಪ್ರಕಾರ. ಮೂಲಜಡಪ್ರಕೃತಿ ಆರಂಭಮಾಡಿಕೊಂಡು ಸಕಲಪದಾರ್ಥಗಳಲ್ಲಿ ಪರಮಾಣುಗಳು ಉಂಟು. ಆಪರಮಾಣುಗಳು ಅನಂತಾನಂತ ಅವಯವಗಳು ಉಳ್ಳಂಥಾದ್ದು. ಇದನ್ನು

ದೇವರು ಹೊರತು ಮತ್ತೊಬ್ಬರು ತಿಳಿಯಲರರು. "ವಿಷ್ಣು ಜಾನೇತಿ ನೇತರ" ಈಪರಮಾಣು ಗಳು ಕೂಡಾ ಸಾರವೇ. 84 ಲಕ್ಷವಿಧ ಸ್ತ್ರೀಪುರುಷಜಾತಿ

ಉಳ್ಳಂಥಾವು. ಅಂತಃ ಪರಮಾಣು ಗಳಲ್ಲಿ ಅವುಗಳ ಅಂಶಾಂಶಗಳಲ್ಲಿ ದೇವರ ಪ್ರಕಾಶ ಮೂಡಿಹುದರಿಂದ ದೇವರು 84 ಲಕ್ಷ ವಿಧ ಆಕಾರವುಳ್ಳವನಾದನು. ಶುಭ್ರವರ್ಣಕ್ಕೆ ಶುಭ್ರವರ್ಣರೂಪ. ನೀಲವರ್ಣಕ್ಕೆ ನೀಲವರ್ಣ ರೂಪ. ರಕ್ತವರ್ಣಕ್ಕೆ ರಕ್ತವರ್ಣರೂಪಗಳಾದವು. ಆಪ್ರಕಾಶದಲ್ಲಿ ಎಲ್ಲ ಇಂದ್ರಿಯುಗಳ ಶಕ್ತಿ ಇರುವುದುರಿಂದ. ಅತೀಂದ್ರಿಯುಗಳಿಂದ ಸಕಲವ್ಯಾಪಾರ ಮಾಡತಕ್ಕ ಶಕ್ತಿ ಉಂಟಾಯಿತು. "ಮುಚೇನ ಜೀವೇಶ ಶೃನೇರಾತಿ ಶಬ್ದಂನೇತ್ರೇಣ ಘ್ರಾಣಾತಿ ಸುಗಂಧಸಾರಂ". ಎಂದು ಬೃಹತ್ ಸಂಹಿತಾಪ್ರಮಾಣ ಇರುವುದರಿಂದ ಮುಖದಿಂದ ಶಬ್ದಕೇಳೋಣ, ನೇತ್ರದಿಂದ ಸಕಲ ಪದಾರ್ಥಗಳು ಚಿಂತನಮಾಡೋಣ ಇಂಥಾ ವಿರುದ್ಧವ್ಯಾಪಾರಗಳು ದೇವರ ಇಂದ್ರಿಯದಿಂದ ನಡೆಯುತ್ತವೆ. ಅನಂತಾನಂತ ತ್ರಿವಿಧವರ್ಣರೂಪಗಳಿಗೆ ಅನುಕೂಲವಾದ ವಸ್ತ್ರಾಭರಣಗಳಲ್ಲಿ ಆ ನಾರಾಯಣನು ಪ್ರವೇಶಮಾಡಿ ಸ್ವರೂಪಾಭರಣಗಳು ಎನಿಸಿಕೊಳ್ಳುವುದು. ಇಂಥಾ ತ್ರವಿಧ ವಾದವಸ್ತ್ರಾಭರಣಗಳಿಂದ ಯುಕ್ತವಾದ ಅನಂತಾನಂತ ತ್ರವಿಧರೂಪಗಳು ನವನಾರಿ ಕುಂಜರ ದಂತೆಕೂಡಿವೆ. ಪುರುಷರೂಪ, ಈ ಪುರುಷರೂಪದಬಲ ಭಾಗದಲ್ಲಿ ಪುರುಷರೂಪಗಳು ಎಡ ಭಾಗದಲ್ಲಿ ಸ್ತ್ರೀರೂಪಗಳುಸೇರಿವೆ.

ಇದರಂತೆ ರಮಾದೇವಿಯರು ಅವ್ಯಾಕೃತಾಕಾಶದಲ್ಲಿ ವ್ಯಾಪಕಳು, ಅಪರಿಚ್ಛಿನ್ನಳು. ಸ್ತ್ರೀರೂಪಳು. ಪ್ರಕಾಶರೂಪಳು. ಆ ರಮಾದೇವಿಯರ ತೇಜಸ್ಸು ಹೊರಟು ಅನಂತ ಅಂಶಗಳುಳ್ಳ ತ್ರಿವಿಧ ಅಪ್ರಾಕೃತ 84 ಲಕ್ಷವಿಧ ಸ್ತ್ರೀಪುರುಷಾಕಾರಗಳಿಂದ ಅನಂತಾನಂತ ಪರಮಾಣುಗಳಲ್ಲಿ ಪ್ರವೇಶಮಾಡಿದ ಕಾರಣ ರಮಾದೇವಿ ಅನಂತಾನಂತರೂಪಳಾದಳು. ಇವುಗಳಿಗೆ ಅನುಕೂಲಗಳಾದ ಅಪ್ರಾಕೃತ ತ್ರಿವಿಧ ವಸ್ತ್ರಾಭರಣಗಳಲ್ಲಿ ರಮಾದೇವೇರು ಪ್ರವೇಶ ಮಡುವುದರಿಂದ ಸ್ವರೂಪಾಭರಣಗಳಾದುವು. ಈತ್ರವಿಧವಸ್ತ್ರಾಭರಣಗಳಿಂದ ಕೂಡಿದ ಲಕ್ಷ್ಮೀ ದೇವಿಯು 84 ಲಕ್ಷಸ್ತ್ರೀಪುರುಷಾಕಾರಗಳಾದ ಅವಯಅಂಶಗಳುಳ್ಳ ಅನಂತನಂತ ರೂಪಗಳು ನವನಾರಿ ಕುಂಜರದಂತೆ ಕೂಡಿದ ರೂಪವೇ ಆಂಭ್ರಣೀರೂಪ.

ತ್ರಿವಿಧರಾದ ಅನಂತಾನಂತ ಸಂಖ್ಯಾಕರಾದ 84 ಲಕ್ಷವಿಧ ಸ್ತ್ರೀಪುರುಷ ಆಕಾರರಾದ ಪರಮಾಣುರೂಪರಾದ ಜೀವರುಗಳುಉಂಟೂ. ಇವರುಗಳಲ್ಲಿ ಇವರುಗಳಲ್ಲಿ ಮುಕ್ತಿಯೋಗ್ಯರು 5ವಿಧರು. 1.ಸಾಂಶರು; 2.ನಿರಂಶರು; 3.ಶುಭ್ರವರ್ಣರು ವಿಶಿಷ್ಠರು; 4.ದೇವರಲ್ಲಿನವವಿಧ ಭಕ್ತಿಉಳ್ಳವರು; 5.ಸರಿಯಾದ ನಿಶ್ಚಯಜ್ಞಾನ ಉಳ್ಳವರು. ಇಂಥಾ ಅನಂತಾನಂತ ಸ್ತ್ರೀಪುರುಷರು ಜೀವರುಗಳ

ಶುಭ್ರವರ್ಣಪ್ರಕಾಶಗಳು ಪ್ರತ್ಯೇಕ ಪ್ರತ್ಯೇಕ ವಬ್ಬ ವಬ್ಬ ಜೀವನಪ್ರಕಾಶ ತದಾಕಾರಗಳಾದ,ಅಪ್ರಾಕೃತ ಸ್ತ್ರೀಪುರುಷಾಕಾರಗಳಾದ ಪರ ಮಾಣುಗಳಲ್ಲಿ ಪ್ರವೇಶ ಮಾಡೋಣದರಿಂದ ಆಪ್ರಕಾರಗಳು, ಆಜೀವರುಗಳ ಆಕಾರಗಳಾದವು. ಸೋಮಾಧಿಕಪ್ರತಿಬಿಂಬಪ್ರಕಾಶರೂಪನು,ನಿರುಪಮಧಿಕ ಪ್ರತಿಬಿಂಬನುಜೀವನು. ಇದರಂತೆ ನಿತ್ಯಸಂಸಾರಿಗಜೀವರುಗಳುತ್ರಿವಿಧರು. ಭೂಪ್ರಾಚುರ್ಯರು; ಸ್ವರ್ಗಪ್ರಾಚುರ್ಯರು; ನಿರಯಪ್ರಾಚುರ್ಯರು. ಅಂತುಮೂರುವಿಧರು. ಇವರು ರಕ್ತವರ್ಣ ವಿಶಿಷ್ಟರು, ಮಿಶ್ರಜ್ಞಾನಿಗಳು, ಸುಲಕ್ಷಣರು. ದುರ್ಲಕ್ಷಣಯುಕ್ತರು. ಇವರುಗಳ ರಕ್ತವರ್ಣ ಪ್ರಕಾಶಗಳು. ರಕ್ತಪರಮಾಣುಗಳಲ್ಲಿ ಪ್ರವೇಶ ಮಾಡೋಣದರಿಂದ 84 ಲಕ್ಷವಿಧ ಸ್ತ್ರೀಪುರುಷಾಕಾರಗಳಾದ ಸೋಮಾಧಿಕಬಿಂಬರು. ನಿರಪಾಧಿಕಬಿಂಬರಾದರು. ಇದರಂತೆ ತಮೋಯೋಗ್ಯರು ನಾಲ್ಕು ಪ್ರಕಾರ. 1.ದೈತ್ಯರು; 2.ರಾಕ್ಷಸರು; 3.ಪಿಶಾಚರು; 4.ಮನುಷ್ಯಾಧಮರು. ಎಂಬುದಾಗಿ ನೀಲವರ್ಣ ವಿಶಿಷ್ಟರು. ಮಿಥ್ಯಾಜ್ಞಾನಿಗಳು. ದುರ್ಲಕ್ಷಣಯುಕ್ತರು. ಸುಖರೂಪರು. ದುಃಖಸಾಧನಾಧಿಕಾರಿ ಗಳು. ದುಃಖವೇ ಸುಖಸಾಧನವೆಂದು ತಿಳಿಯತಕ್ಕವರು. ಇವರುಗಳ ಪ್ರಕಾಶಗಳು ನೀಲ ವರ್ಣಪರಮಾಣುಗಳಲ್ಲಿಪ್ರವೇಶ ಮಾಡೋಣದರಿಂದ 84 ಲಕ್ಷ ವಿಧ ಸ್ತ್ರೀಪುರುಷಾಕಾರಗಳ ಆಕಾರಗಳಾದವು. ಇಲ್ಲುಸಹ ಸೋಮಾಧಿಕ ಪ್ರತಿಬಿಂಬರು ನಿರುಪಾಧಿಕ ಪ್ರತಿಬಿಂಬರೂ ಇದ್ದಾರೆ. ಪ್ರತಿಬಿಂಬ ಎಂದರೆ ಜೀವನು. ಸೋಮಾಧಿಕ ಪ್ರತಿಬಿಂಬೆಂದರೆ ಜೀವನೇ ನಿರುಪಾಧಿಕ ಪ್ರತಿಬಿಂಬನು ಜೀವನೇ. ವಬ್ಬನೇ ಎರಡು ರೂಪದಿಂದಇದ್ದಾನೆ. ಚೇತನಾ ರೂಪನಾಗಿ ಜೀವನಿರುಪಾಧಿಕ ಪ್ರತಿಬಿಂಬನೂ "ಸೋಪಾಧಿರನುಪಾದಿಶ್ಚ ಪ್ರತಿಬಿಂಬೋದ್ವಿ ದೇಹ್ಯಾಕೇ ಚೇತನ ಭಾಸರೂಪಜೀವ, ಪರಮಚೇತನೋ ಮೂಲಾ; ಪೂರ್ವೋಕ್ತವಾದ ಪುರುಷರೂಪನು,ತ್ರಿವರ್ಣಗಳಿಂದ ಯುಕ್ತವಾದ ಅನಂತಾನಂತ ಅಂಶಗಳಿಂದ ಯುಕ್ತ ಸ್ತ್ರೀ ಪುರುಷ ರೂಪಗಳಿಂದ ಪೂರ್ವೋಕ್ತ ಗಳಾದ ಲಕ್ಷ್ಮೀರೂಪಗಳಲ್ಲಿ ಪ್ರವೇಶ ಮಾಡುವ ನಾದನು. ಪರಮಪುರುಷನ ಸ್ವರೂಪ ಮಾಯಾಘಟಿತ ಪ್ರಕಾಶ ಪ್ರತಿಬಿಂಬಳು ಎಂತ ಗುರುಕಥಾಮೃತಸಾರ, ಅಂಶವ್ಯಾಪ್ತಿ, ಪ್ರಕಾಶವ್ಯಾಪ್ತಿ, ಸ್ವರೂಪವ್ಯಾಪ್ತಿಯಿಂದ ಸೇರಿದ್ದ ನಾದ ಕಾರಣ ಬಿಂಬರೂಪನು. ಇದರಂತೆ ಸ್ವರೂಪ ಪದಾರ್ಥಗಳಲ್ಲಿ, ಈಸತಾರೂಪದಿಂದ ಪ್ರವೇಶಮಾಡಿದ್ದಾನೆ. ಉಭಯರು ಚೇತನರು. ಆವರ್ಕದಿಂದ ಶೇರೋಣದರಿಂದ ಏಕಸ್ಥಾನ ಅಸ್ತಿತ್ವವೇ ಐಕ್ಯವಲ್ಲ. ಆವರ್ಕದ್ದೇಹ ಹೊಂದಿದರೆಐಕ್ಯಹೇಳಬಹುದು. ಆವರ್ಕ ಆವರ್ಕಇಲ್ಲದೆ ಇದ್ದಂತಾ ಪದಾರ್ಥವೇ ಇಲ್ಲವೆಂದು, ಗುರುಕಥಾಮೃತಸಾರದಲ್ಲಿ ಉಕ್ತವಾಗಿದೆ. ದೇವರು ಕೂಡಾ 'ಗುಣಮಾಯಾ

ಸಮಾವೃತ' ಎಂದು ಜಿತಂತೆಸ್ತೋತ್ರದಲ್ಲಿ ಇರೋಣದರಿಂದ ದೇವರಿಗೂ ವಂದು ಆವರ್ಕ ವಪ್ಪಿದಹಾಗಾಯಿತು. ದೇವರಿಗೂ ಆವರ್ಕಕ್ಕೂ ವಿಶೇಷಬೇಧ. ಅಪ್ರಾಕೃತಸಂಬಂಧ ಅನಂತಾನಂತ ಅಂಶಗಳುಳ್ಳ 84 ಲಕ್ಷವಿಧ ಸ್ತ್ರೀಪುರುಷಾಕಾರಗಳಾದ ಪರಮಾಣುಗಳಲ್ಲಿ ದೇವರಸಂಬಂಧವಾದ ಪ್ರಕಾಶ ಪ್ರವೇಶ ಮಾಡೋಣದರಿಂದ ಚೇತನಗಳಾದವು. ಅನಾದಿಕಾಲದಿಂದಲೂ ಪರಮಾಣುಗಳಿಗೂ ಪ್ರಕಾಶಕ್ಕೂ ಬಿಡುಗಡೆ ಇಲ್ಲ. 'ಯಾವ ಯಾವ ದ್ರವ್ಯ ಅಭಾವೇನ' ಹಾಗಾದರೇ ಪರಮಾಣುಗಳು, ಅಪ್ರಾಕೃತಜಡಗಳು ದೇವರ ಪ್ರಕಾಶ ಚೇತನ. ದೇವರು ಚೇತನ ಆತಗೆ ಈಪರಮಾಣುಗಳು ದೇಹಗಳು. ದೇವರಿಗೂ ದೇವರದೇಹಕ್ಕೂ ಅಬೇಧ ಉಂಟು. ಇಂಥಅಬೇಧ ಹೇಳಿದಪಕ್ಷದಲ್ಲಿ ದೇವರಿಗೂ, ಜಡಕ್ಕೂ ಅಭೇಧ ಹೇಳುವ ದೋಷಬರುತ್ತದೆ. ಆದಕಾರಣ ಅಭೇಧದಲ್ಲಿ ಭೇಧ ನಿರ್ವಾಹಕವಾದ ಸವಿಶೇಷಭೇಧವನ್ನು ವಪ್ಪಬೇಕು. ದೇವರಿಗೆ ಸುತರಾಂ ದೇಹವಿಲ್ಲ. ಎಂದರೆ 'ಸದ್ದೇಹ' ಎಂದು ಶೃತಿಯಲ್ಲಿ ದೇಹವಿದೆ ಎಂದು ಹೇಳುತ್ತದೆ. ದೇಹಿಲ್ಲ ಎಂಬುವನಿಗೆ ಅಂಧ ತಮಸ್ಸೇಗತಿ. ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿಹೇಳಿದೆ. 'ಅದೇಹಂ ಭೂತಂ ದೇಹಂವಾ ಯದಿದುಶ್ಸುಂಧತಮ' ಆದಕಾರಣ ದೇವರಿಗೆ ಚೇತನಾತ್ಮಕವಾದ ದೇಹಗುಣಗಳು ಉಂಟು. 'ನಿಶ್ಚೇತನಾತ್ಮಕ ಶರೀರ ಗುಣಶ್ಚಹೀನ' ಎಂದು ನಿರ್ಣಯವಾಕ್ಯ. ದೇವರ ಪದಾರ್ಥ ಗಳು ರಮಾದೇವೇರಲ್ಲಿ ಪ್ರವೇಶ. ರಮಾದೇವೇರ ಪದಾರ್ಥಗಳು ಜೀವರಲ್ಲಿ ಪ್ರವೇಶ.

## ಲಕ್ಷ್ಮೀವಿವರ

ರಮಾದೇವೇರ ಪ್ರಕಾಶ ಅನಂತಾನಂತ ಅಂಶಗಳೂಳ್ಳ, ಅವ್ಯಾಕೃತವಾದ 84ಲಕ್ಷವಿಧಗಳಿಂದ ಆಕಾರಗಳಾದ ಶುಭ್ರವರ್ಣ, ರಕ್ತವರ್ಣ,ನೀಲವರ್ಣಗಳಾದ ಪರಮಾಣುಗಳಲ್ಲಿ ಪ್ರವೇಶ ಮಾಡೋಣದರಿಂದ ಅನಂತಾನಂತ ರೂಪಗಳಾದವು. ನವನಾರೀಕುಂಜರದಂತೆ ಕಲತಂಥಾ ರೂಪವೇ ಆಂಭ್ರಣೀರೂಪ. ಅಸಂಖ್ಯಾಕರಾದ ತ್ರಿವಿಧರಾದ ಜೀವರಗಳೇ ಸೋಪಾಧಿಕಪ್ರತಿ ಬಿಂಬರು. ನಿರುಪಾಧಿಕ ಪ್ರತಿಬಿಂಬ ತೇಜೋರೂಪದಲ್ಲಿ ಬಂದು ಜಡ ಆವರ್ಕವಾದದ್ದು. ಸೋಪಾಧಿಕ ಪ್ರತಿಬಿಂಬ ಚೇತನರೂಪವಾದ ಜೀವ ನಿರುಪಾಧಿಕಪ್ರತಿಬಿಂಬ.

## ಜೀವರವಿವರ

ಅಂಭ್ರಣೀ ರೂಪದಲ್ಲಿ ಜೀವರ ರೂಪಸೇರುವುದು ಹೇಗೆಂದರೆ ಅಂಭ್ರಣಿರೂದಲ್ಲಿ ಪುರುಷ ರೂಪಬಂದು, ವಂದು ಅಂಶದಿಂದ ಸೇರಿದೆ.

ಲಕ್ಷ್ಮೀಪ್ರಕಾಶದಲ್ಲಿ ವಂದು ಅಂಶಪ್ರಕಾಶದಿಂದ ಸೇರಿದೆ. ಲಕ್ಷ್ಮೀಆವರ್ಕ ಜಡಪರವಾಣುಗಳಲ್ಲಿ ದೇವರು ತನ್ನ ಪರವಾಣುಗಳಲ್ಲಿ ಸೇರಿ ತನ್ನ ಪರಮಾಣುಗಳಲ್ಲಿ ಸೇರಿದ್ದಾನೆ.ಇಂಥಾದೇವರಿಂದ ಸಹಿತಳಾದರಮಾದೇವಿಯರು ಅಸಂಖ್ಯಾತ ರಾದ ತ್ರಿವಿಧರಾದಜೀವರುಗಳಲ್ಲಿ ತತ್‌ಶಬ್ದವಾಚ್ಯಳಾಗಿ,ತನ್ನಾಮಕಳಾಗಿ, ತತ್‌ವೀರ್ಯಾ ವಿಶಿಷ್ಟ ಳಾಗಿ, ತ್ರಿವಿಧ ವ್ಯಾಪ್ತಿಸೇರಿದ್ದಾಳೆ. ಆದಕಾರಣ ದೇವರು ರಮಾದೇವೇರಿಗೆ ಬಿಂಬರು. ದೇವರು ರಮಾದೇವೇರು ಸಕಲಜೀವರಿಗೆ ಬಿಂಬರು. "ಅಣೋರಣೀಯಾನ್ ಮಹಿತೋಮಿಯಾನ್– ಅಣೋರಣಿಯಂಬವಗೆ ಎಣೆಯಾರು ಜಗದೊಳಗೆ" ಎಂಬ ಶಬ್ದಾನೇ ಅರ್ಥ. ಪರಮಾಣು ರೂಪದಲ್ಲಿ ಅದಕ್ಕಿಂತ ಅಣುರೂಪಳಾಗಿ ಸೇರಿದ್ದಾಳೆ. ಅದಕ್ಕಿಂತ ಅಣೂರೂಪನಾಗಿ ದೇವರು ಸೇರಿದ್ದಾನೆ. ಹೀಗೆ ಪ್ರವೇಶ ಮಾಡಿದಂತ ರೂಪವೇ ಬಿಂಬರೂಪ. ಆದರೆ ಹೀಗೆ ಸೇರುವುದರಿಂದ ಐಕ್ಯಚಿಂತನಾ ವಾಡಬಾರದು. ಹೀಗೆ ಒಂದಕ್ಕೊಂದು ಸಂಬಂಧವಿರುವುದ ರಿಂದ ಸವಿಶೇಷಬೇಧವು. ಇದಕ್ಕೆ ದೀಪದ ದೃಷ್ಟಾಂತ ಹ್ಯಾಗೆಂದರೆ ದೀಪಕ್ಕೆ ಬತ್ತಿ ಅಗ್ನಿ ಸಂಬಂಧವೋ ಹಾಗೇ ತಿಳಿಯಬೇಕು.

## ಸ್ವರೂಪದೇಹದ ವಿವರ

ದೇವರಿಗೆ ಸರ್ವ ರೂಪ ಸರ್ವಾಕಾರಗಳು ಉಂಟು. ದೇವರಲ್ಲಿ ಅನ್ವರ್ಥಕ ಜೀವರಲ್ಲಿ ಔಪಚಾರಿಕ. ಇಂಥಾ ತ್ರಿವಿಧಜೀವರುಗಳ ತ್ರಿವಿಧಗಳು ಪ್ರಕಾಶಗಳು ಹೊರಟಿವೆ. ಅವುಗಳದೆ ಆಕಾರಬರಬೇಕಾದರೆ ದೇಹ ಹೇಳದೆಹೊರತು ಬರುವಹಾಗೆ ಇಲ್ಲ. ಅವರುಗಳ ಪ್ರಕಾಶರೂಪ ದಿಂದ ಅಪ್ರಾಕರತ ಆವರಣದಲ್ಲಿ ಇದ್ದವಂದು ದೇವರೂಪನಲ್ಲಿ ಪ್ರವೇಶಮಾಡಿ, ಲಕ್ಷ್ಮೀದೇವಿ ಯರಲ್ಲಿ ಸೇರಿ ತಮ್ಮ ತಮ್ಮ ಸ್ವರೂಪದೇಹವನ್ನು ಸೇರಿದ್ದಾರೆ. ಆಸ್ವರೂಪದೇಹಗಳು ಮುಕ್ತಿ ಯೋಗ್ಯರಿಗೆ ಸುಖಕರಗಳು. ನಿತ್ಯಸಂಸಾರಿಗಳಿಗೆ, ತಮೋಯೋಗ್ಯರಿಗೆ ದುಃಖಕರಗಳು. ಮೂರುವಿಧ ದೇಹಗಳು ಅಪ್ರಾಕೃತಗಳೇ. ತ್ವಕುಮೊದಲಾದ ಇಂದ್ರಿಯಗಳುಂಟು. ಷೋಡಶ ಕಳಗಳುಉಂಟು. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣಗಳು, ಅಹಂಕಾರ ತತ್ವ, ಮಹತತ್ವ, ಅವ್ಯಕ್ತತತ್ವಗಳುಂಟು. ಆಧ್ಯಾತ್, ಅಧಿದೈವ, ಅಧಿಭೌತಿಕ, ಮೂರುಸ್ಥಾನಗಳುಂಟು.

ನಾಡಿಗಳು, ಕಮಲಗಳು, ಕೇಶರಗಳುಂಟು. ಪವಿ, ಹರಿನ್‌ಮಣಿವಜ್ರ, ಹವಳ, ಇಂದ್ರನೀಲಮಣಿ ಪ್ರದ್ಯುಮ್ನಮೂರುತಿ ಸಾತ್ವಿಕರಲ್ಲಿ ಶುಭ್ರವರ್ಣದಿಂದಲೂ, ರಾಜಸರಲ್ಲಿ ರಕ್ತವರ್ಣದಿಂದಲೂ, ತಾಮಸರಲ್ಲಿ ನೀಲವರ್ಣದಿಂದಲೂ ಇದ್ದಾನೆ. ಮುಕ್ತಿಯೋಗ್ಯರ ಸ್ವರೂಪ ಸುಲಕ್ಷಣವಾದದ್ದು. ನವವಿಧಭಕ್ತಿ ವಿಷ್ಣುಸರ್ವೋತ್ತಮನು/

ಜೀವನಲ್ಲಿ ಪ್ರವೇಶವಾದ ದೇವರಲ್ಲಿ ವಾಸುದೇವ ಸ್ವಾತಂತ್ರ್ಯ ಸ್ವರೂಪಗುಣಗಳಲ್ಲಿ ಪ್ರವೇಶ. ಪ್ರವೇಶಗುಣಗಳಿಂದ ಸ್ಥೂಲಕಾರ್ಯ ಅನಾದಿ ಗುಣಗಳಕಾರ್ಯದಿಂದೆ "ಕಕ್ಷದಲ್ಲಿ ಸ್ವರೂಪದೇಹಕ್ಕೆ ಅಭಿಮಾಬಂದುದು ಯಾಮಿತಿ ಸ್ವರೂಪ ದೇಹದಲ್ಲಿ ಜೀವ ಸ್ವೇಂದ್ರಿಯಗಳ ಸಂಬಂಧ ಪ್ರಕಾಶಮಾಡಿದಿಂದ ನಾಡಿದ್ವಾರಾ ಸರ್ವೇಂದ್ರಿಯಗಳಲ್ಲಿ ಪ್ರವೇಶಮಾಡಿದ್ದಾನೆ. ಜಡಮಿಶ್ರ ಆದಕಾರಣ ಕಣ್ಣಿಂದನೋಡಬೇಕು. ಕಿವಿಯಿಂದೇ ಕೇಳಬೇಕು. ಇಂಥಾಸ್ವರೂಪದೇಹದ ಮ್ಯಾಲೆ ಜೀವಾಚ್ಛಾಧಿಕ ಪರಮಾಚ್ಛಾದಿಕ ಎಂಬ ಎರಡು ಅಜ್ಞಾನಗಳು ಸೇರಿವೆ. ಯಿವುಗಳಲ್ಲಿ ದೇವರಿಚ್ಛಾ ರಮಾದೇವೇರ ಇಚ್ಛಾಗಳು ಸೇರಿವೆ. ಆದ್ದರಿಂದ ಜೀವಗೆ ತನ್ನಸ್ವರೂಪಜ್ಞಾನವು ಇಲ್ಲಾ. ಆದಕಾರಣಜೀವ ಪರಾಧೀನನು ಅಜ್ಞಾನಿ ಕುರುಡ. ಜೀವಾಚ್ಛಾಧಿಕ ಪರಮಾಚ್ಛಾಧಿಕ ಎಂಬ ಅಪ್ರಾಕೃತ ದುಷ್ಟಪ್ರಕೃತಿಗಳು ಪಾದಕಾರ್ಯ ಗಳಿಗೆ, ಇವುಗಳು ಸಾಧನಗಳಿಂದ ಹೋಗತಕ್ಕವು. ಸ್ವರೂಪಹೃದಯದಲ್ಲಿ ಇದ್ದ ಜೀವ ನಾಂಗುಷ್ಟಾಗ್ರ ಪರಿಮಿತ, ಅಂತರಾತ್ಮನ ದರುಶನದಿಂದ ಬಿಡುಗಡೆಯಾಗುತ್ತದೆ. ಇದು ಸ್ವರೂಪದೇಹದ ವಿಚಾರ.

**ಲಿಂಗದೇಹದ ವಿಚಾರ:** ಜೀವರು ಅಪ್ರಾಕೃತಾವರಣ ಪ್ರಾಕೃತಾವರಣ ವಿಶಿಷ್ಟರು. ಎಂದು ಕರ್ಜಿಗಿದಾಸಪ್ಪನವರಉಕ್ತಿ. ಪ್ರಾಕೃತಾವರಣವೆ ಲಿಂಗದೇಹ. ಅದು ಜೀವನಾಕಾರದಂತೆ ಇರತಕ್ಕದ್ದು. ತ್ರಿವಿಧವರ್ಣಗಳು, ಷೋಡಶಕಳೆಗಳು, ಪಂಚಜ್ಞಾನೇಂದ್ರಿಯು, ಪಂಚ ಕರ್ಮೇಂದ್ರಿಯು, ಪಂಚತನ್ಮಾತ್ರಗಳಲ್ಲಿ ಪಂಚಭೂತಗಳು ಲೀನವಾಗಿವೆ. ಪಂಚತನ್ಮಾತ್ರಗಳಲ್ಲಿ ಪಂಚವಿಧ ಅಜ್ಞಾನಗಳು ಉಂಟು. ಈ ಲಿಂಗಶರೀರ ತ್ರಿಗುಣಾತ್ಮಕ ವಾದಂಥಾದ್ದು. ಈಲಿಂಗಶರೀರವನ್ನು ನಿಯಮನ ಮಾಡತಕ್ಕವನು ತುರಿಯನಾಮಕ ಪರಮಾತ್ಮನು. ಆತನ ಅಂಶಗಳೇ, ವಿಶ್ವ, ತೈಜಸ, ಪ್ರಾಜ್ಞಎಂದು ಈಲಿಂಗದೇಹ ಇಪ್ಪತ್ತುನಾಲ್ಕು ತತ್ವಾತ್ಮಕವಾದದ್ದು. ಈ ತ್ರಿವಿಧ ಲಿಂಗ ದೇಹ ಗಳು ಮೂಲಜಡಪ್ರಕೃತಿ ಅಂಶಗಳು. ಜಡರೂಪಗಳಿಗೆ ರಮಾದೇವಿಯರು ಅಭಿಮಾನಿಗಳು.

ಜೀವರಪುಟವಿವರ; ಸಾಂಶರಿಗೆ ಸಾಂಶರು, ನಿರಂಶರಿಗೆ ನಿರಂಶರು ತ್ರಿವಿಧಜೀವರಿಗೆ ಸಂಬಂಧಿಸಿದ ವಸ್ತ್ರಾಭರಣಗಳುಉಂಟು. ಸೃಷ್ಠಿಕಾಲದಲ್ಲಿ ರಮಾದೇವಿಯರಿಂದ ಸ್ತುತ್ಯನಾದ ಪರಮಾತ್ಮನು ಅಪ್ರಾಕೃತ ಅಂಶಗಳು ಜಡಪ್ರಕೃತ್ಯಂಶಗಳಲ್ಲಿ ಸೇರಿಸುವನಾದನು. "ವೀರ್ಯಮಹತ್ ವೀರ್ಯವಾನ್" ಎಂದು ಗರುಡ ಪುರಾಣವಾಕ್ಯ. ಆವೀರ್ಯದೇವರ ಸ್ವರೂಪವಲ್ಲ. ಆವೀರ್ಯ ಮೇಳನಮಾಡೋಣವೆಂದು ಅರ್ಥ. ಅದೇಸಮಯದಲ್ಲಿ ಅನಾದಿ ಯಿಂದ ಇರತಕ್ಕ

200 ರುಜುಗಳು ಸಂಖ್ಯಾಕಾರದ ಪರಿವಾರಸಹಿತರಾದ ಪುರಂಜನರಲಿ. ಇವುಗಳಮೋಕ್ಷಕ್ಕೆ ಹೋಗುವರು. ಇನ್ನುಮೋಕ್ಷಕ್ಕೆ ಹೋದವರಪೈಕಿ 199 ನೂರಾತೊಂಭತ್ತೊಂಭತ್ತು ಮಂದಿ. ಇದಕ್ಕೆ ಭರ್ತಿಅಸ್ಪೃಶ್ಯರಾಶಿಯಿಂದ ಪರಿವಾರಸಹಿತರಾದ ಬ್ರಹ್ಮ ಪುರಂಜನರಲಿ 200ಕ್ಕೆ ಭರ್ತಿಮಾಡಿಸೇರಿಸಿದನು. ನೂತನವಾಗಿ ಸೇರಿದಂಥ ತ್ರಿವಿಧಜೀವರಿಗು ಅಪನ್ನಮರಣಾವಸ್ತೆಕೊಟ್ಟು ಕಠಿಣವಾದ ಲಿಂಗವನ್ನು ಶಿಥಿಲೀಭಾವ ದೊಂದಿಸಿ ಸ್ವರೂಪಸಂಬಂಧ ಅಂಗಗಳನ್ನು ಹೊಂದಿಸಿ, ಈಲಿಂಗ ದೇಹದ ಸಂಬಂಧವನ್ನು ಒದ್ದಿಬಟ್ಟಿಯಲ್ಲಿ ಸೇರಿಸಿದಂತೆ ಸೇರಿಸಿದನು. ಜೀವರ ರೂಪಗಳು ಎರಡು ವಿಧ. 1.ದೇಹಸ್ತ ರೂಪಗಳು. 2.ಅದೇಹಸ್ತರೂಪಗಳು. ದೇಹಸ್ತರೂಪಗಳು ರಾಮಕೃಷ್ಣಾದಿರೂಪಗಳು. ಅದೇಹಸ್ತ ರೂಪಗಳೇ ಬಿಂಬಸ್ತರೂಪಗಳು.ಒಂದುರಾಮರೂಪ ಅನಂತಾನಂತ ಅಂಶಗಳುಉಳ್ಳ ಅನಂತಾ ನಂತ ರೂಪಗಳು ಉಳ್ಳಂಥಾವು. 84 ಲಕ್ಷವಿಧ ಸ್ತ್ರೀಪುರುಷರುಗಳು ಬಾಲ್ಯಾರಂಭ ಮಾಡಿ ವೃದ್ಧರೂಪಗಳು ರೋಗಾಕಾರರೂಪಗಳು, ಯೌವನರೂಪಗಳು, ಇನ್ನೂ ಚಿತ್ರವಿಚಿತ್ರ ರೂಪಗಳ, ಕೃಷ್ಣಾದಿರೂಪಗಳಿಂದ ನವನಾರೀಕುಂಜರದಂತೆ ಯುಕ್ತವಾದ ರಾಮರೂಪ. ಇದರಂತೆ 84 ಲಕ್ಷವಿಧ ಸ್ತ್ರೀಪುರುಷರೂಪಗಳು ವಸ್ತ್ರಾಭರಣಯುಕ್ತಗಳಾದ ರೂಪಗಳು. ನವನಾರೀಕುಂಜರದಂತೆಕಲೆತು ಇರತಕ್ಕ ರೂಪವೇ ಎರಡನೇಯ ಪುರುಷರೂಪ. ಆದೇವರ ಎಡಭಾಗದಲ್ಲಿ ಸ್ತ್ರೀರೂಪಗಳು, ಬಲಭಾಗದಲ್ಲಿ ಪುರುಷರೂಪಗಳಯುಕ್ತವಾದದ್ದು. ಈತ ನೊಳಗೆ ಸೇರಿದ ಚತುರ್ವ್ಯೂಹಾತ್ಮಗಳು ಅನಿರುದ್ಧದೇಹದೊಳಗೆ, ಪ್ರದ್ಯುಮ್ನದೇಹದೊಳಗೆ ಸಂಕರುಷಣನೊಳಗೆ ವಾಸುದೇವ ನಾರಾಯಣ. ಈತನೇ ಮಹಾಪ್ರಳಯದಲ್ಲಿ ಸೂನ್ಯ ನಾಮಕನಾಗಿ ಇರತಕ್ಕವ. ಈತನಿಗೆ ವಾಸುದೇವ ಎಂತಲೂ ಪದ್ಮನಾಭನೆಂತಲೂ ಹೆಸರು ಗಳುಉಂಟು. ಇದರಮತ್ತೆ ರಮಾದೇವಿಯರ ರೂಪಗಳು ಶ್ರೀ, ಭೂ, ದುರ್ಗಾರೂಪಗಳು ದೇಹಸ್ತರೂಪಗಳು. ಸೀತಾರುಕ್ಮಿಣ್ಯಾದಿರೂಪಗಳು ಅದೇಹಸ್ತರೂಪಗಳು. ಒಂದುಸೀತಾ ರೂಪವೇ ಜೀವರಂತೆ ಅನಂತಾನಂತ ರೂಪಗಳು ಉಳ್ಳಂಥಾದ್ದು. ಇಂಥಾ ಅನಂತಾನಂತ ರೂಪಗಳಿಂದ ನವನಾರೀಕುಂಜರದಂತೆ ಯುಕ್ತವಾದದ್ದು ದಕ್ಷಿಣಾರೂಪ. ಈರೂಪದ ಬಲಭಾಗದಲಲ್ಲಿ ಸ್ತ್ರೀರೂಪಗಳು, ಎಡಭಾಗದಲ್ಲಿ ಪುರುಷರೂಪಗಳು ಇರುವವು. ದೇವರ ಪುರುಷರೂಪದಲ್ಲಿ ಮಹಾಪ್ರಳಯದಲ್ಲಿ ಸರ್ವರೂಪಗಳು ಸೇರುತ್ತವೆ.

ಅನಾದಿಕಾಲದಿಂದ ಜೀವಾಂತರ್ಯಾಮಿಯಾಗಿ ಬಿಂಬರೂಪನಾಗಿ ಸೇರಿದ ರೂಪಕ್ಕೆ ಬಿಡುಗಡೆಯಲ್ಲ. ಮೊದಲನೇಯಪುರುಷ ರೂಪದಿಂದ ಸಂಬಂದ

ನಾದವನು. ಆರೂಪದಿಂದ ನಡೆಯುತಕ್ಕ ಕಾರ್ಯಗಳು ಸೃಷ್ಟಿಕಾಲದಲ್ಲಿ ಎರಡನೆಯಪುರುಷ ರೂಪದಲ್ಲಿ ಸೇರಿದ ವಾಸುದೇವರೂಪವೂ ತದಾಕಾರಯಾಗಿ ಅನಾದಿ ಬಿಂಬನಲ್ಲಿ ಸೇರಿ ಅನಾದಿಬಿಂಬನಿಂದ ಸೂಕ್ಷ್ಮಕಾರ್ಯಗಳು ನಡೆಯುತ್ತವೆ. ಸೃಷ್ಟಿಕಾಲದಲ್ಲಿ ಸೇರಿದ ವಾಸುದೆವರೂಪದಿಂದ ಸ್ಥೂಲಕಾರ್ಯಗಳು ನಡೆಯುತ್ತವೆ.

ಗರುಡಪುರಾಣದಲ್ಲಿ ಹೇಳಿದರೀತಿ ಇಂಥಾ ಅನಾದಿಬಿಂಬರೂಪ ಗಳು ಜೀವರುಗಳನ್ನು ಬಿಟ್ಟು ಮೂಲರೂಪದಲ್ಲಿಸೇರೋದಿಲ್ಲ. ಅಸೃಜ್ಯರಾಶಿಯಲ್ಲಿ ಇರತಕ್ಕ ಜೀವರಾಶಿಗಳಿಗೆ ಎರಡು ಅವಸ್ತಾ. ಮಹಾಪ್ರಳಯ ನೂರು 100 ವರುಷ, ನಿದ್ರಾಅವಸ್ಥಾ, ಸೃಷ್ಟಿಕಾಲ ನೂರು ವರುಷ. ಜಾಗ್ರದಾವಸ್ಥಾ. "ಯತ್ಯವಸ್ತುಂ ಧ್ಯಯ ಲಿಂಗೇ" ಎಂದು ಪ್ರಕಾಶ ಸಂಹಿತ 11 ನೇ ಅಧ್ಯಾಯ. ಸುಷುಪ್ತಿ ಅವಸ್ತಾದಲ್ಲಿ ಸೂಕ್ಷ್ಮವಾದ ಸ್ವರೂಪಕರ್ಮಗಳು ನಡೆಯುತ್ತಿದೆ.ಹ್ಯಾಗೆಂದರೆ ಬಿಂಬರೂಪಿಪರಮಾತ್ಮ ಮುಕ್ತಿಯೋಗ್ಯರಲ್ಲಿ ರಮಾದೇವಿಯ ದ್ವಾರಾ ಪುಣ್ಯಕರ್ಮಗಳು ನಡೆಯಿಸುತ್ತಾನೆ. ನಿತ್ಯಸಂಸಾರಿಗಳಲ್ಲಿ ಉದಾಸೀನಕರ್ಮ ನಡೆಯಿಸು ತ್ತಾನೆ. ಇವರುಗಳಕರ್ಮಾನುಸಾರ ಮುಕ್ತಿಯೋಗ್ಯರಿಗೆ ಮೋಕ್ಷ, ತಮೋಯೋಗ್ಯರಿಗೆ ಅಂಧತಮಸ್ಸು. ನಿತ್ಯಸಂಸಾರಿಗಳಿಗೆ ನಿತ್ಯನರಕಗಳು ಕೊಡುತ್ತಾನೆ. ಸೃಷ್ಟಿಕಾಲದಲ್ಲಿ ತ್ರಿವಿಧರಿಂದಲೂ ತ್ರಿವಿಧ ಕರ್ಮಗಳುನಡೆಯುತ್ತವೆ, ಹ್ಯಾಗೆಂದರೆ ಮುಕ್ತಿಯೋಗ್ಯರದು ಸಾತ್ವಿಕಮನಸ್ಸು, ಆದ್ದರಿಂದ ಲಿಂಗ ದೇಹಸ್ತ ಸಾತ್ವಿಕಮನಸ್ಸಿನ ಸಂಬಂದದಿಂದ ಪುಣ್ಯಕಾರ್ಯಗಳು ನಡೆಯುತ್ತವೆ. ಇದರಂತೆ ತಾಮಸ ಮನಸ್ಸಿನ ಸಂಬಂಧದಿಂದ ತಾಮಸಕಾರ್ಯಗಳುನಡೆಯುತ್ತವೆ. ರಜಸ ಮನಸಿಸ್ಸಿನ ಸಂಬಂಧ ದಿಂದ ಉದಾಸೀನಕಾರ್ಯಗಳುನಡೆಯುತ್ತವೆ. ಈರೀತಿ ತ್ರಿವಿಧಜೀವರುಗಳಿಂದ ತ್ರಿವಿಧಕಾರ್ಯಗಳು ನಡೆಯುತ್ತವೆ. ಅದರಿಂದಲೂ ಅನಾದಿ ಕರ್ಮದಲ್ಲಿ ಪುಣ್ಯಪಾಪಗಳು ತ್ರಿವಿಧರಿಗೂ ಸೇರಿಇವೆ. ತ್ರಿವಿಧರಲ್ಲಿ ಪುಣ್ಯಕರ್ಮಗಳು ನಡೆಸತಕ್ಕ ವಿಶ್ವನಾಮಕ ಪರಮಾತ್ಮ ಶ್ರೀದೇವಿಸಹಿತನಾಗಿ ಪುಣ್ಯಕರ್ಮಗಳು ನಡೆಸುತ್ತಾನೆ. ತೈಜಸನಾಮಕ ಪರಮಾತ್ಮ ಭೂದೇವಿ ಸಹಿತನಾಗಿ ರಾಜಸಕರ್ಮಗಳುನಡೆಸುತ್ತಾನೆ. ಪ್ರಾಜ್ಞನಾಮಕ ಪರಮಾತ್ಮನು ದುರ್ಗಾದೇವಿಯರ ಸಹಿತನಾಗಿ ತಾಮಸಕರ್ಮಗಳನ್ನು ನಡೆಸುತ್ತಾನೆ.

ಸೃಷ್ಟಿಕಾಲದ ಮೊದಲಭಾಗದಲ್ಲಿ ಅಪ್ರಾಕೃತ ಅಂಶಗಳಿಂದ ಯುಕ್ತರಾದ ಪ್ರಾಕೃತತ್ರಿವಿಧ ಪ್ರಕೃತಿ ಅಂಶಗಳು ತ್ರಿವಿಧಗುಣಗಳನ್ನು ಹೆಸರಿಡಿಸಿ, ಅದರಿಂದ ಅವ್ಯಕ್ತತತ್ವವನ್ನು ಸೃಷ್ಟಿಮಾಡಿದನು. ಅದಕ್ಕೆಅಭಿಮಾನಿ ಶ್ರೀ,ಭೂ,ದುರ್ಗಾ ರೂಪಗಳು ಮಹತ್ತತ್ವ, ಅಹಂಕಾರತತ್ವ, ಮನಸ್ತತ್ವ ಅನಂತರ ಪಂಚಭೂತಗಳು,

ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚ ತನ್ಮಾತ್ರಗಳನ್ನು ಪ್ರತ್ಯೇಕ ಪ್ರತ್ಯೇಕ ಸೃಷ್ಠಿಮಾಡಿದನು. ಈತತ್ವಗಳಿಗೆ ಅಭಿಮಾನಿ ದೇವತೆಗಳನ್ನು ಸೃಷ್ಠಿಮಡಿದನು.

ಬ್ರಹ್ಮದೇವರಸಂಬಂಧ ಲಿಂಗದೇಹದತತ್ವದ ಅಂಶಹೊರಡಿಸಿಉಭಯವೂ ಕಲಿಸಿ ಬ್ರಹ್ಮದೇವರ ಸೂಕ್ಷ್ಮದೇಹಸೃಷ್ಠಿಯನ್ನು ಮಾಡಿದನು.ಇದರಂತೆ ಪುಷ್ಕರಾಂತತತ್ವೇಶರ ಲಿಂಗ ದೇಹಗಳ.ತತ್ವಗಳಅಂಕಹೊರಡಿಸಿ ಪ್ರಕೃತಿಸಂಬಂಧ ತತ್ವಗಳಅಂಶಹೊರಡಿಸಿ ಉಭಯವೂ ಕಲಿಸಿ ಪ್ರತ್ಯೇಕ ಪ್ರತ್ಯೇಕ ತತ್ವೇಶರಿಗೆ ತತ್ವಸೂಕ್ಷ್ಮದೇಹಗಳು ಸೃಷ್ಠಿಮಡಿದನು. ಆದೇಹಗಳು ತೇಜೋರೂಪಗಳು. ಅನಂತರ ಸೃಷ್ಠಿವಳಗೆ ಇದ್ದ ತ್ರಿವಿಧ ಸ್ತ್ರೀಪುರುಷ ಜೀವರುಗಳ ಲಿಂಗದೇಹ ಸಂಬಂಧ ತತ್ವಗಳ ಅಂಶಹೊರಡಿಸಿ, ತತ್ವೇಶರ ಸೂಕ್ಷ್ಮದೇಹಗಳನ್ನು ಹೊರಡಿಸಿ, ಮೂಲಜಡಪ್ರಕೃತಿ ಅಂಶಗಳನ್ನು ಸರ್ವವೂ ಕಲಿಸಿ ತ್ರಿವಿಧ ಸಕಲ ಜೀವರಿಗೂ 24 ತತ್ವಾತ್ಮಕ ವಾದ ಅವ್ಯಕ್ತದೇಹವನ್ನು ಸೃಷ್ಠಿಮಾಡಿದನು. ಮುಕ್ತಿಯೋಗ್ಯರಿಗೆ ಶುಭ್ರವರ್ಣ, ನಿತ್ಯಸಂಸಾರಿಗೆ ರಕ್ತವರ್ಣಗಳು, ತಮೋಯೋಗ್ಯರಿಗೆ ನೀಲವರ್ಣ. ಈದೇಹಗಳಲ್ಲಿ ದೇವರು, ರಮಾದೇವಿ ಯರು ತೇಜೋಸ್ವರೂಪರಾದ ಬ್ರಹ್ಮಾದಿಪುಷ್ಕರಾಂತ ತತ್ವೇಶರ ಸಹಿತ ಆಯಾಜೀವರುಗಳು ತಮ್ಮ ತಮ್ಮ ತೇಜೋರೂಪಗಳಿಂದ ಅವ್ಯಕ್ತದೇಹದಲ್ಲಿ ಪ್ರವೇಶಮಡಿದರು. ಆದೇಹಗಳು ರಮಾ ಇರತಕ್ಕವು. ತ್ರಿವಿಧ ದೇಹಗಳಲ್ಲಿ ತತ್ವೇಶರು ತದ್ವರ್ಣ ತದಾಕಾರಗಳಿಂದನೇ ಇದ್ದಾರೆ. ಸ್ವರೂಪದೇಹದಲ್ಲಿ ಬ್ರಹ್ಮಾದಿ ಪುಷ್ಕರಾಂತ ತತ್ವೇಶರು ಸೇರಿದ್ದಾರೆ. ಅಂದರೆ ಅವರವರ ತತ್ವಗಳಲ್ಲಿ ಸ್ವ ಸ್ವರೂಪ ಸಂಬಂಧ ಅಪ್ರಾಕೃತ ತತ್ವಗಳ ಅಂಶಗಳು ಅವರವರ ತತ್ವಗಳಲ್ಲಿ ಸೇರಿಇದೆ. ಶುದ್ಧತತ್ವಗಳು, ಅಪ್ರಾಕೃತತತ್ವಗಳು ಉಭಯವೂ ಕಲೆತು ಇವೆ. ಇಂಥಾಕಲೆತಂಥಾ ಸರ್ವರ ತತ್ವದೇಹಗಳಲ್ಲಿಸೇರೋಣವೇ ಸ್ವರೂಪದಲ್ಲಿ ಪ್ರವೇಶ ಎಂದು ಅರ್ಥ. ಲಿಂಗದೇಹದ ವಳಗೆ ಇರತಕ್ಕ ಸೂಕ್ಷ್ಮಸ್ವರೂಪದಲ್ಲಿ ಪ್ರವೇಶವಿಲ್ಲ ಎಂದು ಅರ್ಥ. ತೇಜೋರೂಪವಾದ ಸೂಕ್ಷ್ಮದೇಹಗಳಿಂದ ಸೃಷ್ಯರಾದ ಬ್ರಹ್ಮಾದಿ ಪುಷ್ಕರಾಂತ ತತ್ವೇಶರು "ನಾವೆಲ್ಲರೂ ವಂದೇಕಡಿ ಇದ್ದು ಕೆಲಸಗಳು ಮಾಡಬೇಕು ಎಂದು ದೇವರನ್ನು ಪ್ರಾರ್ಥಿಸಲು, ತತ್ವಗಳನ್ನು ಕಲಿಸಿ ಗರುಡ ಶೇಷಮಾರ್ಗಗಳಿಂದ ತೇಜೋವಿಕೃತಗಳಾದ ಅನಿರುದ್ಧ ಸ್ಥೂಲದೇಹಗಳನ್ನು ಸ್ವ ಸೃಷ್ಠಿಮಾಡಿದನು. "ನಾವು ಎಲ್ಲರು ಇರಲಿಕ್ಕೆ ಮನಿ ಬೇಕೆಂದರೆ 50ಕೋಟಿ ಅವಯವ 50ಕೋಟಿ ಗರ್ಭದಿಂದಯುಕ್ತವಾದ ದಶಾವರಣ ಸಹಿತ ವಾದ ಬ್ರಹ್ಮಾಂಡವನ್ನು ಸೃಷ್ಠಿಮಡಿಕೊಟ್ಟನು. 24 ತತ್ವಾತ್ಮಕ ಗಳಾದ ಪದಾರ್ಥಗಳನ್ನು ಸೃಷ್ಠಿ ಮಾಡಿಕೊಟ್ಟನು. ಅವರು 3300 ಜನರು. ಅವರೇ ಅಮುಖ್ಯರು. 100ಜನ ಕಡಿಮೆ. ಅವರು ಅಮುಖ್ಯರು. ತಮ್ಮ ತಮ್ಮ ತತ್ವಗಳಲ್ಲಿ ನಿರತರು. ಮುಖ್ಯರು ಭೂತತ್ವದಲ್ಲಿ ನಿಂತರು.

ಮೇಲೆ ಬ್ರಹ್ಮಾಂಡಕ್ಕೆ ಅಭಿಮಾನಿ ಬ್ರಹ್ಮದೇವರು. ಆನಂದ ವಾಸುದೇವ ನಾಮಕ ಪರಮಾತ್ಮ ಮುಂದಿನಕಲ್ಪದಲ್ಲಿ ಲಿಂಗಭಂಗರಾದ ತ್ರಿವಿಧ ಸ್ತ್ರೀಪರುಷರುಗಳನ್ನು ಅವ್ಯಕ್ತ ದೇಹಗಳಿಂದ ಸೃಷ್ಟರಾದ ತ್ರಿವಿಧ ಸ್ತ್ರೀಪುರುಷರುಗಳನ್ನು ಆತತ್ವೇಶರನ್ನು ಅಪರೋಕ್ಷ,ಅನಪರೋಕ್ಷಗಳಿಂದ ತ್ರಿವಿಧ ಸರ್ವಜೀವರುಗಳನ್ನು ಕರಕೊಂಡು ತತ್ವೇಶರ ಸಹಿತ ಉಭಯ ತತ್ವಗಳಿಂದ ಯುಕ್ತನಾಗಿ ಬ್ರಹ್ಮಾಂಡದವಳಗೆ ಪತ್ರದಮ್ಯಾಲೆ ಮುಕ್ತಶೇಷಪರಿಯಂಕದ ಮ್ಯಾಲೆ ಮಲಗಿದನು. ಬೆಳಿಗ್ಗೆ ಎದ್ದು ಆಉದಕವನ್ನು ಶೋಷಣಮಾಡಿ ಗರ್ಭೋದಕ ಘನೋದಕವನ್ನು ಉಳಿಸಿ ಬಯಲು ಮಾಡಿದನು. ಶ್ವೇತದ್ವೀಪ, ಅನಂತಾಸನ, ವೈಕುಂಠ, ಅಂಧತಮಸ್ಸು, ನಿತ್ಯನರಕ, ಪುರಂಜನಸಂಬಂಧ ಪ್ರದೇಶಗಳು ಹೊರಗೆ ಬಿದ್ದವು. ಮೂರುಸ್ಥಳದಲ್ಲಿ ಶ್ರೀಭಾಗಮಟ್ಟಿಗೆ ನಿತ್ಯವಾಗಿ ಇದ್ದದ್ದು. ಚರಮದೇಹ–ಕಡೆಯದೇಹ.

ಅಂಧತಮಸ್ಸಿನಲ್ಲಿ ಮುಕ್ತಪ್ರದೇಶ ನಿತ್ಯವಾಗಿ ಇದ್ದದ್ದು. ನಿತ್ಯನರಕಗಳು ನಿತ್ಯವಾಗಿಇದ್ದದ್ದು, ಅನಂತರ ವೈಕುಂಠ,ಶ್ವೇತದ್ವೀಪ, ಅನಂತಾಸನ ಈಸ್ಥಳಗಳಲ್ಲಿ ಅಪ್ರಾಕೃತ ಪ್ರಕೃತಿತತ್ವಗಳಿಂದ ಮುಕ್ತಸ್ಥಾನ, ಜಡಪ್ರಕೃತಿತತ್ವಗಳಿಂದ ಅಮುಕ್ತಸ್ಥಾನಗಳು ಸೃಷ್ಟಿಮಡಿದನು. ಭೂಭಾಗ,ದುರ್ಗಾಭಾಗಗಳಲ್ಲಿ, ಅನಂತಹಿಂದಿನ ಕಲ್ಪದಲ್ಲಿ ಲಿಂಗಭಂಗವೈದಿದ ಮುಕ್ತಿಯೋಗ್ಯ ರಾದ ಸ್ತ್ರೀಪುರುಷರನ್ನು ಕರಕೊಂಡು ಬಂದು ಲಕ್ಷ್ಮೀದೆವಿಯರಿಂದ ಅಭಿಮನ್ಯಮಾನವಾದ ಅಪ್ರಾಕೃತ "ಅರ" "ಅಣ್ಯ" ಎಂಬ ಸಮುದ್ರಗಳಲ್ಲಿ ಸ್ನಾನವಮಾಡಿಸಿ ಸ್ವರೂಪದಲ್ಲಿ ಸೇರಿದ ಜೀವಾಚ್ಛಾಧಿಕ, ಪರಮಾಚ್ಛಾಧಿಕ ಎಂಬ ಅಜ್ಞಾನಗಳ ಆಶ್ರಯಗಳಾದ ಎರಡು ಪೆಸರುಗಳನ್ನು 'ಆಹಿತ್ಯಚಮಿಚ ಸಹದಸುಧು' ನಂತೆ ಬಿಡಿಸಿ ಅನಂತರ ಅವರವರ ಬಿಂಬರೂಪಗಳನ್ನು ಅವರವರಿಗೆ ದರ್ಶನವಮಾಡಿಸಿದನು. ಅನಂತರ ಲಕ್ಷ್ಮೀದೇವಿಯವ್ಯಾಪ್ತಿ, ಅನಂತರ ವಾಸುದೇವನಲ್ಲಿ ಪ್ರವೇಶಮಾಡಿ ಅತ್ತಸಾಕ್ಷಾತ್ಕಾರ ಹೊಂದಿಸಿ (ಪರಮಾಚ್ಛಾಧಿಕ) ವಾಸುದೇವ ಇಚ್ಛಾವರಣ ಅಪಸರಣ ಲಕ್ಷ್ಮೀದೇವರ (ಜೀವಾಚ್ಛಾಧಿಕ) ಇಚ್ಛಾವರಣದಿಂದ ಕೂಡಾ ಮುಕ್ತನಾಗಿ ಸ್ವರೂಪದೇಹ ಚರ್ಮದೇಹಕ್ಕೆ ಅಪಸರಣಮಾಡಿಕೊಟ್ಟನು. ಅದರಿಂದ ನಿಂತನು. ಸ್ವರೂಪದೇಹಕ್ಕೆ ವೃದ್ಧಿಯುಂದರೆ ಅಪ್ರಾಕೃದತತ್ವದ ಅಂಶಗಳು, ಅಪ್ರಾಕೃತತೈಜಸದಂಬಂಧ ಅಂಶಗಳು ತ್ರಿವಿಧಭಾಗಗಳನ್ನು ಸೇರಿಸಿ, ಅನಂತರ ಅವರಅಪ್ರಾಕೃತ ಸೂಕ್ಷ್ಮದೇಹದ ಅಂಶಗಳನ್ನು ಹೊರಡಿಸಿ ಉಭಯವುಕಲಿಸಿ ತತ್ವೇಶರಿಗೆ ಗರುಡ ಶೇಷ ಮಾರ್ಗಗಳಿಂದ ಸ್ವರೂಪದೇಹಗಳು ಚರಮದೇಹ ಸಾಮಾನ್ಯ ಸೃಷ್ಟಿಮಾಡಿದನು. ಆತತ್ವೇಶರ ಸ್ವರೂಪದೇಹಗಳ ಅಂಶಗಳು, ಆತತ್ವೇಶರ ಆರಂಭಮಾಡಿ ತೃಣಾಂತ ಸರ್ವಜೀವರುಗಳ ಸೂಕ್ಷ್ಮಸ್ವರೂಪ ದೇಹಗಳ ಅಂಶಗಳು

ಉಭಯವು ಕಲಿಸಿ ಚರ್ಮದೇಹಕ್ಕೆ ಸಮಾನ ಮಾಡಿಕೊಟ್ಟನು. ಆದ್ದರಿಂದ ಮುಕ್ತ ತತ್ವೇಶರಿಗೆ ಮೋಕ್ಷದಲ್ಲಿ ಸ್ವರೂಪದೇಹದಲ್ಲಿ ಪ್ರವೇಶಉಂಟು. ಸಂವರ್ಣ ದಲ್ಲಿ ಮಲಿನ ಸೇರಿದಂತೆ ಸ್ವರೂಪದಲ್ಲಿ ಸೇರಿದ ಜೀವಾಚ್ಛಾಧಿಕ ಪರಮಾಚ್ಛಾಧಿಕ ಎಂಬುವ ಅಜ್ಞಾನಕಳೆದು, ಪರಮಾಚ್ಛಾಧಿಕಕ್ಕೆ ಅಪಸರಣ ಜೀವಾಚ್ಛಾಧಿಕಕ್ಕೆ ನಾಶ.ಅನಂತರ ನಾಲ್ಕು ವಿಧ ಯೋಗ್ಯತಾನುಸಾರ ಮೋಕ್ಷ ಕೊಟ್ಟನು. 1.ಬ್ರಹ್ಮಾದಿ ಪುಷ್ಕರಾದಿ ತತ್ವೇಶರಿಗೆ ಸಾಯುಜ್ಯಾದಿ ಮೋಕ್ಷ, 2.ಕರ್ಮಜರಿಗೆ ಸಾಮೀಪ್ಯಾದಿ ಮೋಕ್ಷ, 3.ಅಜಾನಜರಿಗೆ ಸಾರೂಪ್ಯಾದಿ ಮೋಕ್ಷ. 4.ಸಾಂಶರಿಗೆ ಸಾರೂಪ್ಯ, 5.ನಿರಂಶರಿಗೆ ಮೇರುಪರ್ವತಾರಂಭವಾಡಿ ಸರ್ವಲೋಕಾದಿಗಳಲ್ಲಿ ಸ್ಥಿತಿ.ಸಾಯುಜ್ಯಲಕ್ಷಣಮೋಕ್ಷ. ಮೋಕ್ಷಪ್ರಕಾಶ ರೂಪರಾದ ತತ್ವೇಶರಿಗೆ ಮುಕ್ತಿ ಶೇಷದೇವರಲ್ಲಿ, ಶೇಷದೇವಿಗೆ ಬ್ರಹ್ಮ ದೇವರಲ್ಲಿ, ಬ್ರಹ್ಮದೇವರು ಲಕ್ಷ್ಮೀದೇವಿಯಲ್ಲಿ. ಲಕ್ಷ್ಮೀದೇವಿಯರಿಗೆ ವಾಸುದೇವನಲ್ಲಿ ಪ್ರವೇಶ. ಆದರೂ ತಮ್ಮ ತಮ್ಮ ಆನಂದವನ್ನೇ ಅನುಭವವಮಾಡುತ್ತಾರೆ. ಕ್ಲುಪ್ತಸುಖಸ್ವರೂಪದೇಹದಿಂದ ಪ್ರಾಪ್ತಿ. ವ್ಯಸುಖ ಶುದ್ಧಸತ್ವದೇಹದಿಂದ ಅನುಭವ. ಮುಕ್ತರ ಶೂದ್ಧ ಸತ್ವದೇಹಗಳು ತ್ರಿವಿಧ ಸಾತ್ವಿಕಭಾಗಗಳು ಸೇರಿದಂತವು. ರಮಾದೇವಿಯರದ್ದು ಸಾತ್ವಿಕ ಶುದ್ಧಸತ್ವ ಸೇರಿದಂಥಾದ್ದು. ಆಲಕ್ಷ್ಮೀದೇವರ ದೇಹಗಳು ಪ್ರಾಕೃತ, ಅಪ್ರಾಕೃತ ಸಂಬಂಧಗಳು ಪ್ರಾಕೃತಶುದ್ಧ ತತ್ವದೇಹಸಂಬಂಧ ಅಂಶಸತ್ಯಭಾಮಾದೇವಿಯರದ್ದು. ಆದಕಾರಣ ಸೀತಾರೂಪ ಬಾರಲಿಲ್ಲ. ರುಕ್ಮಿಣೀದೇವಿಯರಲ್ಲಿ ಸೀತಾರೂಪ ಬಂದದೆ. ಆದಕಾರಣ ಮೂಲರೂಪ ಅಂಶ ರುಕ್ಮಿಣಿದೇವಿಯರು. ಸತ್ಯಭಾಮಾದೇವಿಯರದು ಅಂಶಾಂಶರೂಪ.

ಬ್ರಹ್ಮದೇವರಂತೆ ಇದ್ದು ಲಕ್ಷ್ಮೀದೇವಿಯರು ನವನಾರೀಕುಂಜರದಂತೆ ಇದ್ದ ತನ್ನರೂಪದಲ್ಲಿ ಸೇರಿ ಅನಂತರ ವಾಸುದೇವನಲ್ಲಿ ಪ್ರವೇಶ.

**ತಮೋಯೋಗ್ಯರವಿಷಯು:** ವಾಸುದೇವನಾಮಕ ಪರಮಾತ್ಮ ಹಿಂದಿನಕಲ್ಪದಲ್ಲಿ ಲಿಂಗ ಭಂಗವನ್ನೈದಿದ ಕಲ್ಯಾದಿ ತೃಣಾಂತ ಸ್ತ್ರೀಪುರುಷರುಗಳನ್ನು ಕರಕೊಂಡು ಅಂಧತಮಸ್ಸಿನ ಸಮೀಪಕ್ಕೆ ಹೋಗಿ ತನ್ನಗದಾದಿಂದ ಹೊಡೆದು ಆದೇಹಗಳಲ್ಲಿದ್ದ ಸಾತ್ವಿಕ,ರಾಜಸ,ತಾಮಸ ಭಾಗಗಳನ್ನು ಹೊರಿಡಿಸಿ ತಾಮಸಭಾಗವನ್ನು ನಿಂದ್ರಿಸಿ ಆತ್ಮಸಾಕ್ಷಾತ್ಕಾರ ಮಾಡಿಸಿ ನೀಲವರ್ಣ ವಿಶಿಷ್ಟಗಳಾದ ತಮ್ಮ ತಮ್ಮ ಬಿಂಬರೂಪಗಳದರ್ಶನ ಮಾಡಿಸಿ "ವಲಕ್ತಾ" ಎಂಬುವ ಹೆಸರು ಕೊಟ್ಟು ತನ್ನ ಇಚ್ಛಾವರಣ ಅಪಸರಣಮಾಡಿ ಅವರವರ ಸ್ವರೂಪದುಃಖಗಳನ್ನು ಅನುಭವಕ್ಕೆ ತಂದುಕೊಟ್ಟನು. ಮುಕ್ತಿಯೋಗ್ಯರಂತೆ ಅವರವರ ದುಃಖಕರಗಳಾದ

ಸ್ವರೂಪದೇಹದ ಅಂಶಗಳು ಅಪ್ರಾಕೃತಗಳಾದ ಮೂಲಜಡ ಪ್ರಕೃತಿ ಅಂಶಗಳು ಹೊರಡಿಸಿ ಉಭಯವೂ ಕಲಿಸಿ ಚರಮದೇಹಕ್ಕೆ ಸಮಾನಮಾಡಿಕೊಟ್ಟನು. ಅದರಿಂದ ಕ್ಲುಪ್ತ ಸುಖಾನುಭವ ಶುದ್ಧ ತಾಮಸ ದೇಹದಿಂದ ಪ್ರಾಪ್ತವ್ಯದುಃಖಾನುಭವ ಮಾಡೋ ಉದ್ದೇಶ್ಯ ತಾರತಮ್ಯಾನುಸಾರ ಅಂಧತಮಸ್ಸಿನಲ್ಲಿ ಹಾಕಿದನು.

**ನಿತ್ಯಸಂಸಾರಿಗಳವಿಷಯ :** ಹಿಂದಿನಕಲ್ಪದಲ್ಲಿ ಲಿಂಗಭಮಗವನ್ನೈದಿದ ಪುರಂಜ ನಾದಿ ತೃಣಾಂತ ಸ್ತ್ರೀಪುರುಷರನ್ನು ಅಂಧತಮಸ್ಸಿನ ಮೇಲ್ಭಾಗದಲ್ಲಿ ಇರತಕ್ಕ ನಿತ್ಯನರಕರೂಪ ವಾದ ಪುರಂಜನಲೋಕಕ್ಕೆ ಕರೆದುಕೊಂಡುಹೋಗಿ ತನ್ನ ಕೋಪಾಗ್ನಿಯಿಂದ ಅವರವರ ಸ್ವರೂಪದೇಹಗಳನ್ನು ಸುಟ್ಟು ಭಸ್ಮಮಾಡಿ ಅಲ್ಲಿಯ ಸಾತ್ವಿಕ ತಾಮಸ ಭಾಗಗಳನ್ನು ಹೊರಡಿಸಿ ರಾಜಸಮಟ್ಟಿಗೆ ಉಳಿಸಿ ಆತ್ಮಸಾಕ್ಷಾತ್ಕಾರ ಮಾಡಿಸಿ ರಕ್ತವರ್ಣವಿಶಿಷ್ಟಗಳಾದ ತಮ್ಮ ತಮ್ಮ ಬಿಂಬರೂಪಗಳನ್ನು ದರುಶನಮಾಡಿಸಿ ತನ್ನ ಇಚ್ಛಾವರಣ ಅಪಸರಣಮಾಡುತ್ತಾ "ಮುಕ್ತಾ" ಎಂಬುವ ಹೆಸರುಗಳನ್ನು ಕೊಟ್ಟು ಅವರ ಸ್ವರೂಪ ಸಂಬಂಧ ಅಂಶಗಳು ಅಪ್ರಾಕೃತ ರಾಜಸ ಪ್ರಕೃತಿಸಂಬಂಧ ಅಂಶಗಳು ಹೊರಡಿಸಿ ಉಭಯವೂಕಲಿಸಿ ಚರಮದೇಹಕ್ಕೆ ಸಮಾನಮಾಡಿ ಕೊಟ್ಟನು. ಅದರಿಂದ ಕ್ಲುಪ್ತ ಮಿಶ್ರ ದುಃಖಾನುಭವ ಪ್ರಾಪ್ತವ್ಯ ದುಃಖಾನುಭವ ಶುದ್ಧ ರಾಜಸ ದೇಹಗಳಿಂದ ಅನುಭವ ಮಾಡೋ ಉದ್ದೇಶ್ಯ ನಿತ್ಯನರಕವಾದ ಪುರಂಜನಲೋಕದಲ್ಲಿ ಹಾಕಿದನು.

**ಶ್ರೀಮಧ್ವೇಶಾರ್ಪಣಮಸ್ತು.**

## ಸೃಷ್ಟಿಪ್ರಕ್ರಿಯ

ಅನಿರುದ್ಧನಾಮಕ ಪರಮಾತ್ಮ ಮೂಲಜಡಪ್ರಕೃತಿ ದಶೆಯಿಂದ ಸತ್ವ,ರಜಸ್ತಮೋಗುಣಗಳನ್ನು ಸೃಷ್ಟಿಮಡಿದನು. ಅದರಿಂದ ಮಹತ್ತತ್ವವನ್ನು ಸೃಷ್ಟಿಮಾಡಿದನು. ಅದರಿಂದ ಅಹಂಕಾರತತ್ವ ವನ್ನು ಸೃಷ್ಟಿಮಾಡಿದನು. ಅಹಂಕಾರತತ್ವ ಮೂರುಭಾಗ: 1.ವೈಕಾರಿಕ; 2.ತೈಜಸ: 3.ತಾಮಸ ಎಂದು ಮೂರುವಿಧ.

1. ವೈಕಾರಿಕದಿಂದ ದೇವತೆಗಳದೇಹವನ್ನು; 2.ತೈಜಸದಿಂದ ಇಂದ್ರಿಯಗಳನ್ನು; 3.ತಾಮಸ ದಿಂದ ಪಂಚಭೂತಗಳನ್ನು ಸೃಷ್ಟಿಮಾಡಿದನು. ಈತತ್ವಗಳಿಂದ ಬ್ರಹ್ಮಾದಿ ಪುಷ್ಕರಾಂತ ತತ್ವೇಶರನ್ನು ಪುನಹ ಈತತ್ವಗಳನ್ನು ಎಲ್ಲಾಕಲಿಸಿ ವಿರಾಟ್‌ಬ್ರಹ್ಮನ ದೇಹದಲ್ಲಿ ದೇವರು ಮೊದಲುಮಾಡಿ ಪುಷ್ಕರಾಂತ

ತತ್ವೇಶರು ಪ್ರವೇಶ ಮಾಡಿದರು. ಪುನಹ ಈತತ್ವಗಳನ್ನು ಎಲ್ಲ ಕಲಸಿ ವಿರಾಟ್‌ಬ್ರಹ್ಮನ ದೇಹವನ್ನು ಸೃಷ್ಠಿಮಾಡಿದನು. ಆಗ್ಗೆ ಸಕಲ ತತ್ವೇಶರಿಗೂ ನಾವು ದೊಡ್ಡವರು, ನಾವುದೊಡ್ಡವರು ಎಂಬ ವಿವಾದ ಉತ್ಪನ್ನವಾಯಿತು. ಆಗ್ಗೆ ತತ್ವೇಶರೆಲ್ಲ ದೇಹವನ್ನು ಬಿಟ್ಟು ಬಂದರು. ದೇಹಬೀಳಲಿಲ್ಲ. ವಾಯುದೇವರು ದೇಹವನ್ನು ಬಿಡೋಣ ದಿಂದ ದೇಹಪತನವಾಯಿತು. ಆಗ್ಗೆಒಬ್ಬೊಬ್ಬ ತತ್ವೇಶರು ಪ್ರವೇಶಮಾಡಿದರು ದೇಹಮೇಲೇ ಏಳಳಿಲ್ಲ. ಆಗವಾಯುದೇವರು ಪ್ರವೇಶಮಾಡೋಣದರಿಂದ ದೇಹ ಎದ್ದಿತು. ಆದಕಾರಣ ವಾಯುದೇವರು ಜೀವೋತ್ತಮರು. ಅನಿರುದ್ಧನಾಮಕ ಪರಮಾತ್ಮ ಆತತ್ವೇಶರ ಆರಂಭಮಡಿ ತೃಣಾಂತ ಕಲ್ಯಾದಿ ಸಕಲಜೀವರುಗಳಿಗೂ ಅನಿರುದ್ಧ ದೇಹವನ್ನು ಸೃಷ್ಠಿಮಾಡಿದನು. ಎಂದರೆ ಪೂರ್ವೋಕ್ತಗಳಾದ ಮೂಲಜಡ ಪ್ರಕೃತಿತತ್ವಗಳ ಅಂಶಗಳು, ಅವರವರ ಲಿಂಗ ದೇಹದಸಂಬಂಧ ಅಂಶಗಳು ಹೊರಡಿಸಿ ಸಾತ್ವಿಕರಿಗೆ ಶುಭ್ರವರ್ಣ, ರಾಜಸರಿಗೆ ರಕ್ತವರ್ಣ, ತಾಮಸರಿಗೆ ನೀಲವರ್ಣ, ವಿಶಿಷ್ಟವಾದ ಅನಿರುದ್ಧದೇಹವನ್ನು ಸೃಷ್ಠಿಮಾಡಿದನು. ಆಲಿಂಗದೇಹದಲ್ಲಿ ಸೇರಿದ ಅಪ್ರಾಕೃತ ತತ್ವಗಳ ಅಂಶಗಳು, ಈತತ್ವಗಳಲ್ಲಿ ಸೇರಿದ ಅಪ್ರಾಕೃತ ತತ್ವಗಳ ಅಂಶಗಳು, ಉಭಯವೂ ಅನಿರುದ್ದದೇಹದಲ್ಲಿ ಕಲಿಯೋಣದರಿಂದ ಮುಕ್ತಸ್ಥಾನ ಎಂತ ಹೆಸರು. ಪ್ರಕೃತಿತತ್ವಗಳುಸೇರಿದ ಅಂಶಕ್ಕೆ ಅಮುಕ್ತಸ್ಥಾನ ಎಂತ ಹೆಸರು. ಅನಿರುದ್ಧದೇಹ ದಲ್ಲಿ 72101 ನಾಡಿಗಳು. ಸಪ್ತಧಾತುಗಳು, (32) ಮೂವತ್ತೆರಡು ಕಮಲಗಳು, ಪಂಚ ಕೋಶಗಳು ಉಳ್ಳಂಥಾದ್ದು. ಷೋಡಶಕಳಗಳು ಉಳ್ಳಂಥಾದ್ದು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚತನ್ಮಾತ್ರ, ಮನಸ್ಸು ಅಂತೂ (16) ಕಳೆಗಳು. ಅನಿರುದ್ಧದೇಹ ಜೀವನಸ್ವರೂಪ ಯಾವ ಆಕಾರವಿರುತ್ತದೆಯೋ, ಆ ಆಕಾರದಂತೆ ಇರುತ್ತದೆ. ಈ ಅನಿರುದ್ಧ ದೇಹದಲ್ಲಿರತಕ್ಕ ಸಕಲ ಭಗವದ್ರೂಪಗಳು ಪೂರ್ವಾಭಿಮುಖಗಳಾಗಿವೆ. ಬ್ರಹ್ಮನಾಡಿಸಂಬಂಧ ಶಾಖಾನಾಡೀವಳಗೆ ಇರತಕ್ಕ ಹೃದಯಕಮಲದಲ್ಲಿ ಇರತಕ್ಕ ಮೂರು ಭಗವದ್ರೂಪಗಳು ಮೂಲೇಶ, ಪ್ರಾದೇಶ, ಅಗ್ರೇಶ, ಈಮೂರು ಮಾತ್ರ ಪಶ್ಚಿಮಾಭಿಮುಖಗಳು. ಈರೂಪಗಳು ಇರತಕ್ಕಭಾಗ ಆಕಾಶಭಾಗ ಅದು ದೇವರು ಅಪ್ರಾಕೃತಭಾಗದಲ್ಲಿ, ರಮಾದೇವಿರು ತೇಜೋ ಭಾಗದಲ್ಲಿ, ಜೀವನಸ್ವರೂಪಭಾಗದಲ್ಲಿ ಬ್ರಹ್ಮವಾಯುಗಳು, ಸರಸ್ವತಿ,ಭಾರತಿದೇವಿಯರು ಇರತಕ್ಕಸ್ಥಳ. ಮೂಲೇಶನಪಾದ ಮೂಲದಲ್ಲಿ ಜೀವ ಪೂರ್ವಾಭಿಮುಖವಾಗಿ ಕೂತಾನೆ. ಅಲ್ಲಿ ವಾಯುದೇವರು ಕೂಡಾ ಶ್ವಾಸಮಂತ್ರಜಪಮಾಡುತ್ತಾಕೂತಾರೆ. ಪ್ರಾಜ್ಞನಾಮಕ ಪರಮಾತ್ಮ ಹೃದಯದಲ್ಲಿ, ತೈಜಸನಾಮಕ ಪರಮಾತ್ಮ ಕಂಠದಲ್ಲಿ, ವಿಶ್ವನಾಮಕ ಪರಮಾತ್ಮ

ಚಕ್ಷುವಿನಲ್ಲಿ, ಶಿರೋಭಾಗದಲ್ಲಿ ಸಹಸ್ರದಳ ಕಮಲದಲ್ಲಿ ತುರಿಯನಾಮಕ ಪರಮಾತ್ಮನಿದ್ದಾನೆ. ಮೂಲೇಶ, ಪ್ರಾದೇಶ, ಅಗ್ರೇಶ ಈಭಗವದ್ರೂಪಗಳ ಸಮೀಪದಲ್ಲಿ 9 ಒಂಭತ್ತುಕೋಟಿ ದೇವತೆಗಳು ಸೇರಿದ್ದಾರೆ. ಈಭಗವದ್ರೂಪಗಳು, ಈದೇವತೆಗಳು ಮುಕ್ತಯೋಗ್ಯರಲ್ಲಿ ಶುಭ್ರವರ್ಣದಿಂದ ಸೇರಿದ್ದಾರೆ. ನಿತ್ಯಸಂಸಾರಿಗಳಲ್ಲಿ ರಕ್ತವರ್ಣದಿಂದ ಸೇರಿದ್ದಾರೆ. ತಮೋಯೋಗ್ಯರಲ್ಲಿ ನೀಲವರ್ಣದಿಂದ ಸೇರಿದ್ದಾರೆ.

**ದೇವರ ಅಪ್ರಾಕೃತದಲ್ಲಿ ಮೂರುಭಾಗ :** 1.ಶ್ವೇತದ್ವೀಪ; 2.ಅನಂತಾಸನ; 3.ವೈಕುಂಠ; ರಮಾ ಅಪ್ರಾಕೃತದಲ್ಲಿ 1.ಶ್ರೀಭಾಗ; 2.ಭೂಭಾಗ; 3.ದುರ್ಗಾಭಾಗ; ದೇವರಭಾಗದಲ್ಲಿ ಬ್ರಹ್ಮಾ, ವಿಷ್ಣು, ಮಹೇಶ್ವರ. ರಮಾಭಾಗದಲ್ಲಿ ವಿಶ್ವ,ತೈಜಸ, ಪ್ರಾಜ್ಞ, ಜೀವನ ಅಪ್ರಾಕೃತದಲ್ಲಿ ಬ್ರಹ್ಮ,ವಾಯು. ಜೀವನ ಪ್ರಾಕೃತ ಲಿಂಗದೇಹ ಸಂಬಂಧ ಕಾರಣಭಾಗದಲ್ಲಿ ಭಾರತಿ ಸರಸ್ವತಿದೇವಿಯರು. ಮುಕ್ತಿಯೋಗ್ಯಜೀವರ ಸಾತ್ವಿಕ ಅಪ್ರಾಕೃತಸಾತ್ವಿಕ ಭಾಗ ಶುಭಕರವಾದದ್ದು. ರಾಜಸ ತಾಮಸ ಭಾಗಗಳಲ್ಲಿ ಜೀವಾಚ್ಛಾಧಿಕ, ಪರಮಾಚ್ಛಾಧಿಕ ಇರುವುದು. ನಿತ್ಯಸಂಸಾರಿಗಳಿಗೆ ರಾಜಸಮಟ್ಟಿಗೆ ಇರತಕ್ಕದ್ದು. ಮಿಶ್ರದುಃಖ ಇರತಕ್ಕದ್ದು. ತಾಮಸಸಾತ್ವಿಕಗಳೆರಡು ಹೋಗುತ್ತವೆ. ತಮೋ ಯೋಗ್ಯರಿಗೆ ತಾಮಸ ಮಾತ್ರ ಉಳಿದು ಸಾತ್ವಿಕ ರಾಜಸವೆರಡು ಹೋಗುತ್ತದೆ. ತಾಮಸಭಾಗ ನಿತ್ಯದುಃಖ ರೂಪವಾದದ್ದು. ಪರಮಾಚ್ಛಾಧಿಕ ಮಾತ್ರ ಉಳಿಯುತ್ತದೆ. ಆಗ ದಿನಪ್ರಳಯವಾಯಿತು. ಆ ಪ್ರಳಯದಲ್ಲಿ ವಾಸುದೇವನಾಮಕ ಪರಮಾತ್ಮನ ನಾಭಿಕಮಲದಿಂದ ಬ್ರಹ್ಮದೇವರು ಉತ್ಪನ್ನ ರಾದರು. ನಾಲ್ಕುದಿಕ್ಕುಗಳು ನೋಡಿದ್ದರಿಂದ ನಾಲ್ಕುಮುಖಗಳಾದವು. "ತಪ,ತಪ" ಎಂಬುವ ಶಬ್ದವನ್ನು ಕೇಳಿತಪಸ್ಸುಮಾಡುತ್ತ ಕುಳಿತನು. ಆಗ್ಗೆ ವಿರಾಟ್‌ಬ್ರಹ್ಮನು ಆಉದಕವನ್ನು ಶೋಷಣ ಮಾಡಿ,ಆನಾಭಿಕಮಲದಳದಿಂದ ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಿದನು. ಆಹದಿನಾಲ್ಕು

ಲೋಕಕ್ಕೆ ಆಧಾರಭೂತನಾಗಿ ವಂದಂಶದಿಂದ ವಿರಾಟ್‌ರೂಪದಿಂದ ನಿಂತನು. ಆವಿರಾಟ್ ಬ್ರಹ್ಮನು ಸೃಷ್ಟಿಯೊಳಗೆ ಇರತಕ್ಕ ಸಕಲ ಜೀವರಿಗೂ ಅನಿರುದ್ಧದೇಹಗಳ ಉದಕಭಾಗದಲ್ಲಿ ತ್ರಿವೃತ್ತೀಕರಣಗಳಿಂದ ಸೂಕ್ಷ್ಮದೇಹಗಳನ್ನು ಸೃಷ್ಟಿಮಾಡಿದನು. ಆದೇಹಗಳ ಅಭಿಮಾನಿ ಗರುಡ, ಶೇಷ, ರುದ್ರರು. ಆವಿರಾಟ್‌ಬ್ರಹ್ಮನು ತನ್ನದೇಹದ ಅವಯವಗಳಿಂದ ಸರುವ ತತ್ವೇಶ ರನ್ನು ಸೃಷ್ಟಿಮಾಡಿದನು. ರೋಮಗಳಿಂದ ವೃಕ್ಷಗಳನ್ನು ಸೃಷ್ಟಿಮಾಡಿದನು. ನಾಡಿಗಳಿಂದ ನದಿಗಳನ್ನು ಸೃಷ್ಟಿಮಾಡಿದನು.ಅಸ್ಥಿಗಳಿಂದ ಪರ್ವತಗಳನ್ನು ಸೃಷ್ಟಿಮಾಡಿದನು.

ಯಜ್ಞಗಳಿಗೆ ಸಾಧಕವಾದ ಸಕಲಪದಾರ್ಥಗಳನ್ನು ತ್ರಿವೃತ್ಕರಣೆಯಿಂದ ಸೃಷ್ಟಿಮಾಡಿದನು. ಯಜ್ಞಾದಿಗಳನ್ನು ಸೃಷ್ಟಿಮಾಡಿದನು. ಆಗ್ಗೆ ದಿನಪ್ರಳಯವಾಯಿತು. ಬ್ರಹ್ಮದೇವರು ಬೆಳಗ್ಗೆ ಎದ್ದು ಆಸತ್ಯಲೋಕದವಳಗೆ ವ್ಯಾಪ್ತವಾದ ಉದಕವನ್ನು ಪಾನಮಾಡಿ ಸೃಷ್ಟಿಮಾಡಬೇಕೆಂದು ಉದ್ಯುಕ್ತರಾಗಿ ಭೂಮಿಯನ್ನು ಕಾಣದೆ ವಾಸುದೇವನನ್ನು ಸ್ತೋತ್ರಮಾಡಿದನು. ಸ್ತೋತ್ರಪ್ರೀತನಾದ ಶ್ರೀಶನು ಬ್ರಹ್ಮದೇವರ ನಾಸಾಪುಟ ದಿಂದ ವರಾಹರೂಪದಿಂದ ಪ್ರಾದುರ್ಭಾವನಾದಸ್ವಾಮಿಯು ಆದಿಹಿರಣ್ಯಾಕ್ಷನನ್ನು ಸಂಹಾರ ಮಾಡಿ ವೇದವನ್ನು ಭೂಮಿಯನ್ನು ಕಾಪಾಡಿದನು. ಅಲ್ಲಿನೆಲಸಿದ್ದ ಮಧುಕೈಠಭರೆಂಬ ದೈತ್ಯ ರನ್ನು ಸಂಹಾರಮಾಡಿ ಅವರುಗಳ ಮೇಧಸ್ಸನ್ನು ಭೂಮಿಗೆ ಹೆಪ್ಪುಕೊಟ್ಟು ಕಠಿಣವನ್ನಾಗಿ ಮಾಡಿದನು. ಎಡಭಾಗ ಆಧಾರಭೂತವಾಗಿ ವಜ್ರರೂಪವಾದ ಶಿಲಾವನ್ನುಸೃಷ್ಟಿಮಾಡಿ ಗರ್ಭೋ ದಕದಲ್ಲಿದ್ದ ಸಹಸ್ರಫಣೆಗಳಿಂದ ಯುಕ್ತವಾದ ಶೇಷದೇವರ ಶಿರಸ್ಸಿನ ವ್ಯಾಲೆ ಇಟ್ಟನು. ಕದಲದಂತೆ ಅಷ್ಟದಿಗ್ಗಜಗಳನ್ನು ನಿಂದಿರಿಸಿದನು. ಶೇಷದೇವರಿಗೆ ಆಧಾರಭೂತವಾಗಿ ವಾಯುದೇವರು ಕೂರ್ಮರೂಪದಿಂದ ನಿಂತರು. ಶಕ್ತಿಪುರುಷರೂಪದಿಂದ ಕೂಡಿನಿಂತನು. ಆಗ್ಗೆ ಬ್ರಹ್ಮ ದೇವರ ಸೂಕ್ಷ್ಮರೂಪದಿಂದಸೃಷ್ಟರಾದ ಸರ್ವಜೀವರುಗಳ ಅನಿರುದ್ಧದೇಹಸಂಬಂಧ ಭೂಭಾಗಗಳಲ್ಲಿ ಪಂಚೀಕರಣ ಪ್ರಕಾರ ತ್ರಿಗುಣಾತ್ಮಕವಾದ ಸ್ಥೂಲದೇಹಗಳನ್ನು ಸೃಷ್ಟಿಮಾಡಿದನು. ಆದೇಹಗಳ ಸತ್ವಭಾಗಗಳಲ್ಲಿ ಅಪರೋಕ್ಷಿಗಳಾದ ಮೂವತ್ತುಮೂರುಕೋಟಿ ದೇವತೆಗಳು ನಿಂತರು. ರಾಜಸಭಾಗದಲ್ಲಿ ಪುರಂಜನಾದಿಗಳು ಕೂಡಾ ನಿಂತರು. ಆಗ್ಗೆ ಬ್ರಹ್ಮದೇವರು ಸತ್ಯಲೋಕದಲ್ಲಿ ತಮ್ಮ ಅವಯವಗಳಿಂದ ದೇವತೆಗಳನ್ನು ಋಷಿಗಳನ್ನು ಸೃಷ್ಟಿಮಾಡಿದನು. ಅವರುಗಳು ಮೇರುಪರ್ವತದಲ್ಲಿಇದ್ದ ಬ್ರಹ್ಮದೇವರಲ್ಲಿ ವೈಜಯಂತಿಎಂಬ ಸ್ಥಳದಲ್ಲಿ ಸತ್ಯಲೋಕದಲ್ಲಿ ಸಾಧನಗಳು ಮಾಡುತ್ತಾ ನಿಂತರು. ಒಂದು ಅಂಶಗಳಿಂದ ಶ್ವೇತದ್ವೀಪ, ಅನಂತಾಸನ, ವೈಕುಂಠ ಈಸ್ಥಾನಗಳಲ್ಲಿದ್ದು ಅಮುಕ್ತಸ್ಥಾನಗಳಲ್ಲಿ ಪ್ರಾರಬ್ಧಾನುಭವ ಮಾಡುತ್ತಾ ನಿಂತ ಆಕಾಲದಲ್ಲಿ ಬ್ರಹ್ಮದೇವರು ಹಿಂದಿನಕಲ್ಪದಲ್ಲಿ ಅಪರೋಕ್ಷಿಗಳಾದ ಅತತ್ವೇಶರನ್ನು 'ನಿರಂಶರನ್ನು', ಅಪರೋಕ್ಷಿ ಗಳಾದವರನ್ನು ತೇಜೋವಿಕೃತಗಳಾದ ದೇಹಗಳಿಂದ ಸೃಷ್ಟಿಮಾಡಿದನು. ಅವರುಗಳಪೈಕಿ ಅತತ್ವೇಶರು ಅಮುಕ್ತಸ್ಥಾನದಲ್ಲಿ ಪ್ರಾರಬ್ಧಸುಖಾನುಭವ ಮಾಡುತ್ತಾನಿಂತರು. ನಿರಂಶ ರಾದವರು ಮಹರಾದಿಲೋಕಗಳಲ್ಲಿ ಜೀವನ್ಮುಕ್ತರಾಗಿ ನಿಂತರು. ಆಗ್ಗೆ ಬ್ರಹ್ಮದೇವರು ಅವಿದ್ಯಾ ಸಂಬಂಧಗಳಾದ ದೇಹಗಳಿಂದ ಕಲ್ಯಾದಿದೈತ್ಯರನ್ನು ಸೃಷ್ಟಿಮಾಡಿದನು. ಅವರುಗಳು ಪಾತಾಳ ಲೋಕದಲ್ಲಿದ್ದ ನಿತ್ಯನರಕದಲ್ಲಿ ಪ್ರಾರಬ್ಧ ದುಃಖಾನುಭವ

ಮಾಡುತ್ತಾನಿಂತರು. ಆಗ್ಗೆ ಬ್ರಹ್ಮ ದೇವರು ಪ್ರಪಂಚವೃದ್ಧಿ ಆಗಬೇಕು ಎಂದು ಮೊದಲು ರುದ್ರದೇವರನ್ನು ಸೃಷ್ಟಿಮಾಡಿದನು. ಆತನಿಂದ ವೃದ್ಧಿಆಗಲಿಲ್ಲ. ಆಮೇಲೆ ನವಪ್ರಜೇಶ್ವರನ್ನು ಸೃಷ್ಟಿಮಾಡಿದನು. ಅವರುಗಳಪೈಕಿ ಕಶ್ಯಪೃಷಿಗಳಿಂದ ದಿತಿದೇವಿಯಲ್ಲಿ ಮೊದಲು ದೈತ್ಯರು ಉತ್ಪನ್ನರಾದರು. ಅವರುಗಳು ವಿತಳ ಲೋಕದಲ್ಲಿ ಪ್ರಾರಬ್ಧದುಃಖಕ್ಕೆ ಸಾಧನಮಾಡುತ್ತಾನಿಂತರು. ಅದಿತಿ ದೇವಿಯಲ್ಲಿ ಇಂದ್ರಾದಿ ದೇವತೆಗಳು ಉತ್ಪನ್ನರಾದರು. ಅವರು ಪ್ರಾರಬ್ಧಕರ್ಮಾನುಭವ ಮಾಡುತ್ತಾಸ್ವರ್ಗಾದಿಗಳಲ್ಲಿ ನಿಂತರು. ಭೂಲೋಕದಲ್ಲಿ ಪ್ರಜಾವೃದ್ಧಿಆಗಬೇಕೆಂಬ ದೃಷ್ಟಿಯಿಂದ ಸ್ವಾಯಂಭುವಮನು ಶತ ರೂಪಾದೇವಿಯರನ್ನು ಸೃಷ್ಟಿಮಾಡಿದನು. ಅವರುಗಳಮಿಥುನೀಭಾವದಿಂದ ಅನೇಕವಿಧ ಪ್ರಜಾ ಸೃಷ್ಟಿ ಆಯಿತು.ನಿರಂಶರಾದ ಸಕಲಜೀವರುಗಳು ಸೃಷ್ಟರಾದರು. ಆಸ್ಥೂಲದೇಹಗಳು ಶುಕ್ಲ ಶೋಣಿತಸಂಬಂಧ ಉಳ್ಳದ್ದು. ಶುಕ್ಲದಿಂದ ಅಸ್ತಿ, ರೋಮ, ನಾಡಿಗಳವಳಗೆ ಹಬ್ಬಿದ ನಾಡಿಗಳನ್ನು ಬೇರುಮಾಡಿಕೊಂಡು ಮೇಲೆ ತೃಣಗಳೋಪಾದಿಲಿ ಬಂದಿವೆ. ಉಳಿದಧಾತುಗಳು ಶೋಣಿರಜನ್ಯ. ಸ್ಥೂಲದೇಹ 16 ಕಲೆಗಳುಳ್ಳದ್ದು. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಪಂಚಭೂತಗಳು, ಮನಸ್ಸು. ಅನಿರುದ್ಧದೇಹಸಂಬಂಧ ನಾಲ್ಕುಭಾಗಗಳು ಈದೇಹದಲ್ಲಿ ಪ್ರವೇಶ. ಅವುಯಾವುದೆಂದರೆ: 1.ಸ್ಥೂಲ; 2.ಸೂಕ್ಷ್ಮ; 3.ಕಾರಣ; 4.ಸ್ವರೂಪ.

1. **ಸ್ಥೂಲ** : ಸ್ಥೂಲಪಂಚೀಕರಣ. (ಪಂಭಭೂತಗಳ ಮಿಶ್ರೀಕರಣ)

2. **ಸೂಕ್ಷ್ಮ** : ಸೂಕ್ಷ್ಮತ್ರಿವೃತ್ತೀಕರಣ.(ಸತ್ವ,ರಜ,ತಮೋ ಗುಣಗಳಮಿಲನ)

3. **ಕಾರಣ** : ಕಾರಣಲಿಂಗದೇಹ ಸಂಬಂಧ.

4. **ಸ್ವರೂಪ** : ಸ್ವರೂಪಸಂಬಂಧ. ಸ್ವರೂಪ ಅನಿರುದ್ಧದೇಹದಲ್ಲಿ ಇದ್ದ ಮೂಲೇಶ, ಪ್ರಾದೇಶ, ಅಗ್ರೇಶ ಇವು ಮೂರು ಬಿಂಬರೂಪಗಳು. ಅವು ಪಶ್ಚಿಮಾಭಿಮುಖಗಳಾಗಿದ್ದರು ಸ್ಥೂಲದೇಹ ಬಂದಕಾಲದಲ್ಲಿ ಪೂರ್ವಾಭಿಮುಖಗಳಾಗಿದ್ದ ಭಗವದ್ರೂಪಗಳು ಸ್ಥೂಲದೇಹಾಕಾರವಾಗಿ ವಂದಂಶದಿಂದ ಪ್ರವೇಶಮಾಡುತ್ತಾರೆ. ಈ ದೇಹದಲ್ಲಿ ಜೀವ ಪ್ರಕಾಶವ್ಯಾಪ್ತನು. ಜೀವನಲ್ಲಿಸೇರಿದ ಅನಾದಿಬಿಂಬನು,ರಮಾದೇವಿಯರು,ತತ್ವೇಶರುಸರ್ವರೂ ಪ್ರವೇಶಮಾಡುತ್ತಾರೆ. ಕರ್ಮವಶಾತ್ ಪಶುಜನ್ಮಬಂದಾಗ ಮೂಲೇಶ, ಪ್ರಾದೇಶರೂಪಗಳು ಪಶುಜನ್ಮದಲ್ಲಿ ಸೇರುತ್ತಾರೆ. ಪ್ರಾದೇಶ ರೂಪನಾದ ಜೀವ. ಅನಾದಿಬಿಂಬರಮಾದೇವಿಯರು, ಬ್ರಹ್ಮಾದಿಪುಷ್ಕರಾಂತ ತತ್ವೇಶರು ತದಾಕಾರರಾಗಿ ಸೇರುತ್ತಾರೆ. ತ್ರಿವೃತ್ತೀಕರಣ ಸೂಕ್ಷ್ಮಭಾಗ; ಪಂಚೀಕರಣ ಸ್ಥೂಲಭಾಗ; ಈಎರಡು

ಪಶುಜನ್ಮದಲ್ಲಿ ಸೇರುತ್ತವೆ. ಆದಕಾರಣ ಪಶುಜನ್ಮದಲ್ಲಿ ಜಾಗ್ರದಾವಸ್ಥ, ಸ್ವಪ್ನಾವಸ್ಥ, ಎರಡೇಪಶುಜನ್ಮದಲ್ಲಿ ಪಶುಗಳಿಗೆ ಕರ್ಮವಶಾತ್ ಮನುಷ್ಯಜನ್ಮ ಬಂದರೆ, ಅವಸ್ಥಾತ್ರಯ ಗಳುಂಟು. ಸ್ವಾಭಾವಿಕವಾದ ಮನುಷ್ಯರಿಗೆ ಪಶುಜನ್ಮಬಂದರೆ ಸ್ವಪ್ನಾವಸ್ಥೆ, ಜಾಗ್ರದಾವಸ್ಥೆ ಎರಡೆ. ಈಸ್ಥೂಲದೇಹ ಅನ್ನದಿಂದ ವೃದ್ಧಿ. ಅನ್ನದಸ್ಥೂಲಭಾಗ ಪುರುಷ, ಮಧ್ಯಭಾಗಮಾಂಸವು. ಸೂಕ್ಷ್ಮಭಾಗ ಮನಸ್ಸಿಗೆ ಉಪಾದಾನಕಾರಣವು. ಉದರದ ಸ್ಥೂಲಭಾಗ ಮೂತ್ರ, ಮಧ್ಯಭಾಗ ರಕ್ತ, ಸೂಕ್ಷ್ಮಭಾಗ ವಾಕ್ಯಕ್ಕೆ ಉಪಾದಾನಕಾರಣವು. ಘೃತಸ್ಥೂಲಭಾಗ ಅಸ್ತಿಗೆ, ಮಧ್ಯೆಭಾಗ ರೇತಸ್ಸಿಗೆ ಸೂಕ್ಷ್ಮಭಾಗಶ್ವಾಸೋಚ್ಛ್ವಾಸಕ್ಕೆ ಕಾರಣ. ಒಂಭತ್ತುಕೋಟಿರೋಮ. ಏಳುಲಕ್ಷಕೇಶಗಳು.

ಅಲ್ಲಿ ಪದ್ಮ, ತ್ವಕ್ಕಿನಲ್ಲಿ ಅನಿರುದ್ಧ,ಚರ್ಮದಲ್ಲಿಪ್ರದ್ಯುಮ್ನ, ಮಾಂಸದಲ್ಲಿ ಸಂಕರುಷಣ, ರುಧಿರದಲ್ಲಿ ವಾಸುದೇವ, ಮೇಧಸ್ಸಿನಲ್ಲಿ ನಾರಾಯಣ, ಈಸ್ಥೂಲದೇಹ ಐದುಪ್ರಕಾರವಾಗಿದೆ. ಒಂದು ಹೋದನಂತರ ವಂದುಬರುತ್ತದೆ. ಐದುಭಾಗವು ಹೋದನಂತರ ವೃಷ್ಟಿದ್ವಾರಾ ಓಷಧಿಗಳಲ್ಲಿ ಪ್ರವೇಶಮಾಡಿ ಪಿತೃಶುಕ್ಲದಲ್ಲಿ ಸೇರಿ ಮಾತೃಗರ್ಭಪ್ರವೇಶಮಾಡುತ್ತಾನೆ. ಇವು ಐದು ದೇಹಗಳು ಕರ್ಮವಶಾತ್ ಬಂದಸ್ಥೂಲದೇಹಾಕಾರ ವಾಗುತ್ತವೆ. ಮಾತೃಗರ್ಭದಲ್ಲಿ ಬೇರೆ ಆಕಾರಬರುತ್ತದೆ. ಏಳನೇ ಮಾಸದಲ್ಲಿ ಆಗರ್ಭದಲ್ಲಿ ಇದ್ದದೇಹಾಕಾರದಲ್ಲಿ ಪ್ರಕಾಶರೂಪನಾದ ಜೀವ, ಅನಾದಿಬಿಂಬ, ತತ್ವೇಶರು,ಮೂಲೇಶ,ಪ್ರಾದೇಶ,ಅಗ್ರೇಶ ಭಗವದ್ರೂಪಗಳು ಪೂರ್ವಾಭಿ ಮುಖಗಳಾಗಿ ದೇಹಾಕಾರಗಳಾಗಿ ಸೇರುತ್ತವೆ. ಪುರಾಣಕಾಲದಲ್ಲಿ ಬಿಟ್ಟುಹೋದ ಪ್ರಾಜ್ಞ ತತ್ವೇಶರು ಸಹಬಾಹ್ಯ ವಿರಾಟ್‌ರೂಪದಲ್ಲಿ ಸೇರಿದವರುಸಹ ಸೇರುತ್ತಾರೆ.ಆಗ್ಗೆ ಜೀವ ದೇವರನ್ನು ಸ್ತೋತ್ರಮಾಡುತ್ತಾನೆ.

**ತ್ರಿವೃತ್ತೀಕರಣ :** ಸತ್ವಾಂಶ: ಆಕಾಶದ ಅಂಶ ಸತ್ವಗುಣದ ಅಂಶಕೂಡಿ ಶ್ರೋತ್ರ ಉತ್ಪತ್ತಿ. ವಾಯುಸತ್ವಾಂಶಕೂಡಿ ತ್ವಗೇಂದ್ರಿಯ ಉತ್ಪತ್ತಿ. ತೇಜಸ್ಸು ಸತ್ವಾಂಶ ಕೂಡಿ ಚಕ್ಷುರಿಂದ್ರಿಯ ಉತ್ಪತ್ತಿ. ಅಪ್ಪು ಸತ್ವಾಂಶಕೂಡಿ ಜಿಹ್ವೇಂದ್ರಿಯ ಉತ್ಪತ್ತಿ.

**ರಜೋಅಂಶ :** ಆಕಾಶ ರಜೋಅಂಶಕೂಡಿ ವಾಗೀಂದ್ರಿಯ ಉತ್ಪತ್ತಿ; ವಾಯು ರಜೋ ಅಂಶಕೂಡಿ ಘ್ರಾಣೇಂದ್ರಿಯ ಉತ್ಪತ್ತಿ; ಅಗ್ನಿರಜೋಅಂಶಕೂಡಿ ಪಾದೇಂದ್ರಿಯ ಉತ್ಪತ್ತಿ; ಅಪ್ಪು ರಜೋಅಂಶಕೂಡಿ ಪಾಯುವೇಂದ್ರಿಯ ಉತ್ಪತ್ತಿ; ಪೃಥ್ವಿರಜೋ ಅಂಶ ಕೂಡಿ ಉಪಸ್ಥೇಂದ್ರಿಯ ಉತ್ಪತ್ತಿ.

**ತಮೋಅಂಶ :** ಆಕಾಶತಮೋಅಂಶಕೂಡಿ ಶಬ್ದೇಂದ್ರಿಯ ಉತ್ಪತ್ತಿ; ವಾಯುತಮೋ ಅಂಶ ಕೂಡಿ ಸ್ಪರ್ಶೇಂದ್ರಿಯಉತ್ಪತ್ತಿ; ಅಗ್ನಿತಮೋಅಂಶಕೂಡಿ

ರೂಪ ಉತ್ಪತ್ತಿ; ಅಪ್ಪು ತಮೋಅಂಶ ಕೂಡಿ ರಸಉತ್ಪತ್ತಿ; ಪೃಥ್ವೀತಮೋಅಂಶಕೂಡಿ ಗಂಧಉತ್ಪತ್ತಿ;.

## ಸೃಷ್ಠಿಕ್ರಮ

ಮೂಲ ಜಡಪ್ರಕೃತಿ ಇಪ್ಪತ್ತುನಾಲ್ಕು ಜಡ ತತ್ವಾತ್ಮಕವಾದದ್ದು. ತ್ರಿಗುಣಾವಾದಂಥಾದ್ದು. ಆದ್ದರಿಂದ ಅವ್ಯಕ್ತತತ್ವ ಉತ್ಪತ್ತಿ. ಅದುಸಾತ್ವಿಕ, ರಾಜಸ, ತಾಮಸ ಗುಣಗಳಿಂದ ಯುಕ್ತವಾದದ್ದು.

1. ಸತ್ವದಲ್ಲಿ: ಅನಿರುದ್ಧ ಶ್ರೀದೇವಿ; 2. ರಾಜಸದಲ್ಲಿ: ಪ್ರದ್ಯುಮ್ನಭೂದೇವಿ; 3.ತಾಮಸದಲ್ಲಿ: ಸಂಕರುಷಣ ದುರ್ಗಾದೇವಿ.

ಸೃಷ್ಠಿಕಾಲದಲ್ಲಿ ರಜೋಭಾಗದಲ್ಲಿ 10 ಅಂಶಗಳು ಬಂದು ಸಾತ್ವಿಕಭಾಗದಲ್ಲಿ ಸೇರಿ ಸಾತ್ವಿಕ ಸಂಬಂಧ 1000 ಅಂಶಗಳನ್ನು ಕರಕೊಂಡು ಹೋದದ್ದು ಲಕ್ಷ್ಮೀ ಅಂಶಗಳು ಆದವು. ಸಾತ್ವಕಕ್ಕೆ ವಿಷ್ಣು. ಮತ್ತು ರಾಜಸ ಸಂಬಂಧ ಅಂಶಗಳು ವಂದುಹೊರಟು ತಾಮಸ ಸಂಬಂಧ ದಲ್ಲಿ ಸೇರಿ 100 ಆದದ್ದು ಒಟ್ಟು 1000 ಬೆಳೆದವು. ರಾಜಸಕ್ಕೆ ಬ್ರಹ್ಮ, ತಾಮಸಕ್ಕೆ ರುದ್ರ. ಸ್ವಂತವೆಂದು ಆದದ್ದು 100, ತಮೋಗುಣ. 1 ಸತ್ವಗುಣ 10 ರಜೋಗುಣ 1. 1ಮತ್ತು ತಮೋಗುಣ ವಂದು ಅಂತು ವಟ್ಟು ಹದಿಮೂರು. ಲಕ್ಷ–ಸಾತ್ವಿಕ; ಸಾವಿರ–ತಾಮಸ; ಸಾವಿರ– ರಾಜಸ; 10–ಸಾತ್ವಿಕ; 1–ರಾಜಸ; 1–ತಾಮಸ; ವಂದು ಸಾತ್ವಿಕ; 1–ರಾಜಸ; 1–ತಾಮಸ; ವಂದು ರಾಜಸ ಸಾತ್ವಿಕದಲ್ಲಿ ಸೇರಿದ್ದು ಒಂದು ರಜೋಭಾಗದಲ್ಲಿ ಸೇರಿದ್ದು ಹತ್ತು ತಮೋಭಾಗದಲ್ಲಿ ಸೇರಿದ್ದು. ವಂದು ಮೂಲ ತಮಸ್ಸಿನಲ್ಲಿ ಸೇರಿದ್ದು ವಂದು. ಅಂತೂ 114 ವಂದುನೂರಾ ಹದಿನಾಲ್ಕು.

**ಶ್ರೀಗುರುಮದ್ವೇಶಾರ್ಪಣಮಸ್ತು.**

**ಶ್ರೀವಿಜಯದಾಸಾರ್ಯಗುರುಭ್ಯೋನಮಃ**

**ಹರಿಓಂ ॥ ಉಪಾಸನದ ವಿಚಾರ, ಸಕಲ ಮುಕ್ತಿಯೋಗ್ಯರ ಸಾಧನಾ ಪ್ರಕರಣ.॥**

ಆಧ್ಯಾತ್ಮಿಕ ಶಕ್ತ್ಯಾನುಸಂಧಾನ ಪೂರ್ವಕ ಪೂಜಾದಿ ತತ್ವ ವಿಚಾರ ಗಳು ಮಾಡತಕ್ಕ ಕ್ರಮು. ರತ್ನ ಸ್ವರೂಪೋಪೇತ ಮುಕ್ತಿಯೋಗ್ಯ ಜೀವರ ಸ್ವರೂಪೋಪೇತವಾದ ವೃದ್ಧಿ ಉದ್ದೇಶ್ಯ, ಮಿಶ್ರೋಪೇತ ಮಿಶ್ರಜ್ಞಾನ ಉದ್ದೇಶ. ಹಂಸ ಸದೃಶ ಅಂಧಕಾರೋಪೇತ ಸ್ವರೂಪ ಉಳ್ಳ ಸಮಸ್ತ ದ್ವೇಷಿಗಳ ದೂಷಣಾರ್ಥವಾಗಿ ಮತ್ಸ್ವರೂಪೋದ್ಧಾರಕರಾದ ಶ್ರೀಗುರುಗೋಪಾಲರಾಯರ ಆಜ್ಞಾನುಸಾರವಾಗಿ ಯತ್ಕಿಂಚಿತು ಸೂಚಿಸತಕ್ಕ ವಿವರ:–

**ಸ್ಥೂಲದೇಹ :** ಇದರ ಆವರ್ಕ 9ವಿಧ. ಇದರ ವಿವರ.

ಈ ಪ್ರಕಾರ ವಂಭತ್ತು ಆವರ್ಕ. ಇನ್ನೊಂದಾವರ್ಕಯಾವುದೆಂದರೆ, ಈಮೂರು ಸೇರಿದ್ದು ವಂದು. ಈಪ್ರಕಾರ ದಶಾವರ್ಕ. ಆತ್ಮಕ್ಕೆ ಸ್ಥೂಲದೇಹ. ಇನ್ನು ಇದರಲ್ಲಿ ಉತ್ತಮ, ಅಧಮ, ಉಭಯಸ್ತಿತರಾದವರ ಪೂಜ.

1. **ಸತ್ವ ಸತ್ವ:**– ಈಆವರ್ಕದಲ್ಲಿ ಕೇವಲ ರುಜುಗಳು ಆದಾಗ ತಮ್ಮ,ತಮ್ಮಲ್ಲಿ ಮಾಡೋದರಿಂದ.

2. **ಸತ್ವರಜಸ್ಸು:**– ಸತ್ವದಲ್ಲಿ ರುಜುಗಳು, ರಜೋದಲ್ಲಿ ರುದ್ರಾದಿ ಪುಷ್ಕರಾಂತ ತಮ್ಮ ತಮ್ಮ ಪೂಜಾದಿಗಳು ಅದ್ಭುತವಾಗಿ ಕ್ಷಣಬಿಡದೆ ಸಾಧಿಸಿಕೊಳ್ಳುತ್ತಾರೆ.

3. **ಸತ್ವ ತಮಸ್ಸು:**– ಸತ್ವದಲ್ಲಿ ಋಷ್ಯಾದಿ ಸಮಸ್ತ ಪುಷ್ಕರ ಪರ್ಯಂತ ಇದ್ದಾರೆ. ಪುಷ್ಕರಪರ್ಯಂತ ಇದ್ದ ಈಸಮಸ್ತ ದೈತ್ಯರು ಉತ್ತಮರ ಪೂಜಮಡುತ್ತಾರೆ. ತಥಾ ಹರಿಗುಣ ದ್ವೇಷವಾಡುತ್ತಾರೆ. ಈಗುಣಗಳಿಂದವನು ಸಾಧನಮಾಡುತ್ತಾರೆಯೋ, ಆ ಸಾಧನದಿಂದ ಪಡೆದಂಥ ಪುಣ್ಯರಾಶಿಗಳನ್ನು ಉಪಹರಿಸಿ ಸಮಸ್ತಮುಕ್ತಿಯೋಗ್ಯರಿಗೆ ಕೊಟ್ಟು ಇವರನ್ನು ನಿಗ್ರಹಾರ್ಥವಾಗಿ ಹಾಕುತ್ತಾನೆ. ಆ ತಮೋಯುಕ್ತ ಸತ್ವಗುಣದಲ್ಲಿ ಋಜುಗಳು ಇದ್ದಾರೆ ಎಂದು ಉಪಾಸಿಸಬೇಕು. .

4. **ರಜ–ಸತ್ವ:**– ದಲ್ಲಿ ವೈಕಾರಿಕರುದ್ರ ದೇವರು, ಇಂದ್ರದೇವರು ರಜಸ್ಸಿನಲ್ಲಿ. ತೈಜಸರುದ್ರ ದೇವರು, ತ್ವಗಾಧಿಪತಿ ಅಹಂಕಾರಿಕ ಪ್ರಾಣದೇವರು ಇದ್ದಾರೆ.

5. **ರಜೋ–ತಮ:**– ಸೌಪರಣಿ ವಾರುಣಿ ಪಾರ್ವತೀಯರು, ತಮದಲ್ಲಿ ದ್ವೇಷಿಗಳು, ಇಲ್ಲಿ ಪಾರ್ವತೀದೇವಿಯರು "ಕಾಳೀ" ಶಬ್ದವಾಚ್ಯರಾಗಿ ಕಲಿ ನಿಗ್ರಹಮಾಡುತ್ತಾರೆ.

6. **ರಜೋ–ರಜೋ:**– ತಾಮಸರುದ್ರ ಗರುಡ–

7. **ತಮ–ಸತ್ವ:**– ತಮದಲ್ಲಿ ದ್ವೇಷಿಗಳು, ಪುಷ್ಕರಾದಿ ದೇವತೆಗಳು, ಸತ್ವದಲ್ಲಿ ರುದ್ರಾದಿ ಋಜುಗಳು ಇರುತ್ತಾರೆ.

8. **ತಮೋ–ರಜ:**– ತಮದಲ್ಲಿ ದೈತ್ಯರು, ರುದ್ರದೇವರು. ರಜದಲ್ಲಿ ಜಮದಗ್ನಿ ಋಷಿಗಳು, ಋಜುಗಳು ಇರುತ್ತಾರೆ.

9. **ತಮೋ–ತಮ:**– ತಮದಲ್ಲಿ ದುರ್ಗಾದೇವಿಯರು ತಮದಲ್ಲಿ ದೈತ್ಯರು ಈಪ್ರಕರ ಸಮಸ್ತ ಗುಣದಲ್ಲು, ದೈತ್ಯರವ್ಯಾಪಾರ ದೇವತೆಗಳ ವ್ಯಾಪಾರ

ಸಮವಾಗಿರುತ್ತದೆ. ಅಲ್ಲಿ ಇರತಕ್ಕ ರೂಪಗಳಿಗೂ, ದಶೇಂದ್ರಿಯಗಳಲ್ಲಿ ಇರತಕ್ಕ ರೂಪಗಳಿಗೂ ಐಕ್ಯಚಿಂತಿಸೋದು. ಇದನ್ನೆ ಅಲ್ಲಲ್ಲಿಗೆ ಪ್ರತಿವಂದು ಸ್ಥಳದಲ್ಲಿ, ಪದಾರ್ಥವಲ್ಲಿ, ವಿಷಯದಲ್ಲಿ, ಕರ್ಮದಲ್ಲಿ, ಜೀವರಲ್ಲಿ, ಬ್ರಹ್ಮಾಂಡದವಳಗೆ, ಹೊರಗೆ, ಜಡಜೀವೇಸರಲ್ಲಿ ಇದೇಪ್ರಕಾರ ಅನುಸಂಧಾನ ಗಳು ಮನಸ್ಸಿಗೆ ತಂದುಕೊಂಡು ತನ್ನಬಿಂಬನಲ್ಲಿ ಐಕ್ಯಚಿಂತಿಸೋಣವೇ ಅನ್ವಯಪೂಜಾ.

ಇದರಲ್ಲಿ ಉಪಚಾರಗಳು:– ಅಲ್ಲಲ್ಲಿ ಭಗವದ್ರೂಪಗಳು ಸ್ಮರಿಸೋಣ. ಸ್ನಾನ ಗುಣಕೀರ್ತನ. ಜಪತಪಾನುಷ್ಠಾನ, ಆಚಮನ, ಅರ್ಘ್ಯಪಾದ್ಯ ಇತ್ಯಾದಿಗಳು, ಕಾರ್ಯವೇ–ಅಲಂಕಾರ, ಕೋಪವೇ–ಧೂಪ, ಈ ವಿಷಯ ಅನ್ವಯಿಸೋಣವೇ ಮಹಪೂಜೆ. ಅಧಿಷ್ಠಾನವೇ ದಕ್ಷಿಣ. ಶಯನವೇ ನಮನ. ಈಪ್ರಕಾರಚಿಂತಿಸಿ ಸಮರ್ಪಣರೀತ್ಯಾ ಶ್ರೀಹರಿಗೆ ಸಮರ್ಪಿಸುವುದು.

## "ವ್ಯತಿರೇಕ ಪೂಜಾವಿವರ."

ಯಥಾ ಯೋಗ್ಯ ಸೂಚಿಸತಕ್ಕ ವಿವರ. ವ್ಯತಿರೇಕ ಅಂದರೆ ಪ್ರತ್ಯೇಕಪೂಜ. ಅಂದರೆ ಪದಾರ್ಥಗಳನ್ನು ಸಮರ್ಪಿಸುವುದು. ಇದರ ವಿವರ. ಯಾವ ಕರ್ಮವೇಮಾಡಲಿ, ಯಾವ ಪದಾರ್ಥವನ್ನೇ ನೋಡಲಿ. ಯಾವವಿಷಯವೇ ಭೋಗಿಸಲಿ, ತತ್ತಸ್ಥಾನದಲ್ಲಿ ತತ್ತದಭಿ ಮಾನಿಗಳನ್ನು ತಥಾ ಅಲ್ಲಲ್ಲಿ ಭಗವದ್ರೂಪಗಳನ್ನು ಕೇವಲ ಸ್ಮತ್ಯಾನುಸಂಧಾನ ಪೂರ್ವಕ ಚಿಂತಿಸಿ ಸ್ವಬಿಂಬಾರಭ್ಯ ರೂಕ್ಷಗಳಂತರ್ಗತ ಸಮರ್ಪಿಸುವುದು. ಇದೇ ವ್ಯತಿರೇಕ ಪೂಜಾ. ಇದೆಕ್ರಮ ಒಟ್ಟು ಹನ್ನೊಂದು ವಿಧವಾಗಿರುತ್ತದೆ. ಇದರ ವಿವರ::

| ಸಂಖ್ಯ | ಉಪಾಸನಾ ಹೆಸರು. | ಸಂಖ್ಯ | ಉಪಾಸನಾ ಹೆಸರು. |
|---|---|---|---|
| 01 | ವನೋಪಾಸನಾ | 07 | ತನೋಪಾಸನಾ |
| 02 | ಜಲೋಪಸನಾ | 08 | ಖಂಡೋಪಾಸನಾ |
| 03 | ಚರೋಪಾಸನಾ | 09 | ಅಖಂಡೋಪಾಸನಾ |
| 04 | ಮನೋಪಾಸನಾ | 10 | ಬಿಂಬೋಪಾಸನಾ |
| 05 | ಸ್ಥಿರೋಪಾಸನಾ | 11 | ತತ್ವೋಪಾಸನಾ |
| 06 | ಗೃಹೋಪಾಸನಾ | | ಹೀಗೆ 11 ವಿಧ |

**01 ವನೋಪಾಸನಾ :** ವನಗಳಲ್ಲಿರತಕ್ಕ ಖಗಮೃಗಾದಿಗಳಲ್ಲಿರತಕ್ಕ ಸ್ವಬಿಂಬನನ್ನು ಧ್ಯಾನಿಸಿ ಅಲ್ಲಲ್ಲಿನ ಫಲಗಳನ್ನು ಅನುಸಂಧಾನ ರೀತ್ಯಾ ಖಗಮೃಗಾಂತರ್ಗತ ಬಿಂಬನನ್ನು ಐಕ್ಯಚಿಂತಿಸಿ ಸಮರ್ಪಿಸೋಣವೇ ವನೋಪಸನ.

**02. ಜಲೋಪಾಸನಾ :** ನದಿಗಳಲ್ಲಿ ತಥಾಸಮುದ್ರ ಗಳಲ್ಲಿ ಹುಟ್ಟಿರತಕ್ಕ ಪದಾರ್ಥಗಳನ್ನು ಅಲ್ಲಿರತಕ್ಕ ಮತ್ಸ್ಯಕೂರ್ಮಾಂತರ್ಗತ ತಸ್ಯ ಬಿಂಬನಲ್ಲಿ ಐಕ್ಯಚಿಂತಿಸಿ ಸಮರ್ಪಿಸೋದು ಹ್ಯಾಂಗಂದರೆ, ಸಮುದ್ರದಲ್ಲಿರತಕ್ಕ ಪದಾರ್ಥಗಳಲ್ಲಿ ಮುತ್ತು, ರತ್ನ ಹವಳ, ವಜ್ರ, ಮಾಣಿಕ್ಯ, ವೈಢೂರ್ಯ, ಕೆಂಪು ಇತ್ಯಾದಿ ಏನುಹುಟ್ಟುತ್ತವೆಯೋ ಅದನ್ನು ಉಪಾಸನಾಬಲದಿಂದ ಹಾರ,ಪದಕ,ಮಕುಟ, ಕೇಯೂರ ಸಮಸ್ತ ಶೃಂಗಾರ ಆಭರಣಗಳನ್ನು ಮಾಡಿ ವಾಯು ಆವರ್ಕ ತಂತಿಗಳಿಂದ ಬಿಗಿಸಿ ಅಲ್ಲಲ್ಲಿ ಭಗವದ್ರೂಪಗಳನ್ನು ಚಿಂತಿಸಿ, ಈರೂಪಗಳನ್ನು ಜಲಂತರ್ಗತ ಐಕ್ಯಚಿಂತಿಸಿಸಮರ್ಪಿಸೋಣವೇ ಜಲೋಪಾಸನೆ.

**3. ಚರೋಪಾಸನೆ :** ಚರ ಅಂದರೆ ಪಶುಗಳು. ಆಪಶುಗಳಂತರ್ಗತ ಸ್ವಬಿಂಬ ಕರ್ತೃತ್ವವನ್ನು ತಿಳಿದು ಅಲ್ಲಲ್ಲಿ ಕಂದಮೂಲಾದಿಗಳನ್ನು, ಅಲ್ಲಿರತಕ್ಕ ರಸರೂಪಗಳನ್ನು ಪಶ್ವಂತರ್ಗತ ಚಿಂತಿಸಿ ಹಿಂದೆಹೇಳಿದ ಪ್ರಕಾರ ಐಕ್ಯಚಿಂತಿಸಿ ಅನುಸಂಧಾನಪೂರ್ವಕ ಸಮರ್ಪಿಸುವುದು. ಇದರಲ್ಲಿ ಎರಡು ಉಪಾಸನಾ. 1.ಪಕ್ವ ಉಪಾಸನಾ. 2.ಅಪಕ್ವ ಉಪಾಸನಾ. ಮೃಗಪಕ್ಷಿಗಳಿಗೆ ಆಹಾರಫಲಗಳು, ಅಲ್ಲಲ್ಲಿ ರಸರೂಪಗಳನ್ನು ಅಲ್ಲಲ್ಲಿ ಚಿಂತಿಸಿ. ಸ್ವತ್ವ್ಯಾನುಸಂಧಾನಪೂರ್ವಕ ಸಮರ್ಪಿಸುವುದೇ ಪಕ್ವ ಉಪಾಸನ. ಇನ್ನು ಅಪಕ್ವ ಉಪಾಸನದ ವಿವರ. ಶಾರ್ದೂಲಸಿಂಹಾದಿಗಳಿಗೆ, ಗಜಗೋವುಗಳಿಗೆ ಆಹಾರ, ಗಜಗೋವುಗಳಲ್ಲಿರತಕ್ಕ ಮೂರಬ್ಜ ಎಂಭತ್ತೈದುಕೋಟಿ ಇಪ್ಪತ್ತೆರಡು ಲಕ್ಷದ ಅರವತ್ತೆಂಟುಸಾವಿರ ಮೂನ್ನೂರಏಳುರೂಪಗಳನ್ನು ಸಿಂಹಶಾರ್ದೂಲ ಬಿಂಬನನ್ನು ಸ್ವಬಿಂಬನಲ್ಲಿಐಕ್ಯಚಿಂತಿಸಿ ಸಮರ್ಪಿಸೋದೆ ಚರೋಪಾಸನಾ. ಮತ್ತು ಪಕ್ವಾಪಕ್ವದ ವಿಚಾರ ಎಷ್ಟುಸೂಕ್ಷ್ಮ ವಿಚಾರ ಮಾಡುತ್ತಾನೆಯೋ ಆಗ್ಗೆ ಇವನ ಸ್ವರೂಪವೃದ್ಧಿಗೆ ಕಾರಣ. ಇದುಕೇವಲಯಾರಿಗೆ ಸ್ವರೂಪಯೋಗ್ಯತಾಭಿವ್ಯಕ್ತಿ ಕಾಲವಿದ್ದರೆಲಭ್ಯ ಇಲ್ಲದಿದ್ದರೆ ಇಲ್ಲ.

**4. ಸ್ಥಿರೋಪಾಸನ:–** ಸ್ಥಿರವೆಂದರೆ ವೃಕ್ಷ. ಇದರವಿಚಾರ ಸಂಚಾರಮಾಡೋ ಕಾಲದಾಗೆ ವೃಕ್ಷಾದಿ ಗಳಲ್ಲಿರಕತಕ್ಕ ಭಿನ್ನ ಭಿನ್ನ ರಸ, ಗಂಧ ವರ್ಣದಲ್ಲಿರತಕ್ಕ ಭಗವದ್ರೂಪಗಳನ್ನು ಸ್ವಬಿಂಬನಲ್ಲಿ ಚಿಂತಿಸೋದು. ತಥಾ ಇವರ ಆಹಾರಗಳು, ತೇಜಸ್ಸು, ವಾಯು, ಅಪ್ಪು, ಪೃಥ್ವಿ, ಆಕಾಶ, ಈ ಪಂಚಭೂತಗಳೇ ಆಹಾರ. ತೇಜಸ್ಸು,ಚಂದ್ರ,ಸೂರ್ಯ, ಅಗ್ನಿ,ಚಂದ್ರನಲ್ಲಿ ಭಗವದ್ರೂಪಗಳು, ಪ್ರಾಣಾದಿ=5

(ಪಂಚ), ವಿಶ್ವಾದಿ= 8(ಎಂಟು), ನಾಗಾದಿ=5 (ಐದು). ಭುಂಶಾದಿಐದು ರುದ್ರ=3, ದತ್ತಾತ್ರೇಯಾದಿ=13, ಇಂದ್ರಾದಿ, ಕಾಮ, ಅಹಂಕಾರಿಕಪ್ರಾಣ, ಶಚ್ಯಾದಿ 6ಮಂದಿ, ಪ್ರವಹವಾಯು, ಗರುಡ ಶೇಷ, ಅಜಾದಿ=51,ಈಪ್ರಕಾರ 101. ನಾಡ್ಯಾಧಿಷ್ಠಿತ ರೂಪಗಳು. ಇದೇಪ್ರಕಾರ ಪಂಚಭೂತಗಳಲ್ಲಿ ಇಷ್ಟೇರೂಪಗಳೂ.ಇವು ಒಂದಕ್ಕೊಂದು ಐಕ್ಯಚಿಂತಿಸಿ ಮತ್ತು ಇವುಗಳಲ್ಲಿರತಕ್ಕ ಸಾಕಾರ ರೂಪಗಳನ್ನು ಸ್ಥಿರಜೀವಾಂತರ್ಗತ ಸ್ವಬಿಂಬನಲ್ಲಿ ಚಿಂತಿಸಿ ಸಮರ್ಪಿಸುವುದು. ಇದಕ್ಕೇನೆ ಸ್ಥಿರೋಪಾಸನಯಂತ ಚಿಂತಿಸುವುದೇ.

5. **ಮನೋಪಾಸನಾ:-** ಈಯಾವಜೀವರು ಏನೇನುಕರ್ಮವನ್ನು ಮಾಡಿಶ್ರೀಹರಿಗೆ ಸಮರ್ಪಿ ಸುವದಿಲ್ಲೋ ಈಸಮಸ್ತಕರ್ಮಗಳನ್ನು ಅನುಸಂಧಾನಕಪೂರ್ವಕ ಸ್ವಗುರುಗಳ ದ್ವಾರಾ ಮುಖ್ಯ ಪ್ರಾಣಾಂತರ್ಯಾಮಿಯಾದ ಸ್ವಬಿಂಬಗೆಸಮರ್ಪಿಸುವುದು.ಮತ್ತು ಇದರ ವಿವರ. ಮನೋ ಮಯಾ ಪ್ರತಿಮಾಗಳನ್ನು ಸ್ಮೃತ್ಯಾತ್ಪೂರ್ವಕ ಏನು ಕಲ್ಪನಾಮಾಡುತ್ತಾರೋ ಆಪ್ರತಿಮಾಗಳಿಗೆ ಮನೋಮಯಕಲ್ಪಿತ ಆಭರಣಗಳಿಂದ ಅನುಸಂಧಾನಪೂರ್ವಕ ಅಲಂಕರಿ ಸೋಣ,ಮನೋ ಮಯದ್ವರಾ ವಾಸನಾಮಯ ಈಪ್ರಕಾರಸಮರ್ಪಿಸೋದು. ಇದೇಮನೋಪಾಸನಾ.

6. **ಗೃಹೋಪಾಸನಾ:-** ಇದರವಿವರ ಯಾವ ಯಾವ ಗೃಹಗಳು ಗೋಚರವಾಗುತ್ತದೆಯೋ ತಕ್ಷಣ ಆಗೃಹಗಳಲ್ಲಿರತಕ್ಕ ದಶದಿಕ್ಕುಗಳು, ಗೋಡಿ, ಖಂಬ, ನೆಲಾ, ತೊಲಿ, ಛಾವಣಿ, ಕೋಣೆಗಳು ಇತ್ಯಾದಿಗಳಲ್ಲಿರತಕ್ಕ ಭಗವದ್ರೂಪಗಳನ್ನು ತಿಳಿದು ಬಿಂಬನಲ್ಲಿ ಐಕ್ಯಚಿಂತಿಸೋಣ.

7. **ತನೋಪಾಸನಾ:-** ತನುಎಂದರೆ ಶರೀರ. ಪ್ರತಿಜೀವರುಗಳಲ್ಲಿರತಕ್ಕ ಭಗವದ್ರೂಪಗಳನ್ನು ಚಿಂತಿಸೋಣ ಮತ್ತು ಇಂದ್ರಿಯಗಳಲ್ಲಿರತಕ್ಕ ಅಧಮೋತ್ತಮಾದಿ ಅಧಿಷ್ಠಿತ ಭಾವಿಸಿ ಮುಖ್ಯ ಪ್ರಾಣರ ಕರ್ತೃತ್ವವನ್ನು ತಿಳಿದು ತದಾಭಿಮಾನಿ ಭಗವದ್ರೂಪಗಳನ್ನು ತಿಳಿದು ಬಿಂಬನಲ್ಲಿ ಸಮರ್ಪಿಸುವುದೇ ತನೋಪಾಸನಾ.

8. **ಖಂಡೋಪಾಸನ:-** ಓಂದೆ ಹೇಳಿದ ಸಮಸ್ತ ಉಪಾಸನಗಳಿಂದ ತೀಳಿದು ಶ್ರೀಹರಿ ಹಾಗೂ ಬ್ರಹ್ಮಾದಿದೇವತೆಗಳಲ್ಲಿ ಭಗವದ್ರೂಪಧ್ಯಾನಿಸುವದು. ಅದರ ವಿವರ. ಶ್ರೀವೆಂಕಟೇಶನ ಒಂದೊಂದು ಅವಯವಗಳನ್ನು ಸ್ಮರಿಸಿ, ಸ್ವಗುರುಗಳ ದ್ವಾರಾ ಚಿಂತಿಸುವುದು. ಇದೇಖಂಡೋಪಾಸನೆ.

**9. ಅಖಂಡೋಪಾಸನಾ:-** ಸಮಸ್ತ ಕರ್ಮಗಳಲ್ಲಿ ಶ್ರೀಹರಿರೂಪ ಪಾದಾದಿಶಿರ ಪರಿಯಂತರ ಏಕಕಾಲಕ್ಕೆ ಚಿಂತಿಸಿ ಸಮರ್ಪಿಸುವುದೇ ಅಖಂಡೋಪಾಸನ.

**10. ಬಿಂಬೋಪಸನಾ:-** ಸರ್ವಸ್ಥಳದಲ್ಲಿ, ಸರ್ವಪದಾರ್ಥದಲ್ಲಿ, ಸರ್ವದಾ ಸರ್ವಕಾರ್ಯದಲ್ಲಿ, ಸರ್ವಶಬ್ದದಲ್ಲಿ, ಪ್ರತಿವಂದರಲ್ಲಿ ಪ್ರತಿವಂದುಸ್ವಬಿಂಬನೆಂದು ಸರ್ವದಾಕ್ಷಣಬಿಡದೆ ಸ್ಮರಿಸುತ್ತಾ ಬಿಂಬಗೆ ಸಮರ್ಪಿಸುವುದು. ಇದೇ ಬಿಂಬೋಪಾಸನೆ.

**11. ತತ್ವೋಪಾಸನ:-** ಇದರವಿವರ ಹಿಂದೆಹೇಳಿದ ಪ್ರತಿತತ್ವದಲ್ಲಿ 24ತತ್ವಗಳು,ತದಂತರ್ಗತ ಭಾವಿಸಿ ಮುಖ್ಯಪ್ರಾಣದಿಂದೊಡಗೂಡಿ. ಶ್ರೀಹರಿಯಕತ್ತ್ವತ್ವವನ್ನು ತಥಾ. ತದ್ಗತ ರೂಪಗಳನ್ನು ಐಕ್ಯಚಿಂತಿಸಿ ಬಿಂಬದ್ವಾರಾ ಬಿಂಬಾರ್ಪಣಮಸ್ತು. ಇದೇ ವ್ಯತಿರೇಕಪೂಜಾಂತರ್ಗತ ತತ್ವೋಪಾಸನೆ ಸಮಾಪ್ತಿ.

## ಶ್ರೀಮಧ್ವೇಶಾರ್ಪಣಮಸ್ತು.

## ತಾರತಮ್ಯವಿವರಗಳು (ಒಂದುಕಲ್ಪದಲ್ಲಿ ಸಾಧನಜೀವಿಗಳು)

| ಸಂಖ್ಯೆ | ದೇವತೆಹೆಸರು | ಕಲ್ಪ ಸಾಧನ | ಸಂಖ್ಯೆ | ದೇವತೆಹೆಸರು | ಕಲ್ಪ ಸಾಧನ |
|---|---|---|---|---|---|
| 01 | ಬ್ರಹ್ಮ | 200 | 08 | ಪ್ರವಹವಾಯು | 24 |
| 02 | ಸರಸ್ವತಿ/ಭಾರತಿ | 200 | 09 | ಯಮ, ಸೂರ್ಯ, ಚಂದ್ರ, ಶತರೂಪ 20ಕಲ್ಪ ಪ್ರಕಾರ | 80 |
| 03 | ಶೇಷ,ಗರುಡ,ರುದ್ರ, ಷಣ್ಮಹಿಷಯರ, ವಾರುಣಿಸೌಪರಣಿ | 1000 | 10 | ವರುಣ | 20 |
| 04 | ಇಂದ್ರ | 40 | 11 | ಅಗ್ನಿ,ಪ್ರಸೂತಿ<br>18ಕಲ್ಪಗಳ ಪ್ರಕಾರ (ಒಟ್ಟು) | 36<br>1868 |
| 05 | ಕಾಮ | 40 | 12 | ಮಿತ್ರಸೂರ್ಯ,ತಾರಾ, ನಿಋತಿ,ಪ್ರಾವಹಿ(18ಕಲ್ಪ) | 72 |
| 06 | ಅಹಂಕಾರಿಕಪ್ರಾಣ | 36 | 13 | ಗಣಪತಿ,ಕುಬೇರ, ವಿಷ್ವಕ್ಸೇನ | |

| | | | |
|---|---|---|---|
| | | ಅಶ್ವಿನಿದೇವತಿಗಳು,<br>81 ಶೇಷ ಶತಸ್ತರು,ರೂಥಿ<br>85ಜನಗಳು. 16ಕಲ್ಪ ಶೇಷ<br>85ರಲ್ಲಿ 4ಜನ | 1360 |
| 07 | ಸ್ವಾಯಂಭೂಮನು 192<br>6–32 | | |
| | ವಟ್ಟು 1708 | ವಟ್ಟು | 1432 |

ವಟ್ಟು ಮುಖ್ಯತಾತ್ವಿಕರು= 1708+1432 =3300

ಅಂತು 1. ಬ್ರಹ್ಮ =ಪದಸ್ಥರು; 2.ವಾಯು, ಲತವ್ಯರು = 99 ಸಿದ್ಧರು; 3.ರುಜುಗಳು=100 ಸಾಧ್ಯರು.ಸಿದ್ಧರು ಸಾಧ್ಯರು.ತಾತ್ವಿಕರಲ್ಲಿ ಸಿದ್ಧ, ಸಾಧ್ಯರನ್ನು ತಿಳಿಯಬೇಕಾದರೆ ಯಾರಿಗೆ ಎಷ್ಟು ಹೇಳಿರುವರೋ ಅದರ ಅರ್ಧಮಾಡಿ, ಅರ್ಧದಷ್ಟುಕಾಲ ಸಾಧ್ಯರು. ಅರ್ಧಕ್ಕೆ ಮೇಲ್ಪಟ್ಟು ಪೂರ್ತಿಯಾಗಲು, ವಂದು ಕಡಿಮೆಯಾಗುವವರೆಗೆ ಸಿದ್ಧರು. ಕೊನೆಯಕಲ್ಪದಲ್ಲಿ ವಬ್ಬರೇ ಪದಸ್ಥರು. ಇವರೆಲ್ಲ ಅನಾದಿ ಸಾಮಾನ್ಯ ಅಪರೋಕ್ಷಿಗಳು. ಅರ್ಧಕಾಲವಾಯಿತೆಂದರೆ ಆಗ್ಗೆ ಅವರಿಗೆ ಅಪರೋಕ್ಷವಾಗುವುದು. ಸಾಮಾನ್ಯ ಅಪರೋಕ್ಷಿಗಳು ಸಾಧ್ಯರು. ಪರಮಾತ್ಮನನ್ನು ಆತನ ನಿಜಸ್ವರೂಪದಿಂದ ಅಂದರೆ, ಆತನಅನಂತ ಕೋಟಿಸೂರ್ಯಪ್ರಕಾಶದಲ್ಲಿ ತಮ್ಮ ಕಲ್ಪಗಳ ಹೆಚ್ಚುವಿಕೆಯಂತೆ 2–3ಸೂರ್ಯಪ್ರಕಾಶ,ಕಡಿಯ ಸಿದ್ಧಕಾಲ ವರೆಗೆ ನೋಡುವರೂ. ಸಾಧ್ಯರು ವಿಶೇಷ ಅಪರೋಕ್ಷಿಗಳು. ಬರುಬರುತ್ತಾ ಪರಮಾತ್ಮನ ವಿಶೇಷ ದಿವ್ಯರೂಪಗಳನ್ನು ದರ್ಶನ ಮಾಡುತ್ತಾ ಇರುವರು. ಸಿದ್ಧರು ಪದಸ್ಥರು ಅಪರೋಕ್ಷ ಪ್ರಧಾನ ದೇವತೆಗಳು.

## ಅಪರೋಕ್ಷ ಪ್ರಧಾನದೇವತೆಗಳು.

| ಸಂಖ್ಯ | ದೇವತೆಗಳು | ಸಂಖ್ಯೆ |
|---|---|---|
| 01 | ಮುಖ್ಯತಾತ್ವಿಕರು=ಸಿದ್ಧರು= 120<br>ಸಾಧ್ಯರು = 3180 | 3300 |
| 02 | ಅಮುಖ್ಯ ತಾತ್ವಿಕರು ಪಾವಕಾದಿ ಶನೇಶ್ಚರ. | 29700 |
| 03 | ಅತಾತ್ವಿಕರು. | 89967000 |

| | | |
|---|---|---|
| 04 | ತಾತ್ವಿಕ ಪ್ರಧಾನ ಅಭಿಮಾನಿಗಳು.<br>ಷಟ್ಟು 33 ಕೋಟಿದೇವತೆಗಳು | 240000000<br>330000000 |
| 05 | ನೂರುಕೋಟಿ ಋಷಿಗಳು. | 10000000000 |
| 06 | ಮೂರುಕೋಟಿ ಸಾಂಶಜೀವರುಗಳು | 30000000 |
| 07 | ನಿರಂಶಜೀವರು | ಅಸಂಖ್ಯಾಕರು. |

ಇಂಥಾ ನಿರಂಶಜೀವರಿಗೆ ನಾಲ್ಕುವಿಧ ದಶಗಳು: 1. ಅಜ್ಞಾನದಶ= ಸುಖಪಡಬೇಕು ಅದಕ್ಕೆ ಪ್ರಯತ್ನವಿಲ್ಲ. 2.ಜ್ಞಾನದಶ= ಸಾಧನಮಾಡುವನು. 3.ಅಪರೋಕ್ಷದಶ= ಜೀವನ್ಮುಕ್ತ ದಶಾ. 4.ಮುಕ್ತದಶಾ = ಮೋಕ್ಷದಶ. ನಾಲ್ಕುದಶದವಿವರ:-

1. ಅಜ್ಞಾನದಶೆ = ಅಜ್ಞಾನನಿಗೆ ಸುಖಸಾಧನ ವಿರಹಿತನಾಗಿ ಮೂಢನಾಗಿರುವನು.

2. ಜ್ಞಾನದಶ = ಜ್ಞಾನಿಗೆವೈರಾಗ್ಯವಿದ್ದು ಶಾಸ್ತ್ರಜನ್ಯ ಜ್ಞಾನದಿಂದ ಸಾಧನಮಾಡೋನು ಅಂದರೆ. ಕರ್ಮಮುಖ್ಯ ಅಲ್ಪ ಭಕ್ತ.

3. ಅಪರೋಕ್ಷದಶ= ಅಪರೋಕ್ಷ ಸಿದ್ಧಸಾಧನ ಆಗದವನು.

4. ಮುಕ್ತದಶಾ = ಮುಕ್ತಮೋಕ್ಷದಶಾ. ಇಂಥಾ ಅಜ್ಞಾನಜೀವನಿಗೆ, ಜ್ಞಾನದಶಾ ಬರಬೇಕಾದರೆ ಜೀವನ ಮಿತಸ್ಥವಾದ ದೋಷಖಂಡನೀಯ, ಮತಖಂಡನವು ಪಾಪವೆಂಬೋ ಎಣ್ಣಿ ಖರ್ಚಾಗಬೇಕಾದರೆ ದುಃಖವೆಂಬೋ ದೀಪುರಿಯುಲೇಬೇಕು. ಆಮೂರು ಹ್ಯಾಂಗೆ ಬಿಡ ಬೇಕೆಂದರೆ ಮನೋನಿಯಾಮಕರಾದ ರುದ್ರಾಂತರ್ಯಾಮಿ ಯಾದಪರಮಾತ್ಮನು ಮೋಹಕ ನೆಂದು ಉಪಾಸನೆಮಾಡಿದರೆ ಸ್ವಾಮಿಯು ಮೋಹಬಡಿಸುವನು. ಹೀಗೆ ಜ್ಞಾನದಶಾಹೊಂದಿ ಸಾಧನ ಮಾಡುತ್ತಾರೆ. ಮನುಷ್ಯೋತ್ತಮರು ಚತುರ್ಗುಣೋಪಾಸಕರು. 1.ಸತು. 2.ಚಿತು. 3.ಆನಂದ. 4.ಆತ್ಮ. ಎಂದು ಕ್ರಮೇಣ ಮೊದಲು ಆತ್ಮನಜ್ಞಾನ ಬೇಕು. ಸತುವಂದು ಉಪಾಸನಾಕ್ರಮ:

1. **ಸತು:-** ಶೋಕಾದಿ ಅತಿದೋಷದೂರನೆಂದುಪಾಸನ .
2. **ಚಿತು:-** ವರರಾದ ದಿವ್ಯಮೂರುತಿ ಎಂದು ಜ್ಞಾನ.
3. **ಆನಂದ:-** ನಂದ ಅಮಾಂದಸಾಂದ್ರ ಎಂಬೋ ಉಪಾಸನೆ.

4. **ಆತ್ಮ**:– ನೀನು ಎನ್ನ ಸ್ವಾಮೀ ನನ್ನನ್ನು ರಕ್ಷಿಸು ಎಂಬುವಜ್ಞಾನ.

ಈ ನಾಲ್ಕುಪ್ರಕಾರ ಜ್ಞಾನದಿಂದ ಉಪಾಸನ ಇಲ್ಲದವರಿಗೆ ಶ್ರೀಕೃಷ್ಣ ತನ್ನ ಮೂರುತಿಯನ್ನು ತೋರಿಸನು. ಈ ಉಪಾಸನದಿಂದ ಅಪರೋಕ್ಷ ವಾಗುವುದು.

**ಅಪರೋಕ್ಷ ಎರಡುವಿಧ**:– 1. ಸ್ವರೂಪಾಪರೋಕ್ಷ; 2.ಬಾಹ್ಯಾಪರೋಕ್ಷ:

1. **ಸ್ವರೂಪಾಪರೋಕ್ಷ**:– ಸ್ವರೂಪಜ್ಞಾನದಿಂದ ಅನುಗ್ರಹಿತವಾದ ವೃತ್ತಿಜ್ಞಾನರೂಪವಾದ. ಶಾಸ್ತ್ರ ಜನ್ಯ ಜ್ಞಾನದಿಂದ ಸ್ಥೂಲಪ್ರಾಜ್ಞಾ ಅಪರೋಕ್ಷ. ಬಾಹ್ಯಾಪರೋಕ್ಷ, ಸ್ವರೂಪಾಪರೋಕ್ಷ ಎಂದರೆ ಸ್ವರೂಪ ಚಕ್ಷುಸುದೃಷ್ಟಿಯಿಂದ ಸ್ವರೂಪಾಪರೋಕ್ಷ. ಬಾಹ್ಯಾಪರೋಕ್ಷದಲ್ಲಿ ಸ್ವರೂಪದೃಷ್ಠಿ ಅನುಗ್ರಹಿತ ಬಾಹ್ಯದೃಷ್ಠಿಯಿಂದ ನೋಡೋಣ. ಕಣ್ಣುಜ್ಞಾನಕ್ಕೆ ಸಾಧನ.ಸ್ವರೂಪನೇತ್ರ ಜ್ಞಾನಮಯ

ಪ್ರತೀಕಾಲಂಬನರು ಎರಡು ವಿಧ:– 1.ದೇಹಾಲಂಬನರು; 2.ಪ್ರತೀಕಾಲಂಬನರು.

1. **ದೇಹಾಲಂಬನರು**:– ದೇಹಾಲಂಬನರುನಿರಂಶರಾದವರು. ತಮ್ಮಸ್ಥೂಲದೇಹದಿಂದ ನೋಡುವರು.

2. **ಪ್ರತೀಕಾಲಂಬನರು**:– ಸಾಂಶರು ಇದ್ದರೆ ತಮ್ಮ ಅಂಶವಿದ್ದವರು ಯಲ್ಲಾದೇಹದಲ್ಲಿ ನೋಡುವರು.

3. ಅಪ್ರತೀಕಾಲಂಬನರು. ಸರ್ವತ್ರನೋಡುವರು. ನಿರಂಶರು ದೇಹಾಲಂಬನರು. ಸಾಂಶರು ಅಜಾನಜರವರಗೆ ಪ್ರತೀಕಾಲಂಬನರು. "ಸ್ವರೂಪ, ಅರೂಪ,ಅಪರೂಪ ಧ್ಯಾನ ಅಪಗತಿಂ ರೂಪಂ ಯಸ್ಸಃ ಚಿದಾನಂದ ಪ್ರಾಕೃತ."

## ಬ್ರಹ್ಮಗರುಡಾದಿಗಳ ಸಾಧನವಿಚಾರ

ವಬ್ಬ ಬ್ರಹ್ಮದೇವರಿಗೆ ಮುಕ್ತಿ ಆದಕೂಡಲೆ, ಇನ್ನೊಬ್ಬರನ್ನು ಮೇಲೆ ತೆಗೆದುಕೊಳ್ಳುತ್ತಾ ಹೋಗಲಾಗಿ, ಅಗದಿಕೆಳಗಿನ ಅಪರೋಕ್ಷಿಗಳಾದ ವಬ್ಬರನ್ನು ಕಲ್ಪ ಪದವಿಗೆ ತೆಗೆದು ಕೊಳ್ಳುವರು. ಆಗ್ಗೆ ಅವರಿಗೆ "ಲಾತವ್ಯ" ಅಂತಬಿರುದು ಬರುವುದು. ಅವರು ಎಂದು ಲಾತವ್ಯಪದವಿಗೆ ಬರುವರೋ, ಒಬ್ಬಶೇಷಪದವಿಗೆ ಬರುವರು. ಒಬ್ಬ ರುದ್ರಜೀವನನ್ನು ಸೃಷ್ಟಿಗೆ ತೆಗೆದುಕೊಂಡು ಆಲಾತವ್ಯರಲ್ಲೇ 75 ವರ್ಷ ಬ್ರಹ್ಮದೇವರಲ್ಲಿ ಶ್ರವಣಮಾಡುವರು. ಅನಂತರ 40ವರ್ಷಕ್ಕೆ 25 ವರ್ಷಕಮ್ಮಿ ವ್ಯಾಸಾಂಗ ಮಾಡುವರು. ಅದಕ್ಕೆ ಪೂರ್ವ ಅವರಿಗೆ "ಉಗ್ರತಪೋ" ಎಂಬ ಹೆಸರು. ಅನಂತರ ರುದ್ರಪದವಿಯಲ್ಲಿ "ರುದ್ರ"ನೆಂಬ ಹೆಸರು ಬರುವುದು.

1. ಗರುಡ ಪದವಿಗೆ ಬರುವ "ಸುಮನಾ" ಶೇಷ ಪದವಿಗೆ ಬರುವರು.ರುದ್ರದೇವರು ಮೊದಲಾದವರು, ಲಾತವ್ಯರಲ್ಲಿ ಶಿಷ್ಯರಾಗಿ ಕೆಲಸ ಮಾಡಬೇಕು. ಇವರಿಗೆ 40ಕಲ್ಪ ವ್ಯಾಸಂಗ, 10ಕಲ್ಪ ತಪಸ್ಸು, ಬ್ರಹ್ಮಮಾನದಿಂದ 75 ವರುಷ ಎಂದರೆ ಮುಕ್ಕಾಲುಕಲ್ಪ ಗ್ರಂಥಶ್ರವಣ ಮಾಡಬೇಕು. 40ಕಲ್ಪ ವ್ಯಾಸಂಗ ದೊಳಗೆ 75 ವರುಷ ಬ್ರಹ್ಮದೇವರಿಂದ ಗ್ರಂಥ ಶ್ರವಣ ಲಾತವ್ಯರಲ್ಲಿ ಮಾಡ ಬೇಕಗುತ್ತದೆ. ಶ್ರವಣಕಾಲದ 1/3 ಉಪಾಸನಾಕಾಲವೆಂದು ಭಾವ.

2. ಇಂದ್ರಪದವಿಗೆ ಬರತಕ್ಕವರು "ಸುನಂದ" ನೆಂತಲು. ಕಾಮಪದವಿಗೆ ಬರುವವರು "ಸುಮಂತಾ"ನೆಂತಲು. ಇರುವರು. ಇಂದ್ರಪದವಿಗೆ ಬರುವ ಸುನಂದಾ ಮತ್ತು ಕಾಮಪದವಿಗೆ ಬರುವ ಸುಮಂತ. ಈರ್ವರು ಗರುಡಪದವಿಗೆ ಬರುವ "ಸುಮನಾ" ಎಂಬಾತನಲ್ಲಿ ಶ್ರವಣಮಾಡುವುದು. ಮುಂದೆ ನಾಲ್ಕುಮನ್ವಂತರ ಉಪಾಸನಾಮಾಡಿ ದೇವಮನದಿಂದ ಕೋಟಿ ವರುಷ ಧೂಮಪಾನಮಾಡಿ ತಪಸ್ಸು ಮಾಡುವರು.

3. ಸೂರ್ಯ ಪದಾರ್ಹ ಜೀವರಿಗೆ "ಸುರಪ"ಅಂತ ಹೆಸರು. ಚಂದ್ರಪದಾರ್ಹ ಜೀವರಿಗೆ "ಶಾಂಶರೂಪ" ಅಂತಹೆಸರು. ಇವರಿಬ್ಬರು ಗರುಡಪದಾರ್ಹ ಜೀವನದ "ಸುಮನಾ" ಎಂಬಾತನಲ್ಲಿ ನಾಲ್ಕು ಮನ್ವಂತರ ಗ್ರಂಥವ್ಯಾಸಂಗ. ವಂದು ಮನ್ವಂತರ ಉಪಾಸನಾ ಮತ್ತು ತಪಸ್ಸು ದೇವಮಾನದಿಂದ 10000 ಸಾವಿರ ವರುಷ ತಲೆಕೆಳಗಾಗಿ ತಪಸ್ಸುಮಡುವರು. ಸೂರ್ಯಾನಕಿರಣ 1000 ವರುಷ ಪಾನಮಾಡಿರುವ ಸಾಧನಧನರು ವಂದು ಮನ್ವಂತರ ಶ್ರವಣ ಮಾಡುವರು.

## ಮುಕ್ತಿಯೋಗ್ಯರ ಪ್ರಕರಣವು

**ಸ್ವರೂಪದೇಹ ಲಕ್ಷಣ:-** ಮುಕ್ತಿಯೋಗ್ಯಜೀವರು ಚಿದಾನಂದಸ್ವರೂಪರು. ಯಥಾಯೋಗ್ಯ ಇವರ ಸ್ವರೂಪದಲ್ಲಿ ಗುಣಕ್ರಿಯಾದಿ ಶೂಭಲಕ್ಷಣಾದಿಗಳುಂಟು. ಇವರ ಸ್ವರೂಪದೇಹ ಸುಂದರ ವಾದ ಅವಯವಾತ್ಮಕ, ವಾದ ದಶೇಂದ್ರಿಯ ಚಿದಾನಂದಾತ್ಮಕವಾಗಿಯು ದೇಹಕ್ಕೆ ಇವೆ. ಇವರ ಸ್ವರೂಪದಲ್ಲಿ ದೇವರು ಗುಣಪೂರ್ಣ, ಪರಮಮಂಗಳ ಸುಂದರವಿಗ್ರಹನೂ, ನಿಯಾಮಕನೂ ಆಗಿದ್ದಾನೆ. ತನ್ನಗುಣಗಳಿಂದ ಇವರಗುಣಗಳನ್ನು ತನ್ನಕ್ರಿಯಾದಿಂದ ಇವರ ಕ್ರಿಯಾದಲ್ಲಿಸಹಿತ, ತನ್ನಅವಯವದಿಂದ ಅವರ ಅವಯವಗಳನ್ನು ಪ್ರೇರಿಸಿ, ಸಾಧನಾವ್ಯಾಪರ ಗಳನ್ನು ಮಾಡಿ ಮಾಡಿಸುವನು. ಕಣ್ಣಿನಿಂದ ನೋಡಿ ನೋಡಿಸುವನು. ಕಿವಿಯಿಂದ ಕೇಳಿ

ಕೇಳಿಸುವನು. ಈಜೀವನಸ್ವರೂಪ ಇಂದ್ರಿಯಗಳಪೈಕಿ ಒಂದು ಕಣ್ಣಿನವ್ಯಾಪಾರವನ್ನು ಕಿವಿಯಿಂದ, ಕಾಲಿನ ವ್ಯಾಪಾರವನ್ನು ಕೈಯಿಂದ ಮಾಡಿಸುವುದಿಲ್ಲ. ಅಂದರೆ ಯಾವ ಇಂದ್ರಿಯ ವ್ಯಾಪಾರ ಮಾಡ ತಕ್ಕದ್ದು ಎಂದು ಈಶನ ಇಚ್ಛೆ ಇದೆಯೋ ಅದರಂತೆ ಆ ಇಂದ್ರಿಯವ್ಯಾಪಾರಗಳು ಜರುಗುತ್ತವೆ. ಆದರೆ ಸ್ವತಃ ದೇವರಶಕ್ತಿ ಹೀಗಲ್ಲ, ಕಣ್ಣಿನಿಂದ ಕೇಳುತ್ತಾನೆ, ನುಡಿಯುತ್ತಾನೆ. ನಡೆಯುತ್ತಾನೆ. ಇತರ ಇಂದ್ರಿಯಗಳಿಂದ ಆಗತಕ್ಕ ಕಾರ್ಯಗಳನ್ನು ವಂದೆ ಇಂದ್ರಿಯದಿಂದ ಮಾಡಲು ಸಮರ್ಥನಿದ್ದಾನೆ. (ದೇವರು ತನ್ನ ಅವಯವಗಳಿಗೆಲ್ಲಾ ಪೂರ್ಣನು) ಜೀವನು ಅಂಥಾ ಸ್ವರೂಪದಲ್ಲಿ, ಮನಸ್ಸಿನಲ್ಲಿ ಜ್ಞಾನಭಕ್ತಿ ವೈರಾಗ್ಯ,ಶಮ,ದಮ, ಬಲ, ವಿಜ್ಞಾನ, ಶೌರ್ಯ, ಗಾಂಭೀರ್ಯಾ ಮುಂತಾದವುಗಳು ಇವೆ. ಸಾಧನಾನಂತರದಲ್ಲಿ ವ್ಯಕ್ತವಾಡಿಕೊಡುತ್ತಾನೆ. 24 ತತ್ವ ಗಳಸ್ವರೂಪಭೂತ ಅವಯುವವನ್ನು ಲಿಂಗಶರೀರದ್ವಾರಾ ಉಪಚಯಮಾಡುವನು.

ಲಿಂಗಶರೀರ ತ್ರಿಗುಣಾತ್ಮಕದ ಸತ್ವ,ರಜ,ತಮ ಪರಿಚ್ಛೇದಾತ್ಮಕ ,ಷೋಡಶ ಕಲಾತ್ಮಕ, ಅನಾದಿ ಕಾಲೀನವಾದದ್ದು.-ಪಂಚತನ್ಮಾತ್ರ ಪಂಚಕರ್ಮೇಂದ್ರಿಯ. ಮನಸ್ಸು, ಈಷೋಡಶಕಳಾ. ಇವುಗಳಲ್ಲಿ, ಮನಸ್ಸು ಸತ್ವಪರಿಚ್ಛೇದ. ಇದು ಸಾಧಾರಣವಿಚಾರ. ಪಂಚಕರ್ಮೇಂದ್ರಿಯ ರಜೋ ಆವರಣ, ಪಂಚತನ್ಮಾತ್ರವ ತಮಪರಿಚ್ಛೇದದಲ್ಲಿ ಈಲಿಂಗಶರೀರ ದೊಳಗೆ ಅನಾದಿಕಾವು ಕರ್ಮ, ಅವಿದ್ಯಾಕೂಡಿ ಇವೆ.

ಲಿಂಗದೇಹದಲ್ಲಿನ ಬಿಂದುಗಳ ವಿವರ (21ಬಿಂದುಗಳು)

1. ಆಕಾಶ:- ಶ್ರೋತ್ರ,ಶಬ್ದ, ವಾಕ್ಕೂ,ಮನ = 05

2. ವಾಯು:- ತ್ವಕು, ಸ್ಪರ್ಶ,ಪಾಣಿ = 04

3. ತೇಜಸ್ಸು:- ಚಕ್ಷು, ರೂಪ, ಪಾದ = 04

4. ಅಪ್ಪು :- ರಸನೇಂದ್ರಿಯ,ಜಿಂಹ್ವೆ,ರಸ, ಗುಹ್ಯ = 04

5. ಪೃಥಿವಿ :- ಘ್ರಾಣೇಂದ್ರಿಯ, ನಾಶಿಕ, ಗಂಧ,ವಾಯು = 04

ಲಿಂಗದೇಹದಲ್ಲಿ ವಟ್ಟು: = 21

ಇದರೊಳಗೆ

ವರ್ಣ,ವೇದ, ಕಾಲ, ಅವ್ಯಾಕೃತಾಕಾಶ,ದೇಶ ಸತ್ವಬಿಂದು = 10

| | |
|---|---|
| ರಜೋಬಿಂದು | = 12 |
| ತಮೋಬಿಂದು | = 01 |

ಅಂತು ವಟ್ಟು 23 ಬಿಂದು ಇವೆ. ಇಲ್ಲಿ ವಾಯು, ವಾಣಿ, ಭಾರತಿ, ಎಲ್ಲ ರುಜುಗಳು ಸಹಭಾರ್ಯರಾಗಿ ಹಾರೆ. ಲಕ್ಷ್ಮೀನಾರಾಯಣರಿದ್ದಾರೆ. ಇನ್ನು ಪ್ರಾಕೃತ ಸ್ಥೂಲದೇಹದ ವಿಚಾರಬೇರೆ.

## ಇನ್ನು ಜಡಗಳವಿಚಾರ

**ನಿತ್ಯಜಡಗಳು:–** 1.ದೇಶ; 2.ಅವ್ಯಾಕೃತಾಕಾಶ; 3.ಉಪಾದಾನ ಭಾತ ಸೂಕ್ಷ್ಮರೂಪೇಣ.ಪ್ರಕೃತಿ ಕಾಲ ತತ್ಪ್ರವಾಹರೂಪೇಣ ಅಹಂಕಾರ ಕಾರ್ಯವಿಶೇಷಪರಾ: 4.ಶ್ವಾಸವಾಯು; 5.ಶೃತಿಗಳು; 6.ವೇದ; 7.ವರ್ಣ. ಪುರಾಣವರ್ಣ; 8.ತಾನಿತ್ಯಾರ್ಥರು ಅನಿತ್ಯಭೂತ; 9.ಇಂದ್ರಿಯ; 10.ಗುಣ; 11.ಪ್ರಾಣ; 12.ಸತ್ವಾದಿಗುಣ; 13.ಸೂಕ್ಷ್ಮರೂಪ ಮೂಲಪ್ರಕೃತಿ; ಅವ್ಯಕ್ತ ಮಯದಹಂಕಾರಾದಿ ಸೂಕ್ಷ್ಮಾತಿ ಸಂಸೃಷ್ಟಿ. ಅಸಂಸೃಷ್ಟ, ಅಂಡಮಹದಾದ್ಯುಪಾದಾನ ಭೂತ ಸೂಕ್ಷ್ಮಪ್ರಕೃತಿ ಭಾಗಸ್ಯ ನಿತ್ಯತ್ವಂ ಯುತಿತತ್ವವಿವೇಕಃ, ಅನಿತ್ಯ; ಪೂರ್ವಕರ್ತೃಪೇಕ್ಷಯು ಅನ್ಯಥಾ ಪರವಾಕ್ಯಾದಿ ಸಂಬಂಧ ರೂಪೇಣ, ಪುರಾಣಾನಾಂ, ನಿಮಿಷಕ್ಷಣಲವಾದಿ ರೂಪ ಪ್ರವಾಹರೂಪೇಣ, ಕಾಲಸ್ಯ ಪ್ರಕೃತೇದ್ವಿಪ್ರಕಾರ ರೂಪೇಣ, ಅನಿತ್ಯತ್ವಂ ಮಹದಾದಿನಾಂ ಉಪಚರ್ಯಂಚ ತೇಷಾಂ ವಿಕಾರಂ ಕಾರ್ಯ ಬ್ರಹ್ಮಾಂಡಾಂತರ್ಗತ ಸರ್ವ ಭೂತಾಕಾಶಂ:" ಈಪ್ರಕಾರ ಜಡಗಳಿಂದು ಪಚಯ.

| | | |
|---|---|---|
| 01 | ಸತ್ವ–ಸತ್ವ–ಸತ್ವ<br>ಸತ್ವ–ಸತ್ವ–ರಜ.<br>ಸತ್ವ–ಸತ್ವ–ತಮ. | ಇನ್ನೂ ಸೃಷ್ಟಿಗೆ ಬಂದಿಲ್ಲ. ಅವ್ಯಕ್ತತತ್ವ<br>ಬ್ರಹ್ಮ,ವಾಯು ವಾಣಿ,ಭಾರತಿ.ಮಹತತ್ವ,<br>ಅಹಂಕಾರತತ್ವ, ಗರುಡಾದಿ 12 ಜನರು. |
| 02 | ರಜೋ–ಸತ್ವ–ಸತ್ವ<br>ರಜ–ಸತ್ವ–ರಜ<br>ರಜ–ಸತ್ವ–ತಮ | ಮನಸ್ತತ್ವ, ಇಂದ್ರ, ಕಾಮರು. ತ್ವಕು, ತತ್ವ,<br>ಅಹಂಕಾರಿಕ ಪ್ರಾಣ. ಅನಿರುದ್ಧ, ಗುರು, ದಕ್ಷ,<br>ಸ್ವಾಯಂಭೂಮನು, ಶಚಿ, ರತಿ. |
| 03 | ರಜೋ–ರಜ–ಸತ್ವ<br>ರಜೋ–ರಜ–ರಜ<br>ರಜೋ–ರಜ–ತಮ | ಶ್ರೋತ್ರಾದಿ 4 ಜ್ಞಾನೇಂದ್ರಿಯ, ಪಾಣ್ಯಾದಿ<br>ಕರ್ಮೇಂದ್ರಿಯ, ಪ್ರವಹವಾಯು ಆರಂಭಿಸಿ<br>ಮಿತ್ರನಾಮಕಸೂರ್ಯ, ಗಣೇಶಾದಿ 85 ಜನ |

| | | |
|---|---|---|
| | | ಶೇಷಶತಸ್ಥರು. ಕರ್ಮಜದೇವತೆಗಳು. ವಿಕಾರದಿಂದ ಶಬ್ದ ಆಕಾಶ, ಅಹಂಕಾರಿಕತತ್ವ ದ್ವಾರಾ. |
| 04 | ರಜ–ತಮ–ಸತ್ವ<br>ರಜ–ತಮ–ರಜ<br>ರಜ–ತಮ–ತಮ | ವಿಕಾರದಿಂದ–ಸ್ಪರ್ಶದಿಂದ ವಾಯು.<br>ರೂಪ, ತೇಜ. ರಸ, ಅಪ್ಪು |
| 05 | ತಮ–ಸತ್ವ–ಸತ್ವ<br>ತಮ–ಸತ್ವ–ರಜ<br>ತಮ–ಸತ್ವ–ತಮ | ಗಂಧ, ಪೃಥ್ವಿ 14 ವಿಧ ಮೋಕ್ಷಾಧಿಕಾರಿಗಳು.<br>ಮಾನುಷ್ಯೋತ್ತಮರು.<br>(ನಿತ್ಯ ಸಂಸಾರಿಗಳು) |
| 06 | ತಮ–ರಜ–ತಮ<br>ತಮ–ರಜ–ರಜ<br>ತಮ–ರಜ–ತಮ | ಸ್ವರ್ಗಪ್ರಚುರರು.<br>ಭೂಪ್ರಚುರರು.<br>ನಿರಯ ಪ್ರಾಚುರ್ಯರು. |
| 07 | ತಮ–ತಮ–ಸತ್ವ<br>ತಮ–ತಮ–ರಜ<br>ತಮ–ತಮ–ತಮ | ಅನಾಖ್ಯಾತ ದೈತ್ಯರು.<br>ದೈತ್ಯರು.<br>ಕಲಿ ಅತಿನೀಚನು. |

ಇದರಲ್ಲಿ ಬಿಂದುಗಳು, ಸತ್ವಾದಿ ಬಿಂದುಗಳ ವಿಚಾರ. ಪಂಚಾವರಣ ತ್ರವರ್ತಿಕರಣ ವಿಚಾರ ಬೇರೆ ವಿಷಯವಾಗಿದೆ. ಶ್ರೀಭಾಗದಾವರಣ ವೇದದೊಳಗಿನ ಬಿಂದುಭಾಗ.

**ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಮಧ್ವೇಶಾರ್ಪಣಮಸ್ತು.**

## :ಅಥ ಚತುರ್ದಶವಿಧ ತಾರತಮ್ಯ:
## (ಪ್ರಕಾಶಸಂಹಿತ: 10ನೇ ಅಧ್ಯಾಯ–ಪ್ರಥಮಪರಿಚ್ಛೇದ)

14ವಿಧ ತಾರತಮ್ಯದವಿವರ:– 1.ಅಂಶ; 2.ಆನಂದ; 3.ಬಲ; 4.ಜ್ಞಾನ; 5.ದೇಶ; 6.ಕಾಲ; 7.ಅಪರೋಕ್ಷ; 8.ಲಯ; 9.ಸೃಷ್ಟಿ; 10.ಪದವಿ; 11.ಆವೇಶ; 12.ಗುಣ; 13.ಲಕ್ಷಣ; 14.ಕಾಂತಿ;

## 1. ಅಂಶತಾರತಮ್ಯ ವಿಚಾರ

ಪೂರ್ಣಪದಾರ್ಥದೊಳಗಿನ ಏಕದೇಶಕ್ಕೆ ಅಂಶವೆಂದು ಹೆಸರು. ಇಂದ್ರದೇವರ ರೂಪದಲ್ಲಿಯ ವಂದುದೇಶವು ಇಂದ್ರಾಂಶವೆಂದಂತೆ ತಿಳಿಯಬೇಕು. ಇದರಂತೆ ಇಂದ್ರಾಂಶಕ್ಕೂ ಸೂರ್ಯಾಂಶಕ್ಕೂ ತಾರತಮ್ಯವೇನಂದರೆ ಉಸುಗಿನ ಉಂಡಿಗೂ, ಭಂಗಾರದ ಉಂಡಿಗೂ, ಸಜ್ಜಿಗಿಉಂಡಿಗೂ, ತಾರತಮ್ಯವಿರುವಂತೆ ಸಮಾನಾಕಾರಉಳ್ಳ ಉಸುಗಿನಉಂಡಿ, ಸಮಾನಾಕರ ಮತ್ತು ಸಮತೂಕದಲ್ಲಿರುವ ಕಣಗಳು, ಗುರುತ್ವದಲ್ಲಿ ತಾರತಮ್ಯುಳ್ಳವುಗಳು. ಕಣದಲ್ಲಿ ತಾರತಮ್ಯಉಂಟು. ಉದಾಹರಣಗೆ ಅರ್ಜುನ,ಕರ್ಣ ಅಂದರೆ ಇಂದ್ರಾಂಶ, ಸೂರ್ಯಾಂಶ ಇವರ ತಾರತಮ್ಯ ಸ್ವರೂಪ ತಿಳಿಯಬೇಕು. ಸಮಾನಾಕಾರ ತೂಕ ವಜ್ರಮತ್ತು ಭಂಗಾರ ಇವುಗಳಲ್ಲಿಯು ಅಂಶಗಳಲ್ಲಿ ಬೇಧತ್ವ ಗುರುತ್ವ ಮೊದಲಾದ ಅನೇಕ ತಾರತಮ್ಯಗಳುಉಂಟು. ಅಂದರೆ ಸಂಖ್ಯಾತಾರತಮ್ಯ, ಗುಣತಾರತಮ್ಯ, ಆನಂದತಾರತಮ್ಯ ಮುಂತಾದ ಅಂಶಗಳಿಗೆ ತಾರತಮ್ಯವು ಆಯಾ ಅಂಶಗಳಲ್ಲಿರುವ ತಾರತಮ್ಯದಂತೆ, ಆಯಾಸ್ವರೂಪಗಳಿಗೆ ಅಭಿನ್ನವಾದ ಅಂಶಗಳಿಗೂ ಸ್ವರೂಪದಂತೆ ತಿಳಿಯಬೇಕು. ಸ್ವರೂಪಾನಂದ ತಾರತಮ್ಯವೇ ಶಾಸ್ತ್ರಕ್ಕೆ ಮುಖ್ಯ ವಿಷಚಿುವು. ಸ್ವರೂಪ ಅಭಿನ್ನವಾದ ಅಂಶತಾರತಮ್ಯವನ್ನು ಸ್ವರೂಪತಾರತಮ್ಯದಂತೆ ತಿಳಿಯತಕ್ಕದ್ದು.

## 2. ಆನಂದ ತಾರತಮ್ಯ ವಿಚಾರ

ಚತುರ್ಮುಖ ಬ್ರಹ್ಮದೇವರಿಗೆ ಬ್ರಹ್ಮಾನಂದವು. ಬ್ರಹ್ಮಾನಂದಕ್ಕೂ ಶೇಷಾನಂದಕ್ಕೂ ತಾರತಮ್ಯವೇನೆಂದರೆ ಶೇಷದೇವರಕಿಂತಲೂ, ಭಾರತೀದೇವಿಯರಿಗೆ 100 ಗುಣ ಹೆಚ್ಚು. ಭಾರತೀದೇವಿಯರಿಗಿಂತ ಬ್ರಹ್ಮದೇವರಿಗೆ 100ಗುಣ ಹೆಚ್ಚು. ಅಂದಮೇಲೆ ಶೇಷದೆವರಿಗಿಂತ ಬ್ರಹ್ಮದೇವರಿಗೆ 10 ಸಾವಿರ ಹೆಚ್ಚು ಆನಂದವಾಯಿತು. ಉದಾಹರಣೆಗೆ ಒಂದು ಬಾಳೇಹಣ್ಣಿನ ಅರ್ಧ ಶೇಷದೇವರಿಗೆ ಅರ್ಧಬ್ರಹ್ಮದೇವರಿಗೆ ಕೊಟ್ಟರೆ, ಶೇಷದೇವರು ಹತ್ತುಸಾವಿರ ಹಣ್ಣನ್ನು ತಿಂದರೆ ಎಷ್ಟು ಆನಂದವಾಗುವುದೋ, ಅಷ್ಟು ಅರ್ಧಹಣ್ಣಿನಿಂದ ಬ್ರಹ್ಮದೇವರಿಗೆ ಆಗುವುದು. ಇದರಂತೆ ಪ್ರಕಾಶದಲ್ಲಿ ಈ ವಿಶೇಷ ಉಂಟು. ಇದೇ ಸಜಾತಿಯ ಆನಂದವೆನಿಸುವುದು. ಇನ್ನೂ ವಿಜಾತಿಯ ಆನಂದವು ಹ್ಯಾಗೆಂದರೆ ಮೇಲೆ ಹೇಳಿದ ಬಾಳೆಹಣ್ಣಿನ ಉದಾಹರಣದಲ್ಲಿ ವಂದೇ ಮಾವಿನಹಣ್ಣು ಬ್ರಹ್ಮದೇವರಿಗೆ (ರಸಬೇಧ) ಬರೇಬಾಳೇಹಣ್ಣು ಶೇಷದೇವರಿಗೆ ಕೊಟ್ಟರಂತೆ ತಿಳಿಯೋಣ. ಮಾವಿನಹಣ್ಣಿನ ಆನಂದವು ಶೇಷದೇವರಿಗೆ ಆಗುವುದಿಲ್ಲ. ಇನ್ನು ಬ್ರಹ್ಮ ದೇವರಿಗೆ

ಅನಂತಪಟ್ಟು ಆನಂದ ಹೆಚ್ಚು ಆಗುವ್ಯದೆಂದು ತಿಳಿಯಬೇಕು. ಇದೇ"ವಿಜಾತಿಯ ಆನಂದವು." ಉತ್ತಮ್ಮರಿಗೆ ಅನಂತಪಟ್ಟು ಹೆಚ್ಚು ಎಂತಲು ತಿಳಿಯಬೇಕು. ಅಂದರೆ (ಅಧಮರಲ್ಲಿ ಇಲ್ಲದೆ ಇರತಕ್ಕ ಗುಣಗಳು ಉತ್ತಮರಲ್ಲಿ ಅನಂತಪಟ್ಟು ಹೆಚ್ಚು.) ಸಜಾತಿಯ ಶೇಷದೇವರು ವಂದುಪದಾರ್ಥ ಭುಂಜಿಸಿ ಹೊಂದಿದ ಆನಂದದ ಹತ್ತುಸಾವಿರಪಟ್ಟು ಆನಂದವನ್ನು ಬ್ರಹ್ಮದೇವರು ಅದೇಪದಾರ್ಥವನ್ನು ಬುಂಜಿಸಿ ಹೊಂದುವರು. ಮತ್ತು 10000 ಪಟ್ಟು ಪ್ರಕಾಶವನ್ನು ಹೊಂದುವರು. ಶೇಷದೇವರು ಹೊಂದದೆ ಇದ್ದಂತ ಮಾವಿನಹಣ್ಣು ತಿಂದು ಹಾಲುಕುಡಿದು ಬ್ರಹ್ಮದೇವರು ಹೊಂದಿದ ಆನಂದ ಪ್ರಕಾಶವು ಶೇಷದೇವರಕ್ಕಿಂತಲೂ ಅನಂತಪಟ್ಟು ಹೆಚ್ಚಾಗುವುದು.

## ೩. ಬಲತಾರತಮ್ಯ

ಉತ್ತಮರಬಲಕ್ಕಿಂತಲು, ಅವರು ಎಷ್ಟುಗುಣದಿಂದ ಹೆಚ್ಚಿರುವರೋ ಅಷ್ಟು ಹೆಚ್ಚಿರುವದು ಸಜಾತಿಯ ಬಲವು. ಉದಾಹರಣ; ವಂದು ಹುಲಿಯ ಬಲವು ಹತ್ತುಸಾವಿರ ಕುರಿಯಬಲಕ್ಕಿಂತಲು ಹೆಚ್ಚಾಗುವುದು. ಎಷ್ಟುಮಂದಿ ಅಧಮರುಕೂಡಿ ಮಾಡುವಕೆಲಸವನ್ನು ಉತ್ತಮನಾದವ ಒಬ್ಬನೇ ಮಾಡಿಬಿಡುವನು. ಇದೇ ಸಜಾತಿಯಬಲವೆಂದು ಕರೆಸುವುದು. ಉದಾಹರಣಕ್ಕೆ ಹತ್ತು ಸಾವಿರಕುರಿ ಮುಂತಾದುವುಗಳನ್ನು ಹೊರಿಸಿದ ವಂದುಪದಾರ್ಥವನ್ನು ವಂದು ಆನೆಯು ಯಳಕೊಂಡುಬರುವುದು. ಇದು ಸಜಾತಿಯಬಲವು. ಎಷ್ಟುಮಂದಿ ಅಧಮರು ಕೂಡಿ ವಂದು ಕಾರ್ಯವನ್ನು ಮಾಡುತ್ತಾರೋ ಅದೇಕೆಲಸವನ್ನು ಉತ್ತಮನಾದವನು ಒಬ್ಬನೇ ಮಾಡುವನು. ಇದೇವಿಜಾತಿಯ ಬಲವು. ಉದಾಹರಣೆಗೆ- 10ಸಾವಿರ ಕುರಿಗಳನ್ನು ಕಾಯತಕ್ಕ ವಬ್ಬ ಮನುಷ್ಯನನ್ನು ಆಕುರಿಗಳು ಏನುಮಾಡುತ್ತವೆ. ಆದರೆ ಆ ಮನುಷ್ಯನನ್ನು ಹುಲಿಯು ಅಥವಾ ಸಿಂಹ ತಿಂದುಬಿಡುವುದು. ಇದು ವಿಜಾತಿಯ ಬಲವು. ಅಂದರೆ ಈಬಲವು ಅಧಮರಲ್ಲಿ ಸಿಂಹಪಟ್ಟು ಹೆಚ್ಚು ಇರುವುದನ್ನು ಕಾಣಬಹುದು. ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ, ರಾಮಾವತಾರದಲ್ಲಿ ರಾಮಚಂದ್ರ ದೇವರು ಕುಂಭಕರ್ಣ ಖರ ದೂಷಣ, ಇವರುಗಳ ಸಂಹಾರಾರ್ಥವಾಗಿ ವ್ಯಕ್ತಮಾಡಿದ ವಿಶೇಷ ವೇದೇಶ ತಾರತಮ್ಯದಿಂದ ಸೂಕ್ಷ್ಮವಾಗಿ ತಿಳಿಯುಬಹುದು. ಇದರಲ್ಲಿ ಅವರವರ ಬಲನಿರ್ಣಯಿಸುವುದಕ್ಕಾಗಿ ಅವರವರ ನಿಧನಕ್ಕಾಗಿ ಬೇಕಾದಷ್ಟು ಬಲವನ್ನು ಪರಮಾತ್ಮ ವ್ಯಕ್ತಮಾಡಿದ್ದಾನೆ. ಹದಿನಾಲ್ಕು ಲೋಕಗಳಿಂದಯುಕ್ತವಾದ ಭೂಭಾಗವನ್ನು ಸಾಸಿವಿಕಾಳಿನಂತೆ ಶಿರದಲ್ಲಿ ಧರಿಸಿದ ಶೇಷದೇವರಿಗೆ ಆಧಾರವಾದ

ಕೂರ್ಮರೂಪಿ ವಾಯುದೇವರಬಲವು ಅನಂತಪಟ್ಟು ಹೆಚ್ಚಿರುವುದು. ಆನೆಯಲ್ಲಿರುವ ಶುಭಗುಣಗಳು ಕೋಣನಲ್ಲಿ ಹ್ಯಾಗೆಯಿರುವುದಿಲ್ಲವೋ, ಹಾಗೆ ಗರುಡ ಶೇಷ ರುದ್ರದೇವರಲ್ಲಿರುವ ಗುಣಮತ್ತು ಬಲವು ಇಂದ್ರಾದಿಗಳಿಗೆ ಮನಸಾ ಸ್ಮರಣಮಾಡಲು ಅಶಕ್ತವು.

## 4. ಜ್ಞಾನತಾರತಮ್ಯ

ಜ್ಞಾನತಾತರತಮ್ಯ ರಮಾದೇವಿಯರು ಈಶಭಿನ್ನವಾದ ಭಗವದ್ವಿಷಯಕ್ಕೆ ಅನಾಲೋಚನೆ ಯಿಂದಕರತಲಾಮಲಕವಾಗಿ ಜ್ಞಾನವಾಗುತ್ತದೆ. ಪರಮಾತ್ಮನ ಜ್ಞಾನಾನಂದಾದಿ ಗುಣವಿಷಯಗಳನ್ನು, ಸಾಕಲ್ಯೇನ ತಿಳಿಯಲಾರದೆ ಹೋದರು. ಮುಕ್ತಬ್ರಹ್ಮಾದಿಗಳಿಗಿಂತಲು ಅನಂತಕೋಟಿ ಗುಣ ಅಧಿಕವಾದ ಜ್ಞಾನವಂತರು- ಬ್ರಹ್ಮವಾಯು ರುಜುಗಳು. ಜಗತ್ತಿನ ಅತ್ಯಂತ ಅನಾಗತ ಜಗತ್ತಿನ ಭೂತ, ಭವಿಷ್ಯತ್,ವರ್ತಮಾನವನ್ನು ವಿಚಾರಮಾಡಿ ತಿಳಿಯುತ್ತಾರೆ. ರಮಾದೇವೇರಕಿಂತಲು ದೇವರಮಹಿಮವನ್ನು ಸ್ವಲ್ಪಾಸ್ವಲ್ಪ ತಿಳಿದರು ಶೇಷಾದಿಗಳಿಗಿಂತಲು ವಿಶೇಷವಾಗಿ ತಿಳಿಯುತ್ತಾರೆ. ಇನ್ನು ಶೇಷಾದಿಗಳು ಬ್ರಹ್ಮಾಂಡದ ಹೊರಗೆ ಮತ್ತು ವಳಗಿರುವ ಪದಾರ್ಥಗಳನ್ನು ಪೂರ್ಣತಿಳಿಯಲಾರರು. ಈ ನಿಯಮವು ಶೇಷದೇವರಿಂದ ಪುಷ್ಪರಾಂತ್ಯದವರೆಗು ತಿಳಿಯತಕ್ಕದ್ದು. ಬ್ರಹ್ಮದೇವರಕಿಂತಲು ಎಲ್ಲರ ಜ್ಞಾನವು ಕಡಿಮೆಯೆಂತಲು ತಿಳಿಯಬೇಕು. ಜ್ಞಾನವು ಸ್ವರೂಪೆಚಿತಲು, ಬಾಹ್ಯಜ್ಞಾನವೆಚಿತಲು ಎರಡುವಿಧ. ಎಲ್ಲ ಸುಜೀವಿಗಳಸ್ವರೂಪಜ್ಞಾನ ನಿತ್ಯವು. ಯತಾರ್ಥವಾದದ್ದು. ಆದರೂಪರಮಾತ್ಮನ ಇಚ್ಛಾ‌ಆವರ್ಕದಿಂದ ಆವೃತವಾದದ್ದು. ಸಾಧನಾನುಸಾರ ಪ್ರಸನ್ನನಾದ ಶ್ರೀಹರಿಯು ತನ್ನನಿಜ ಇಚ್ಛಾವರಣವನ್ನು ಅಪಸರಣ ಮಾಡಿದಾಗ್ಯೆ ಸ್ವರೂಪವ್ಯಕ್ತವನ್ನು ಹೊಂದುತ್ತಾನೆ. ಬಾಹ್ಯಜ್ಞಾನ ಬಾಹ್ಯಮನಸ್ಸಿನಲ್ಲಿ ಹುಟ್ಟತಕ್ಕದ್ದು. ಅದು ಪ್ರತ್ಯಕ್ಷ ಅಂದರೆ ಅನಭವ ಅನುಮಾನಯೆಂದರೆ ಯುಕ್ತಿ, ಆಗಮವೆಂದರೆ ವೇದ. ಈಮೂರು ಪ್ರಮಾಣಗಳಿಂದ ಉಂಟಾದ ಅಪರೋಕ್ಷವು ಬ್ರಹ್ಮಾದಿ ರುಜುಗಳಿಗೆ ಅನಾದಿಕಾಲದಿಂದ ಪೂರ್ಣವಾದದ್ದು. (ಬಾಹ್ಯಜ್ಞಾನವೆಂದರೆ ಅಂತಃಕರಣಜನ್ಯವು.) ಲಿಂಗಶರೀರದಂತೆ ಅಪರೋಕ್ಷ ಜ್ಞಾನವು ಅನಾದಿಯು, ಮುಂದೆ ಇದಕ್ಕೆ ನಾಶ ಉಂಟು. ಬಾಹ್ಯಮನೋವೃತ್ತಿ ರುಜುಗಳ ಅಪರೋಕ್ಷಜ್ಞಾನವು ಉತ್ಪತ್ತಿರಹಿತವಾದದ್ದು. ಅಜ್ಞಾನ ವಿರಹಿತ ಸಂಶಯದೋಷ ಇವುಗಳಿಂದರಹಿತವಾದದ್ದು. ಲಿಂಗದೇಹದ ಸಂಗಡಲೇಹೋಗತಕ್ಕದ್ದು. ಇದು ರುಜುಗಳಿಗೆ 200 ಕಲ್ಪ ಪರಿಯಂತರ ಇರುವದು. ರುಜುಗಳ ಅಪರೋಕ್ಷಜ್ಞಾನದಲ್ಲಿ ತಾರತಮ್ಯ ತಿಳಿಯುವುದು. ಹ್ಯಾಗೆಂದರೆ ಎಲ್ಲರುಜುಗಳಿಂದ ಬ್ರಹ್ಮದೇವರವರೆಗೆ

ಲಾತವ್ಯರೆಂದು ಹೆಸರು. ಇವರಲ್ಲಿ ಕಲ್ಕಿಯಿಂದ ಮುಂದೆ ಬ್ರಹ್ಮದೇವರವರೆಗೆ ಲಾತವ್ಯರೆಂದು ಹೆಸರು. ಲಾತವ್ಯವಾಯು, ಲಾತವ್ಯಬ್ರಹ್ಮ ಹೀಗೆ ತಿಳಿಯಬೇಕು. ಅಂದರೆ ರುಜುಗಳು 100 ಲಾತವ್ಯರಲ್ಲಿ ವಾಯು, ಬ್ರಹ್ಮ ವಟ್ಟು 200. ರುಜುಗಳ ಅಪರೋಕ್ಷಜ್ಞಾನದಲ್ಲಿ ಹೆಚ್ಚುಕಡಿಮೆಯಿರುವುದಿಲ್ಲ. ಅದು ವ್ಯಕ್ತವೆಂದು ತಿಳಿಯಬೇಕು. ಇವರಿಗೆ ಜ್ಞಾನಸ್ವರೂಪದಲ್ಲಿ ತಾರತಮ್ಯವಿರುವುದಿಲ್ಲ. ಸಾಧನದಲ್ಲಿ ತಾರತಮ್ಯ ಉಂಟು. ರುಜುಗಳ ಅಪರೋಕ್ಷದಲ್ಲಿ ಹೆಚ್ಚಿದಂತೆ ಹೆಚ್ಚುಹೆಚ್ಚು ಆಗುವುದು. ಅದುವೃದ್ಧಿಯಂದರೆ ಪರೋಕ್ಷದಲ್ಲಿ ವೃದ್ಧಿಯೆಂದು ತಿಳಿಯಬೇಕು. ಅದು ಅಪರೋಕ್ಷ ಸ್ಪಷ್ಠತೆ ಯಂತ ವ್ಯಕ್ತ ಸೃಷ್ಠಿತೆ ವಂದುಭಾವ. ಸ್ವರೂಪತಃ ಎಲ್ಲರುಜುಗಳು ಸಮರು. ರುಜುಗಳ ಅಪರೋಕ್ಷಮೊದಲಿಗೆ ಅಂದರೆ ಕಲ್ಕಿಪದಕ್ಕೆ ಬರುವಕ್ಕಿಂತ ಮುಂಚೆ ಸೃಷ್ಠಿಗೆ ಬಂದಕೂಡಲೆ ಅಪರೋಕ್ಷಜ್ಞಾನದಲ್ಲಿ ಶುದ್ಧಬಿದಿಗೆಯ ಚಂದ್ರಮನಂತೆ ಅವರಿಗೆ ಅಪರೋಕ್ಷವಿರುತ್ತದೆ, ಅದು ಹೆಚ್ಚಾಗುತ್ತ ಕಲ್ಕಿಬಂದಕೂಡಲೆ ಅಷ್ಠಮಿಚಂದ್ರನೋಪಾದಿಲಿ ಅವರ ಅಪರೋಕ್ಷವಾಗುವುದು. ಮುಂದಿನ ಸ್ಪಷ್ಟತ್ವ ಹೆಚ್ಚುತ್ತ ಬ್ರಹ್ಮಪದವಿಗೆ ಬಂದಕೂಡಲೆ ಪೂರ್ಣಚಂದ್ರಮನಂತೆ ವಿಶೇಷಾಪರೋಕ್ಷಿಗಳಾಗುವರು. ಕಲ್ಕಿಪದಕ್ಕೆ ಬಂದಕೂಡಲೆ ರುಜುಗಳಿಗೆ ವಿಶೇಷ ಅಪರೋಕ್ಷಿಗಳಂತೆ ಹೆಸರು ಯದ್ಯಾಪಿ ಯಾವತ್ತು ರುಜುಗಳಿಗೆ ಬಾಹ್ಯಮನೋವೃತ್ತಿ ಪರೋಕ್ಷ ಜ್ಞಾನಕ್ಕೆ ಸಾಮಾನ್ಯತಾರತಮ್ಯವಿಲ್ಲ. ತಥಾ ಇಚ್ಛಾಅಪಸರಣಾನುಸಾರ ಅನಾದಿತ್ಯ ಪ್ರಯುಕ್ತ ಜೌಪಾಧಿಕ ಅಂತರವು ಇರುತ್ತದೆ. ಜೌಪಾದಿಕಂತರವೆಂದರೆ ಪರಮಾತ್ಮನ ಇಚ್ಛಾವರಣ ಅನುಸರಿಸಿದಂತೆ ಅಪರೋಕ್ಷಕಾಂತಿಲಿ ಪರೋಕ್ಷಜ್ಞಾನದಲ್ಲಿ ಪರೋಕ್ಷಕಾಂತಿ ಹೆಚ್ಚು ಹೆಚ್ಚು ಪ್ರಕಾಶ ಉಂಟು ಮಾಡುವುದು. ಕಲ್ಕಿಗಿಂತ ಪೂರ್ವದಲ್ಲಿ ಹಿಂದಿನ 100 ಮಂದಿ ರುಜುಗಳಿಗು ದ್ವಿತೀಯ ಚಂದ್ರಮನಂತೆ ಅಪರೋಕ್ಷವಿರುವುದು. ಕಲ್ಕಿಪದಕ್ಕೆ ಬಂದಕೂಡಲೆ ಅಷ್ಠಮಚಂದ್ರಮನಂತೆ ಅಪರೋಕ್ಷವಾಗುವುದು. (ಚಂದ್ರನ ಉಪಮಾನ, ಜ್ಞಾನಕ್ಕೆ ಗ್ರಹಿಸುವುದಕ್ಕಾಗಿ) ಅವರ ಪ್ರಕಾಶವೇ ಅನಂತಕೋಟಿಸೂರ್ಯರ ಪ್ರಕಾಶವು. ಕಲ್ಕಿಯಿಂದ ಬ್ರಹ್ಮನವರೆಗೆ ಮೋಚಕಾ ಪರೋಕ್ಷ ಜ್ಞಾನಹೆಚ್ಚುತ್ತಾ ಹೋಗುವುದು. ತತ್ಪೂರ್ವ ರುಜುಗಳಿಗೆಲ್ಲ ಜಾತಾಪರೋಕ್ಷಿಗಳಾದ್ದರಿಂದ, ಅವರ ಸಾಮಾನ್ಯ ಅಪರೋಕ್ಷವಿದ್ದೇ ಇರುವುದು. ಗಣಪತಿಯಿಂದ ಬ್ರಹ್ಮದೇವರವರೆಗೆ ಭಕ್ತಿಯೋಗಿಗಳು. ಜಾತಾಪರೋಕ್ಷಿಗಳಾದಕಾರಣ ಇವರು ಪದಕ್ಕೆ ಬಂದನಂತರ ತಾರತಮ್ಯದಿಂದ ವಿಶೇಷಾಪರೋಕ್ಷವನ್ನು ಹೊಂದುವರು. ಶೇಷದೇವರ ಅಪರೋಕ್ಷಜ್ಞಾನ ತಮೋ ಜನ್ಯವು. ವೇದಾನುಸ್ಕಾರವಾಗಿ, ವೇದಪ್ರಮಾಣದಿಂದ ತತ್ವತಿಳಿಯುವವರಿಗೆ ವೈದಿಕರೆಂದು ಹೆಸರು. ಯಾವಪ್ರಮಾಣವನ್ನು ವೇದ ಅನುಸರಿಸುತ್ತದೆಯೋ ಅವರು ತ್ಯಕ್ತವೈದಿಕರು. ರುಜುಗಳು ಬ್ರಹ್ಮಾದಿಗಳಿಗೆ ತ್ಯಕ್ತ

ವೈದಿಕತ್ವವು ಅನಾದಿಕಾಲದಿಂದ ಇದೆ. ಆದರೆ ವೈದಿಕತತ್ವವು ಉಂಟು. ಗರುಡ, ಶೇಷ, ರುದ್ರಾದಿಗಳು ಮೊದಲು ವೈದಿಕರಿದ್ದುದಕ್ಕೆ ಪದಕ್ಕೆ ಬಂದನಂತರ ತ್ಯಕ್ತ ವೈದಿಕರಾಗುವರು. ವೇದದಲ್ಲಿ ಹೇಳಿದೆ ಇದು ತ್ಯಕ್ತ ವೈದಿಕವು. ವೈದಿಕತ್ವವೆಂದರೆ ವೇದಶಬ್ದ ರಾಶಿಯೆಂದರೆ (ವರ್ಣಸಮೂಹ+ಶಬ್ದಸಮೂಹ= ವೇದಶಬ್ದರಾಶಿ) ಅಭಿಮಾನಿಯಾದ ರಮಾ ದೇವಿಯರು. ಇವರು ದೇವರ ಸಾನ್ನಿಧ್ಯವುಳ್ಳವರು. ರಮಾನಾರಾಯಣರ ಸನ್ನಿಧಾನವೆಂದರೆ ದೇವರ ಸ್ವರೂಪಾತ್ಮಕ ಶಬ್ದರಾಶಿ. ರಮಾದೇವಿಯರ ಸ್ವರೂಪಾತ್ಮಕ ಶಬ್ದರಾಶಿ ವರ್ಣಾತ್ಮಕ ಶಬ್ದವು. ಹೀಗೆ ವೇದದಲ್ಲಿ ವಿಶೇಷತ್ವತಿಳಿಯಬೇಕು. ವೈದಿಕರು ತ್ಯಕ್ತವೈದಿಕರಾಗಬೇಕದರೆ ಹೀಗೆ ರಮಾದೇವಿಯರ ಸ್ವರೂಪಭೂತ ಶಬ್ದರಾಶಿ, ದೇವರ ಸ್ವರೂಪ ಶಬ್ದಗಳನ್ನು ತಿಳಿದು ಕೊಂಬೋಣವೇ ತ್ಯಕ್ತ ವೈದಿಕತ್ವವು. ಇದು ಅಧಮದೇವತೆಗಳಿಗಿಂತ ಉತ್ತಮದೇವತೆಗಳಲ್ಲಿ ವಿಶೇಷವಾಗಿ ತಿಳಿಯುತಕ್ಕದ್ದು. (ಅಂತಾರ್ಥಜ್ಞಾನ ಚಿಕ್ಕವರಲ್ಲಿ ಬಹಳ, ಯತಾರ್ಥಜ್ಞಾನ ಉತ್ತಮರಲ್ಲಿ ಉಂಟು. ಅಂದರೆ ಚಿಕ್ಕವರ ಅಂತಾರ್ಥಜ್ಞಾನಕ್ಕೂ ದೊಡ್ಡವರ ಯತಾರ್ಥ ಜ್ಞಾನಕ್ಕೂ ಎಷ್ಟೋ ಅಂತರಉಂಟು. ಅಷ್ಟೇದೊಡ್ಡವರ ಅಂತಾರ್ಥಜ್ಞಾನಕ್ಕೂ ಚಿಕ್ಕವರ ಯತಾರ್ಥ ಜ್ಞಾನಕ್ಕೂ ಚಿಕ್ಕವರ ಯತಾರ್ಥಜ್ಞಾನಕ್ಕೂ ಅಂತರವಿರುವುದು. ಅಂದರೆ ಉತ್ತಮರ ಜ್ಞಾನ ಸಂಖ್ಯ ಅಧಮರ ಜ್ಞಾನ ಎರಡು ಸಮ. ಅಧಮ್ಮರಜ್ಞಾನಸಂಖ್ಯ, ಉತ್ತಮರ ಜ್ಞಾನಸಂಖ್ಯಾಕ್ಕೆ ಸಮವೆಂದು ತಿಳಿಯಬೇಕು. ಕರ್ಮಜದೇವತೆಗಳಿಂದ ದೇವಗಂಧರ್ವರವರೆಗೆ ಮೇಲೆ ಹೇಳಿದ ತತ್ವಾಭಿಮಾನಿದೇವತೆಗಳು, ಸಾಂಶರು. ಕರ್ಮಜದೇವತೆಗಳಿಗೂ ನಿರಂಶ ಜೀವರಿಗೂ ವ್ಯತ್ಯಾಸವೇನೆಂದರೆ, ಕರ್ಮಜದೇವತೆಗಳಿಂದ ದೇವಗಂಧರ್ವರವರೆಗೂ ಇವರ ಬಾಹ್ಯ ಜ್ಞಾನವು ಅಪರೋಕ್ಷಕ್ಕೆ ಪೂರ್ವದಲ್ಲಿಯು ಸಹ ನರಕ ಸಾಧಕ ದುಷ್ಟಕರ್ಮಗಳನ್ನು ಮಾಡದೆ ಸಂಶಯ ದೋಷವಿಲ್ಲದೆ ಶುದ್ಧಕರ್ಮ ಮಾಡುವರು. ಇವರಿಗೆ ನರಕಬಾಧೆಯಿಲ್ಲಾ. ಶುದ್ಧ ಬಾಹ್ಯಜ್ಞಾನವು ಅಪರೋಕ್ಷಕ್ಕೆ ಪೂರ್ವದಲ್ಲಿಯು ಸಹ ನರಕ ಸಾಧಕ ದುಷ್ಟಕರ್ಮಗಳನ್ನು ಮಾಡದೆ ಸಂಶಯ ಶುದ್ಧಬಾಹ್ಯಜ್ಞಾನವು, ಆದರೆ ನಿರಂಶರಿಗೆ, ಅನಪರೋಕ್ಷ್ಯದಲ್ಲಿ ನರಕ ಭಯಉಂಟು. ಜ್ಞಾನಶುದ್ಧಿ ಯಿರುವುದಿಲ್ಲಾ, ಕಾರಣ ಪಾಪಕರ್ಮವನ್ನು ಮಾಡುವರು, ಶುಭಕರ್ಮವನ್ನು ಮಾಡುವರು. ಅಂದರೆ ಮಿಶ್ರಕರ್ಮವನ್ನು ಮಾಡುವರು.

## 5. ದೇಶತಾರತಮ್ಯ

ಅವ್ಯಾಕೃತಾಕಾಶ ಹಾಗೂ ತ್ರಿಗುಣ, ಮಹತತ್ವ, ಅಹಂಕಾರ ತತ್ವಗಳು. ಅವ್ಯಕ್ತತತ್ವದಲ್ಲಿ ರುಜುಗಳು ಇರುವುದಿಲ್ಲಾ. ಅವ್ಯಕತ್ತತ್ವ ಬಿಟ್ಟು ಉಳಿದ ಎಲ್ಲಾಕಡೆಗೆ ರುಜುಗಳಿಗೆ ಅಧಿಕಾರ ಉಂಟು. ಮಹತತ್ವಬಿಟ್ಟು ಶೇಷಾದಿಗಳಿಗೆ ವ್ಯಾಪ್ತಿ.

ಅಹಂಕಾರತತ್ವಬಿಟ್ಟು ಇಂದ್ರಾದಿಗಳಿಗೆ ವ್ಯಾಪ್ತಿ. ಇಂದ್ರಾದಿಗಳಿಂದ ಸ್ವಯಂಭೂಮನು ದಕ್ಷತತ್ವದವರಿಗೆ, ಮನಸ್ಸು (ಮನಃ) ತತ್ವದವರೆಗೆ ವ್ಯಾಪ್ತಿ. ಪ್ರವಾಹವಾಯು. ಸೂರ್ಯ, ಮೊದಲುಮಾಡಿಕೊಂಡು ಗಣಪತಿ ಪರಿಯಂತರ ಮನಸ್ಸು, ತತ್ವಬಿಟ್ಟು ವ್ಯಾಪ್ತಿ.

## 6. ಕಾಲತಾರತಮ್ಯ

1. ಬ್ರಹ್ಮದೇವರು ಮೊದಲು ಆತರುವಾಯ ಪ್ರತಿಯೊಬ್ಬ ರುಜುಗಳಿಗೆ (ಬ್ರಹ್ಮಮಾನದಿಂದ) ಒಂದು ನೂರುವರ್ಷಅಂತರವೆಂದು ದೇವನನದಿಂದ ತಿಳಿಯಬೇಕು.

2. ಶೇಷಾದಿಗಳಿಗೆ ದೇವಮಾನದಿಂದ ಒಂದು ಸಾವಿರ ವರ್ಷ ಅಂತರ, ಇಂದ್ರಾದಿಗಳಿಗೆ 10000 ವರ್ಷ ಅಂತರ ಅಂದಮೇಲೆ ಮೊದಲು ಹುಟ್ಟಿದವರ ಬಲ ಹಿಂದಗಡೆ ಹುಟ್ಟಿದವರ ಬಲಕ್ಕಿಂತಲು ಹೆಚ್ಚೆಂದು ತಿಳಿಯಬೇಕು. ಸ್ಥೂಲಕಾಲದಲ್ಲಿ ದಕ್ಷಿಣಾಯಣ, ಉತ್ತರಾಯಣವೆಂದು ಎರಡು ಭೇಧಉಂಟು. ಉತ್ತರಾಯಣದಲ್ಲಿ ಪ್ರಾಣೋತ್ಕ್ರಮಣ ಮಾಡಿದವರಿಗೆ ಉತ್ತಮ ಲೋಕ. ದಕ್ಷಿಣಾಯಣದಲ್ಲಿ ಪ್ರಾಣೋತ್ಕ್ರಮಣ ಮಡಿದವರಿಗೆ ಅಧೋಲೋಕ ಉಂಟು. ಎಷ್ಟೋ ಅಪರೀಕ್ಷಜ್ಞಾನಿಗಳು ದಕ್ಷಿಣಾಯಣದಲ್ಲಿ ಯಾತ್ರಾಮಾಡಿರುವರಲ್ಲಾ ಎಂದರೆ, ಅಂತರಂಗ ದಕ್ಷಿಣಾಯಣ, ಉತ್ತರಾಯಣ, ಬಹಿರಂಗ ಉತ್ತರಾಯಣ, ದಕ್ಷಿಣಾಯಣ ಎಂದು ಭೇದ. ಇದನ್ನು ಹೇಗೆ ತಿಳಿಯಬೇಕು ಎಂದರೆ, ನಮ್ಮದೇಹದಲ್ಲಿದ್ದ ನಾಡಿಗಳಮೇಲಿಂದ ಬಲಭಾಗದಲ್ಲಿ ನಡಿಯಿಂದ ಪ್ರಾಣೋತ್ಕ್ರಮಣವಾದರೆ, ಉತ್ತರಾಯಣದಲ್ಲಿ ಆದಫಲಉಂಟು. ಎಡ ಭಾಗದಲ್ಲಿರುವ ನಾಡಿಗಳಿಂದ ಪ್ರಾಣೋತ್ಕ್ರಮಣವಾದರೆ, ದಕ್ಷಿಣಾಯಣದಲ್ಲಿಯಫಲ ಬರುವುದು.

**"ಯಾರು ಸುಜ್ಞಾನಿಗಳು, ಯಾವಕಾಲದಲ್ಲಿ ಪ್ರಯಾಣ ಮಡಿದರೂ ಉತ್ತಮಲೋಕಕ್ಕೆ ಹೋಗುವರೆಂಬ ಭಾವ."**

## 7. ಅಪರೋಕ್ಷ ತಾರತಮ್ಯ

32,31,30, ಕಕ್ಷನಿರಂಶರಾದ ಮನುಷ್ಯ ಗಂಧರ್ವರಿಗೆ ಒಂದು ಸಾವಿರಜನ್ಮ ಕರ್ಮ, 10ಜನ್ಮ ಜ್ಞಾನ, 3ಜನ್ಮ ಭಕ್ತಿ, ಅಲ್ಲಿಂದ ವಾಸನಾಮಯ ಅಪರೋಕ್ಷ ಅನಚಿತರ ಸ್ವಲ್ಪ ಕಾಲಾಚಿತರ ಚಿದಾನಂದ ಅಪರೋಕ್ಷ ಏಕರೀತಿಯಿಂದ

ಆಗುವರು. ಇವರು ಕರ್ಮಯೋಗಿಗಳು. 29ನೇ ಕಕ್ಷ ಮೊದಲುಮಾಡಿ 19ನೇಕಕ್ಷದ ಪರಿಯಂತರ ಅಂದರೆ ಕರ್ಮಜದೇವತೆಗಳು. ಇವರೆಲ್ಲಾ ಜ್ಞಾನಯೋಗಿಗಳು ಅಂತ ಹೆಸರು. ಇವರಲ್ಲಿ 29,28,27ರವರೆಗೆ ಅಜಾನುಜರು ಜ್ಞಾನ ಯೋಗಿಗಳು. ಉಳಿದವರು ಎಂದರೆ, 26,25,24,23,22,21,20,19 ಕಕ್ಷದವರೆಲ್ಲಾ ವಿಜ್ಞಾನ ಯೋಗಿಗಳು. ಇವರಿಗೆ 100ನೂರುಜನ್ಮ ಕರ್ಮ 10000 ಜನ್ಮಜ್ಞಾನ, 300ಜನ್ಮ ಭಕ್ತಿ ಅನಚಿತರ ಅಪರೋಕ್ಷ ಇವರೆಲ್ಲಾ ವಿಜ್ಞಾನಯೋಗಿಗಳು. 18ನೇ ಕಕ್ಷದಿಂದ 3ನೇ ಕಕ್ಷವರಿಗೆ ಅಂದರೆ ಗಣಪತಿಯಿಂದ ಬ್ರಹ್ಮದೇವರಪರಿಯಂತರ ಅವರವರಿಗೆ ಹೇಳಿದ ಪ್ರಕಾರ ಕಲ್ಪ ಸಾಧನ. ಇವರು ಜಾತಾಪರೋಕ್ಷಿಗಳು. ಸಾಧನಾನಂತರ ಅಪರೋಕ್ಷಿಗಳಾಗುವರು. (ಚಿಪ್ಪಗಿರಿ ರಾಯರು ಪುರಂದರ ದಾಸರಲ್ಲಿ ಆಕಳಕರು ಆಗಿದ್ದರು.)

## 8. ಲಯ ತಾರತಮ್ಯ : 9. ಸೃಷ್ಠಿ ತಾರತಮ್ಯ

ಸೃಷ್ಠಿಕಾಲದಲ್ಲಿ, ಯಾರು ಮೊದಲು ಹುಟ್ಟಿರುವರೋ ಅವರ ತರುವಾಯ ಹುಟ್ಟಿದವರಿಗೆ ಮೊದಲು ಲಯಹೇಳಬೇಕು. ಸೃಷ್ಠಿಗೆ ಬರಲಿಕ್ಕೆ ಎಷ್ಟುವರ್ಷ ಅಂತರವೋ ಅಷ್ಟುವರ್ಷ ಪೂರ್ವದಲ್ಲಿ ಹಿಂದಗಡೆ ಸೃಷ್ಠಿಗೆ ಬಂದವರು ಲಯಹೊಂದುವರು. ಅಂದರೆ, ಮೊದಲು ಸೃಷ್ಠಿಗೆಬಂದವರು ಹಿಂದಗಡೆ ಲಯಹೊಂದುವರು. ಸೃಷ್ಠಿನಿಯಮಕ್ಕೆ ಅನುಸರಿಸಿ ಹಿರಿಯರು,

ಕಿರಿಯರು ಎಂದು ಎರಡುವಿಧ. ಕಿರಿಯರು ಮೊದಲು ಲಯ ಹೊಂದುವರು. ಹಿರಿಯರು ಹಿಂದಗಡೆ ಲಯಹೊಂದುವರು. ಸೃಷ್ಠಿಕಾಲಕ್ಕೆ ಅವರಿಗೆ ಎಷ್ಟೆಷ್ಟು ವರ್ಷ ಅಂತರವಿದೆಯೋ ಅಷ್ಟೇವರ್ಷ ಲಯದಲ್ಲಿ ಅಂತರ ಉಂಟು.

## 10. ಪದವಿ ತಾರತಮ್ಯ

ಶ್ರೀಹರಿಯ ಪರಮಾತ್ಮನು ಸರ್ವತಂತ್ರನು. ಎಲ್ಲರಲ್ಲಿಯು ಆತನ ಅಧಿಕಾರವಿದೆ. ಆತನ ಅಧಿಕಾರ ಆಪದವಿ ಇಚ್ಛಾಮಾಡಿದವರಿಗೆ ಅಂಧತಮಸ್ಸು ಆಗುವುದು. ಲಕ್ಷ್ಮೀದೇವಿಯರು, ಅನುಗ್ರಹಮಾಡಿದರೆ, ಪದವಿಯನ್ನು ಕೊಡುವ ಅಥವಾ ತೆಗೆದುಕೊಳ್ಳುವ ಅಧಿಕಾರವಿದೆ. ಇದರ ತರುವಾಯು ಬ್ರಹ್ಮ ಪದವಿಕೂಡಾ ರುಜುಗಳುವಿನಃ ಮತ್ತೊಬ್ಬರಿಗೆಯಿಲ್ಲಾ. ವಾಯು ಬ್ರಹ್ಮರು ಸಮರಾದರು ಪದವಿಮೂಲಕ ಬ್ರಹ್ಮದೇವರು ಕಿಂಚಿತಧಿಕ, ಯಿವರ ತರುವಾಯ, ಗರುಡ, ಶೇಷ, ರುದ್ರ, ಗರುಡ ಶೇಷ ಎರಡೇಪದವಿಗಳು, ರುದ್ರ ಶೇಷರಾಗುವರು. ತರುವಾಯ

ಇಂದ್ರಕಾಮರು ಪದವಿಗಿಂತ ಮಿಕ್ಕಾದವರ ಪದವಿ ಕಡಿಮೆ ಯಿರುವದು. ಪ್ರತಿಯೊಂದು ಪದಕ್ಕೆ, ಆಯಾಪದಕ್ಕೆ ಯೋಗ್ಯಜೀವರು ಬೇರೆ ಬೇರೆ ಇರುವರು. ಅವರ ವ್ಯತಿರಿಕ್ತ ಮತ್ತೊಬ್ಬರಿಗೆ ದೊರೆಯಲಾರದು. ಇಂದ್ರಾದಿ ಆಧಿಪತ್ಯವನ್ನು ಆಳಿದರೂ ಮುಕ್ತಿಯಲ್ಲಿ ಆಪದ ಜೀವರಿಗೆ ಆದ ಆನಂದವು ಉಳಿದವರಿಗೆ ಆಗಲಾರದು. ಇದರಂತೆ ಯಮ,ಚಂದ್ರ ಸೂರ್ಯ ಕುಬೇರನ್ನ ತಿಳಿಯಬೇಕು.

## 11. ಆವೇಶ ತಾರತಮ್ಯ

ಮೊದಲು ಜೀವನಸ್ವರೂಪದಲ್ಲಿ ಒಂದು ಶಕ್ತಿ ಏರ್ಪಟ್ಟಿದೆ. ಇದಕ್ಕೆ ಹೆಚ್ಚು ಬಲತೋರಿಸಿದರೆ ಅಲ್ಲಿ ಪರಮಾತ್ಮ ಅಥವಾ ದೇವತೆಗಳು ಆವಿಷ್ಠರಾಗಿದ್ದಾರೆಂದು ತಿಳಿಯತಕ್ಕದ್ದು. ಇದಕ್ಕೆ ಆವಿಷ್ಠಬಲವೆಂದು ತಿಳಿಯಬೇಕು. ಆವೇಶವೆಂದರೆ ಸ್ವರೂಪಯೋಗ್ಯತಾನುಸಾರ ಗುಣಆಗ ತಕ್ಕದ್ದು. ಕಾರ್ಯಕ್ಕಿಂತ ಅಧಿಕ ಕಾರ್ಯನಿರ್ವಾಹ ಶಕ್ತಿ ಇದ್ದಷ್ಟು ಇರುವುದೇ ಆವೇಶ ರೂಪವು. ಬ್ರಹ್ಮವಾಯು ರುಜುಗಳು ಮತ್ತು ವಾಣಿ, ಭಾರತಿ, ರುಜುಪತ್ನಿಯರು ಇವರು ಇಷ್ಟು ಜನರಿದ್ದರು, ಅಷ್ಟುವುಂದಿಯುಲ್ಲಿ ಪುಂರುಜುಗಳೆಲ್ಲಾ ಪುರುಷಾವೇಶ, ಸ್ತ್ರೀಯುರಾದ ರುಜುಪತ್ನಿಯರಲ್ಲಿ ಸ್ತ್ರೀನೀತಾವೇಶವೆಂದು ತಿಳಿಯಬೇಕು. ನೀತವೆಂದರೆ ಸ್ವರೂಪ ಲಿಂಗ ಸೂಕ್ಷ್ಮಗಳನ್ನು ಸ್ಥೂಲಗಳಲ್ಲಿ ತಕ್ಷಣಾರ್ಥ ನೀತನಾಗಿ ಸರ್ವದಾ ಇರೋಣ. ನೀತವಾದ ವಿಶೇಷ ಆವೇಶದಿಂದ ವ್ಯಕ್ತನಾಗಿರೋಣ. ಶೇಷಾದಿಗಳಲ್ಲಿ ಶೇಷಾದಿಪುರುಷಸ್ತ ತಾತ್ವಿಕದೇವತ ರೂಪ ಗಳಲ್ಲಿ ಪ್ರಾಯಶಃ ಇದರಂತೆ ವಿಶೇಷ ಆವೇಶವಿರುತ್ತದೆ. ಪ್ರತಿವಬ್ಬ ದೇವತೆಗಳಲ್ಲಿ ಶರೀರದಲ್ಲಿ ಆವೇಶವಿದ್ದರು ಅವತರಿಸಿ ಕೆಳಗೆಬಂದ ದೇವತೆಗಳಲ್ಲಿ ವಿಶೇಷ ದುಃಖಪ್ರಾರಬ್ಧ ದೇವತೆಗಳ ಆವೇಶದಲ್ಲಿ ಕಡಿಮೆ ಎಂದು ತಿಳಿಯಬೇಕು. ಅಂದರೆ ಸ್ವರೂಪ ಲಿಂಗ ಸೂಕ್ಷ್ಮದಲ್ಲಿದ್ದರೂ ಸ್ಥೂಲದಲ್ಲಿ ಕಡಿಮೆ ಇರುತ್ತದೆ. ತಾತ್ವಿಕರಲ್ಲಿ ಶೇಷಾದಿಗಳಿಗೆ ಮಾತ್ರಕಾರಣ ಪರತ್ವೇನ ದೇವರುಕೊಟ್ಟರೆ ಬರುತ್ತದೆ. ಇದು ದೇವರ ಆವೇಶವು. ಇನ್ನು ಉತ್ತಮ ದೇವತೆಗಳ ಆವೇಶವು ಅಧಮದೇವತೆಗಳಲ್ಲಿಯು ಇರುವುದು. ನಿರಂಶರಲ್ಲಿ ಆವೇಶವಿಲ್ಲ. ಸಾಂಸರಲ್ಲಿಯು ಮುಕ್ತಿಗೆ ಹೋಗುವವರೆಗೆ ತೆಗೆದು ಕೊಳ್ಳಬಹುದು. ಮುಕ್ತರಾದನಂತರ ಆವೇಶ ಇರುವುದಿಲ್ಲ. ದೈತ್ಯರಲ್ಲಿ ಆವೇಶಉಂಟು. ದೈತ್ಯರಲ್ಲಿ ಇದ್ದ ಆವೇಶರೂಪದಿಂದ ಮಾದಕ ಐಶ್ವರ್ಯ ಹೊಂದಿದ್ದು, ದುಷ್ಟರಾಗಿ ಉನ್ಮತ್ತರಾಗಿ ಸಾಧುಗಳನ್ನು ದ್ವೇಷಿಸಿ ತಮೋಭಾಗಿಗಳಾಗುವರು. ದೈತ್ಯರಲ್ಲಿದ್ದು ಆವೇಶರೂಪವು, ಜ್ಞಾನ, ಭಕ್ತಿ, ವೈರಾಗ್ಯದಿ ವ್ಯತಿರಿಕ್ತ ಇತರ ಶಕ್ತಿಯನ್ನು ವದಗಿಸಿ ಕೊಡುವರು. ಇದು ದೈತ್ಯರಲ್ಲಿದ್ದ ದೇವರ ಆವೇಶ ಮತ್ತು ತಾತ್ವಿಕ ದೇವತೆಗಳ

ಆವೇಶ ಎಂತ ತಿಳಿಯಬೇಕು. ದೇವತೆಗಳಲ್ಲಿ ದೇವರ ವಿಶೇಷ ಆವೇಶ ಉಂಟು. ಮನುಷ್ಯನು ಸತ್ಕರ್ಮ ಮಾಡುವವ್ಯಾಳದಲ್ಲಿ ಕಲ್ಯಾದಿಗಳ ಆವೇಶ ಇರುವುದಿಲ್ಲ. ಯಾವುದೊಂದು ಕೆಟ್ಟಕಾರ್ಯ ಆಗುವಕಾಲಕ್ಕೆ ಈದೈತ್ಯಾದಿಗಳ ಆವೇಶವೆಂದು ತಿಳಿಯಬೇಕು. ದೇವತೆಗಳಲ್ಲಿ ಸರ್ವದಾ ದೇವರ ಆವೇಶ ಇರುತ್ತದೆ. ವಂದುಕಾಲದಲ್ಲಿ ಪರಮಾತ್ಮನ ಇಷ್ಟಾನುಸಾರ ಹರಿವಾಯುಗಳ ಸಾನ್ನಿಧ್ಯತೆ ಇದ್ದಾಗ್ಯೆ ಏನಾದರೊಂದು ಕಾರ್ಯನಿರ್ವಾಹಕ್ಕಾಗಿ ಮನುಷ್ಯರೂಪ ವೆತ್ತಿದಾಗ್ಗೆ ಸ್ವಲ್ಪಕಾಲಮಾತ್ರ ಅವರಲ್ಲಿ ಕಲ್ಯಾವೇಶ ಇರುತ್ತದೆ. ಬ್ರಹ್ಮ, ವಾಯು, ವಾಣಿ, ಭಾರತಿ ಈನಾಲ್ವರನ್ನು ಬಿಟ್ಟು ಕಾಲಕಳೆದ ತರುವಾಯ ಪುನಹ ಇರುವುದಿಲ್ಲ. ಮಹದಾದಿಲೋಕಗಳಲ್ಲಿ ಇರತಕ್ಕ ದೇವತೆಗಳಲ್ಲಿ, ಈದೈತ್ಯಾವೇಶ ಪ್ರಾಯಶಃ ಜರುಗುವುದಿಲ್ಲ. ಅಪರೋಕ್ಷಾನಂತರ ಅಪರೋಕ್ಷ ಜ್ಞಾನಾನಂತರ ಅಪರೋಕ್ಷಜ್ಞಾನ ವಿದ್ದಾಗ ಅವರಿಗೆ ಕೆಲವರಿಗೆ ಅಪರೋಕ್ಷ ತಿರೋಭಾವ ಇರುವುದಿಲ್ಲವೋ ಅಲ್ಲಿವರೆಗೆ ಕಲ್ಯಾದಿಗಳ ಆವೇಶ ಇರಲಾರದು ಎಂದು ಸ್ಪಷ್ಟತಿಳಿಯಬೇಕು. ದೋಷದ ಮುಖ್ಯ ಫಲ ಕಲಿಗೆ ಹೋಗುವುದು. ಕಾರಣ ಸಜ್ಜನರು ವಿಶೇಷ ದೋಷಭಾಗಿಗಳಲ್ಲ.

## 12. ಗುಣತಾರತಮ್ಯ

| ಸಂಖ್ಯ | ದೇವತೆಗಳಹೆಸರು | ಗುಣದಲ್ಲಿ ತಾರತಮ್ಯ ಕಡಿಮೆ |
|---|---|---|
| 01 | ಶ್ರೀಲಕ್ಷ್ಮೀನಾರಾಯಣ | ಸರ್ವೋತ್ತಮ ಅನಂತಗುಣ ಪರಿಪೂರ್ಣ |
| 02 | ಲಕ್ಷ್ಮೀ | ಅನಂತಗುಣ |
| 03 | ಬ್ರಹ್ಮವಾಯುಗಳು. | ಕೋಟಿಗುಣ ವಿಜಾತಿಯ ಅನಂತಗುಣ |
| 04 | ಸರಸ್ವತಿ, ಭಾರತಿ | ಸಜಾತಿಯ 100 ಗುಣ |
| 05 | ಗರುಡ,ಶೇಷ, ರುದ್ರ | 100 ಗುಣ |
| 06 | ಷಣ್ಮಹಿಷಯರು | 5 ಗುಣ |
| 07 | ಸೌಪರಣಿ, ವಾರುಣಿ, ಉಮ | 2 ಗುಣ |
| 08 | ಇಂದ್ರ,ಕಾಮರು | 10 ಗುಣ |

| | | |
|---|---|---|
| 09 | ಅಹಂಕಾರಿಕಪ್ರಾಣ | 10 ಗುಣ |
| 10 | ಅನಿರುದ್ಧಾದಿ 5ಜನ | 10ಗುಣ |
| 11 | ಪ್ರವಹವಾಯು | 5 ಗುಣ |
| 12 | ಚಂದ್ರ,ವಿ.ಸೂರ್ಯ<br>ಯಮ,ಶತರೂಪ | 2ಗುಣ |
| 13 | ವರುಣ | ಪಾದ, ಪಾದಾರ್ಧ |
| 14 | ನಾರದರು | ಪಾದಾರ್ಧ |
| 15 | ಭೃಗು,ಅಗ್ನಿ,ಪ್ರಸೂತಿ | ಪಾದಾರ್ಧ |
| 16 | ಮರೀಚಿ, ಅತ್ರಿ, ಆಂಗೀರಸ,<br>ಪುಲಸ್ತ್ಯ, ಪುಲಹ, ಕ್ರತು,<br>ವಿಶ್ವಾಮಿತ್ರ. ವೈ. ಮನು. | 2ಗುಣ |
| 17 | ಮಿ.ಸೂರ್ಯ,ನಿಋತಿ,<br>ಪ್ರಾವಾಹಿ. | ಕಿಂಚಿತು<br>ನ್ಯೂನ |
| 18 | ಗಣೇಶ, ವಿಶ್ವಕ್ಸೇನ,<br>ಕುಬೇರ, ಅಶ್ವಿನಿ<br>ದೇವತೆಗಳು 85–ಶೇಷ<br>ಶತಸ್ಥರು | ಕಿಂಚಿತು ನ್ಯೂನ. |
| 19 | ಕರ್ಮಜರು ಚ್ಯವನ, ಸನಕಾದಿ<br>ಗಳು, ಪಾವಕಾದಿಗಳು–47,<br>ಉಚಿತ್ಯ, ಜಯಂತ, 11–ಮನು<br>ಗಳು, ರಾಜರು ಇತ್ಯಾದಿ | 2ಗುಣ |
| 20 | ಗಂಗಾ,ವಿರಾಟ್,ಉಷಾ,<br>ಶ್ಯಾಮಲ, ಪರ್ಜನ್ಯ, ಸಂಜ್ಞಾ,<br>ರೋಹಿಣಿ. | 2 ಗುಣ |
| 21 | ಅನಾಖ್ಯಾತರು | 2 ಗುಣ |

| | | |
|---|---|---|
| 22 | ಸ್ವಾಹಾ | 2 ಗುಣ |
| 23 | ಬುಧ | 2 ಗುಣ |
| 24 | ನಾಮಾಭಿಮಾನಿ ಉಷಾ | 2 ಗುಣ |
| 25 | ಶನಿ,ಧರಣಿ | 2 ಗುಣ |
| 26 | ಪುಷ್ಕರ | 2 ಗುಣ |
| 27 | ಅಜಾನುಜರು–100 ಪಿತೃ ಅಸುರರು–30,ಗಂಧರ್ವರು –200 ಯಕ್ಷರು–70, ರಾಕ್ಷಸ, ಭೂತ, ಪ್ರೇತಾದಿ ಸೇವಕರು ಕಿನ್ನರ,ಕಿಂಪುರುಷ,ವಿದ್ಯಾ ಧರರು, 16000 ಅಗ್ನಿ ಪುತ್ರರು,ಕೃಷ್ಣಾಂಗ ಸಂಗರು | 200ಗುಣ |
| 28 | ಚಿರಪಿತೃಗಳು | 200ಗುಣ |
| 29 | ದೇವಗಂಧರ್ವರು | 200ಗುಣ |
| 30 | ಮನುಷ ಗಂಧರ್ವರು | 200ಗುಣ |
| 31 | ಮನುಷ್ಯರಾಜರು. | 200ಗುಣ |
| 32 | ಮಾನುಷೋತ್ತಮರು | 200ಗುಣ |
| 33 | ಖಗ,ಮೃಗ,ಪಶು, ತೃಣಾಂತ ಮುಕ್ತಿಯೋಗ್ಯರು. | 200ಗುಣ |

## 13. ಲಕ್ಷಣತಾರತಮ್ಯ: ವಿಚಾರ (ಶ್ರೀವಾದಿರಾಜರು ವಿರಚಿತ)

| ಕಕ್ಷಸಂಖ್ಯ | ಕಕ್ಷಾದೇವತೆ ಹೆಸರು. | ಲಕ್ಷಣ |
|---|---|---|
| 01 | ದೇವರು ಲಕ್ಷ್ಮೀ ಪೂರ್ವೋಕ್ತ | ಚಿದಾನಂದರೂಪರು. |
| 02 | ಬ್ರಹ್ಮ,ವಾಯು,ವಾಣಿ,ಭಾರತಿ. | 32 ಲಕ್ಷಣ ಪೂರ್ಣಯುಕ್ತರು, 32ಲಕ್ಷಣದ ವಿವರ ಪ್ರಕಾಶ |

| | | |
|---|---|---|
| | | ಸಂಹಿತ– 11 ನೇ ಅಧ್ಯಾಯ. ಪ್ರಾಣೇಶ ದಾಸರ ಪದ 5 ದೀರ್ಘ. |
| 03 | ಸರಸ್ವತಿ, ಭಾರತಿ= 32 ಲಕ್ಷಣ | 5 ಹ್ರಸ್ವ, 7 ಸ್ಥಾನಗಳು, ರಕ್ತ ಮೊದಲು ಸ್ಥಾನ, ಗಂಭೀರ 3 ಲಘು, 3 ವಿಸ್ತಾರ, 1 ಕಾಲು, 2 ಜಾನುಗಳು 3 ಸ್ಥಾನ, ತುದಿನಾಶಿಕ, 5 ದೀರ್ಘ, (ಜಂಘಗ್ರೀವಲಿಂಗ ಪೃಷ್ಠ ಹ್ರಸ್ವ ಅಕ್ಷಚರಣ, ಕರ, ನಖ, ಅಧರ, ಜಿಂಹ್ವ, ಅಣು ಜಿಹ್ವಾ ರಕ್ತಮಯ) ಸತ್ವನಾಭಿಸ್ವರ ಗಂಭೀರ, ಕೇಶ, ಹಲ್ಲು, ನಖಪಂಚಲಕ್ಷಣ ಕಟಾಕ್ಷ,ವಕ್ಷ ಕರಣ ನಖ ಸ್ಕಂಧ, ಷಡುನ್ನತ ಲಲಾಟಪೂರ್ವ ವಿಸ್ತಾರ, ದೇವರು, ಲಕ್ಷ್ಮಿ,ಬ್ರಹ್ಮ,ವಾಯು ವಾಣಿ,ಭಾರತಿ=32 |
| 04 | ಗರುಡ,ಶೇಷ,ರುದ್ರ | 28 ಲಕ್ಷಣ |
| 05 | ಷಣ್ಮಹಿಷಯರು | 27 ಲಕ್ಷಣ |
| 06 | ಸೌಪರಣಿ, ವಾರುಣಿ, ಉಮ. | 26 ಲಕ್ಷಣ |
| 07 | ಇಂದ್ರ,ಕಾಮರು | 25 ಲಕ್ಷಣ |
| 08 | ಅಹಂಕಾರಿಕ ಪ್ರಾಣ | 24 ಲಕ್ಷಣ |
| 09 | ಗುರು,ಶಚಿ,ರತಿ, ಅನಿರುದ್ಧ,ದಕ್ಷಸ್ವಾ,ಮನು | 23 ಲಕ್ಷಣ |
| 10 | ಪ್ರವಹವಾಯು | 22 ಲಕ್ಷಣ |
| 11 | ರವಿ,ಚಂದ್ರ,ಯಮ,ಮಾನವಿ. | 21 ಲಕ್ಷಣ |

| | | |
|---|---|---|
| 12 | ವರುಣ | 20 ಲಕ್ಷಣ |
| 13 | ಅಗ್ನಿ,ಭೃಗು,ಪ್ರಸೂತಿ. | 19 ಲಕ್ಷಣ |
| 14 | ವಶಿಷ್ಠಾದಿ 9 ಜನರು | 18 ಲಕ್ಷಣ |
| 15 | ಮಿತ್ರ,ತಾರ,ನಿಋತಿ,ಪ್ರವಾಹಿ. | 17 ಲಕ್ಷಣ |
| 16 | ಗಣಪ, ಧನಪ, ವೊಷ್ವಕ್ಸೇನ, ಅಶ್ವಿನಿ ದೇವತರು,ಶೇಷಶತಸ್ಥರು. | 16 ಲಕ್ಷಣ |
| 17 | ಕರ್ಮಜದೇವತೆಗಳು | 15 ಲಕ್ಷಣ |
| 18 | ಸ್ವಾಹಾ | 13 ಲಕ್ಷಣ |
| 19 | ಬುಧ | 13 ಲಕ್ಷಣ |
| 20 | ಉಷಾ | 13 ಲಕ್ಷಣ |
| 21 | ಬುಧಪತ್ನಿ | 13 ಲಕ್ಷಣ |
| 22 | ಧರಣಿ,ಶನ್ಯೈಶ್ಚರ. | 12 ಲಕ್ಷಣ |
| 23 | ಪುಷ್ಕರ | 11 ಲಕ್ಷಣ |
| 24 | ಅಜಾನಜರು | 10 ಲಕ್ಷಣ |
| 25 | ಶತಾನುಕೋಟಿ ಋಷಿಗಳು | 08 ಲಕ್ಷಣ |
| 26 | ಚಿರಪಿತೃಗಳು, ತತ್ಪತ್ನೀಯರು | 08 ಲಕ್ಷಣ |

## 14. ಕಾಂತಿ ತಾರತಮ್ಯ ವಿಚಾರ:
## (ಶ್ರೀವಾದಿರಾಜರು ವಿರಚಿತ ಪ್ರಮೇಯಮುಕ್ತಾವಲಿ)

1. ತೃಣಜೀವರು 1/2 ಘಳಿಗಿ ಅಪರೋಕ್ಷಕಾಲ–ಸಣ್ಣಬತ್ತಿ ದೀಪದಕಾಂತಿ, ವಂದುನೆಲ್ಲು ಪರಿಮಿತಿ, ಹತ್ತುಯೋಜನ ದೇಹದಕಾಂತಿ ವ್ಯಾಪ್ತಿ. ಗುಣ ಉಪಾಸನಾ ಬಿಂಬದರ್ಶನಮಾತ್ರ.

2. ಕ್ರಿಮಿಕೀಟಗಳು 3/4 ಘಳಿಗಿ. ದಪ್ಪನಬತ್ತಿದೀಪದಕಾಂತಿ. ಬೋರೇಹಣ್ಣಿನಷ್ಟು ಭಗವದ್ದರ್ಶನ. 10 ಯೋಜನಕಾಂತಿ. 1. ಗುಣೋಪಾಸನ, ಬಿಂಬದರ್ಶನಮಾತ್ರ.

3. ಮೃಗಪಕ್ಷಿಜೀವರು 1ಘಳಿಗಿ, 10ಬತ್ತಿದೀಪದಪ್ರಕಾಶ. ಅಂಗುಷ್ಠಾಗ್ರಮಾತ್ರ. 20ಯೋಜನ, 2ಗುಣ ಬಿಂಬದರ್ಶನ ಮಾತ್ರ.

4. ಖಗಪಶುಜೀವರು $1^{3/4}$ ಘಳಿಗಿ. 100ಬತ್ತಿದೀಪದ ಕಾಂತಿ. ಒಂದು ಅಂಗುಷ್ಠಾಗ್ರ 40ಯೋಜನ, 3ಗುಣ ಬಿಂಬ ದರ್ಶನಮಾತ್ರ.

5. ಶೂದ್ರಜೀವರು $1^{13/16}$ (1.13)ಘಳಿಗಿ 13ಆಣಿ ಮಿಂಚಿನಕಾಂತಿ. ವಂದುಅಂಗುಷ್ಟ ಪರಿಮಿತಿ 80 ಯೋಜನದೇಹದ ಕಾಂತಿ $3^{1/4}$ ಸಣ್ಣಮಂಟಪಸಹಿತ ಬಿಂಬದರ್ಶನ.

6. ವೈಶ್ಯಜೀವರು $1^{3/4}$ ಘಳಿಗಿ 7/8 ಮಿಂಚಿನಕಾಂತಿ ಮೂರು ಅಂಗುಷ್ಟ 160 ಯೋಜನ $3^{1/2}$ ಗುಣೋಪಾಸನ. ಮಂಟಪದೇವರು. ನೀತ ದೇವರುಗಳು. ಪದಸ್ತದರಲ್ಲಿ ದೇವತೆಗಳು. ಅವರ ದೇವತೆಗಳು ಇಷ್ಟು ಜನರ ದರ್ಶನ.

7. ಕ್ಷತ್ರಿಯಜೀವರು $1^{15/16}$ ಘಳಿಗಿ 15ಆಣಿ ಮಿಂಚಿನಕಾಂತಿ ವಂದು ಅಂಗುಷ್ಟ ಪರಿಮಿತಿ. 240 ಯೋಜನ ವ್ಯಾಪ್ತಿ $3^{3/4}$ ಗುಣ ದೇವರು ಮಂಟಪ ಪೀಠ, ದೇವತೆಗಳು ಆವರಣದೇವತೆಗಳು ಪದಸ್ತರು ಪದಸ್ತರಲ್ಲಿದ್ದವರು.

8. **ಮನುಷ್ಯೋತ್ತಮರು:–** ಬ್ರಾಹ್ಮಣ 2ಘಳಿಗಿ ವಂದು ಮಿಂಚಿನ ಕಾಂತಿ, ವಂದು ಅಂಗುಷ್ಟ ಪರಿಮಿತಿ. 320ಯೋಜನ. 4 ಗುಣ. ದೇವರು, ತಾತ್ವಿಕರು, ಅತಾತ್ವಿಕರು, ಆವರಣದೇವತ ಮಂಟಪ. ಸುಷುಮ್ನ, ಸಪ್ತಕಮಲ ದೇವತೆಗಳು ದೇವತಾಂತರ್ಗತ ಭಗವದ್ರೂಪ ಅಂತು ದಶವಿಧ ದರ್ಶನ.

9. **ಮಾನುಷ್ಯ ಚಕ್ರವರ್ತಿಗಳು:–** ಮಾನುಷ್ಯ ಚಕ್ರವರ್ತಿಗಳಿಗೆ 10 ಮಿಂಚಿನಕಾಂತಿ, ವಂದು ಅಂಗುಷ್ಟಪರಿಮಿತಿ. 640ಯೋಜನ. 10ಗುಣೋಪಾಸನಾ 12 ವಿಧಪ್ರಕಾರ ಕಾಣುತ್ತಾರೆ.

10. **ಮನುಷ್ಯಗಂಧರ್ವರು:–** ಮನುಷ್ಯಗಂಧರ್ವರು 4ಘಳಿಗಿ 20ಮಿಂಚಿನಕಾಂತಿ ವಂದು ಅಂಗುಷ್ಟ 960 ಯೋಜನ, 10ಗುಣೋಪಾಸನ 12ವಿಧಪ್ರಕಾರ ಮನುಷ್ಯ ಚಕ್ರವರ್ತಿಗಳಂತೆ ಕಾಣುತ್ತಾರೆ.

11. **ದೇವಗಂಧರ್ವರು:–** ದೇವಗಂಧರ್ವರು 6ಘಳಿಗಿ 1ಸೂರ್ಯನಕಾಂತಿ, ವಂದು ಅಂಗುಷ 84 ಸಾವಿರ ಯೋಜನ 100 ಗುಣೋಪಾಸನ ಮನುಷ್ಯಗಂಧರ್ವರಗಿಂತ ವಿಶೇಷ ಕಾಣುತ್ತಾರೆ.

12. **ಚಿರಪಿತೃಗಳು:–** ಚಿರಪಿತೃಗಳು 6ಘಳಿಗಿ 1ಸೂರ್ಯನಕಾಂತಿ ವಂದು ಅಂಗುಷ ಭುವರ್ಲೋಕ ಪರಿಯಂತ 10000 ಗುಣೋಪಾಸನ. ದೇವಗಂಧರ್ವರಕಿಂತಲು ವಿಶೇಷ ಕಾಣುತ್ತಾರೆ.

13. ಕೃಷ್ಣ ಅಂಗಸಂಗಿಗಳಾದ ಗೋಪಿಕಾಸ್ತ್ರೀಯರು $7^{1/2}$ ಘಳಿಗಿ 5000ಸೂರ್ಯಕಾಂತಿ ವಂದು ಅಂಗುಷ್ಠ ಪರಿಮಿತಿ 5.ಲಕ್ಷಯೋಜನ. ಲಕ್ಷಗುಣೋಪಾಸನ. ಚಿರಪಿತೃಗಳಿಗಿಂತ ಅಧಿಕ ವಿಶೇಷಕಾಣುತ್ತಾರೆ.

14. ಅವಶಿಷ್ಠರಾದ ಅಜಾನುಜರು. ಅಗ್ನಿಹೋತ್ರರು ಸಹ ಘಟಿಕಾ, 10000ಸೂರ್ಯಕಾಂತಿ ವಂದು ಅಂಗುಷ್ಠ, ವಂದುಕೋಟಿಯೋಜನ, ವಂದುಕೋಟಿ ಗುಣೋಪಾಸನ. 13ನೇಸಂಖ್ಯಾ ತರಾದವರಿಗಿಂತ ವಿಶೇಷ ಮತ್ತು ಇಡಾ ಪಿಂಗಳಾನಾಡೀ ಅಂತರ್ಗತ ಭಗವದ್ರೂಪಗಳು 24 ತತ್ವದೇವತೆಗಳು ತದಂತರ್ಗತ ಭಗವದ್ರೂಪಗಳು ದೇಹಗತ, ಸರ್ವನಾಡೀಗತ ಭಗವದ್ರೂಪ ಗಳು ಕಾಣುತ್ತವೆ.

15. ಘುಷ್ಕರಾರಭ್ಯ ಶತಸ್ತ ದೇವತಾಂತ ಕರ್ಮಜರು 15ಘಳಿಗಿ 1ಕೋಟಿ ಸೂರ್ಯಕಾಂತಿ ವಂದು ಅಂಗುಷ್ಠ ಪರಿಮಿತಿ 14ಲೋಕದವರೆಗು ದೇಹದ ಕಾಂತಿ, ವ್ಯಾಪ್ತಿ ಬಂದು ಅರ್ಬುದ ಗುಣೋಪಾಸನ. ವ್ಯಾಪ್ತದರ್ಶಗಳು ಅಂತರ್ಭವ ಅಪರೋಕ್ಷಿಗಳು, ಸ್ವದೇಹದಲ್ಲಿ, ಪರದೇಹದಲ್ಲಿ ಮಹಾವಿಶೇಷಗಳು ಕಾಣುತ್ತಾರೆ.

16. ಶತಸ್ತದಾರಭ್ಯ ರುದ್ರದೇವರ ವರೆಗೆ 16–30 ಘಳಿಗಿ ಅಪರೋಕ್ಷ. ಒಂದುಕೋಟಿ ಅರ್ಬುದ ಸೂರ್ಯಕಾಂತಿ. ವಂದುಅಂಗುಷ್ಠ ಪರಿಮಿತಿ. 25ಶರಸ್ತರಾರಭ್ಯ ಇಂದ್ರನವರೆಗೆ ಜೀವರ ದೇಹದ ಕಾಂತಿ. 25 ಕೋಟಿಯೋಜನ ವ್ಯಾಪ್ತಿ. 50ಕೋಟಿ ರುದ್ರಾದಿ ಜೀವರ ದೇಹದಕಾಂತಿ ವ್ಯಾಪ್ತಿ. ಅಂಡದಖರ್ಪರದ ಪರಿಯಂತ ವಂದು ಸಂಖ್ಯಾಗುಣೋಪಾಸನ. ಅಂತರ್‌ವಿಶೇಷಗಳನ್ನು ಕಾಣುತ್ತಾರೆ.

17. ಬ್ರಹ್ಮಾದಿ ರುಜುಗಳು 60ಘಳಿಗಿ ಅಪರೋಕ್ಷ. ವಂದು ಅನಂತಸೂರ್ಯಕಾಂತಿ. ವಂದು ಅಂಗುಷ್ಠ ಪರಿಮಿತಿ ಭಗವದ್ರೂಪ ದರ್ಶನ. ಅಂಡದ ಒಳಗೂ, ಹೊರಗೂ ಅನೇಕ ಗುಣೋಪಾಸನಗಳು ಕಾಣುತ್ತಾರೆ.

**ಇತಿ ಕಾಂತಿತಾರತಮ್ಯ ಸಂಪೂರ್ಣಂ.**

**ಶ್ರೀಮದ್ವೇಶಾರ್ಪಣಮಸ್ತು.**

## -: ಸೃಷ್ಟಿ ಪ್ರಕರಣ :-

ಪ್ರತಿದಿವಸ ಬ್ರಹ್ಮೀಮುಹುರ್ತದಲ್ಲಿ ನಿದ್ರೆಯಿಂದ ಎಚ್ಚೆತ್ತು ಮಮುಮಕ್ಷುವಾದ ಅಧಿಕಾರಿಯು, ಮಲಮೂತ್ರಾದಿಗಳನ್ನು ವಿಸರ್ಜಿಸಿ ಉತ್ಯಾದಿನಂತರ ತುಲಸಿ ವಂದನಾದಿಗಳನ್ನುಮಾಡಿ, ಚಿಂತನೆ ಮಾಡುವ ಸೃಷ್ಟಿಕ್ರಮವು, ಪರಮಮಂಗಳನಾದ,ಗುಣಪೂರ್ಣನಾದ, ದೋಷಗಂಧ ವಿದೂರನಾದ ಶ್ರೀರಮಾ ಬ್ರಹ್ಮಗಳಿಂದ ಆಲಿಂಗಿತನಾದ, ಸ್ವರಮಣನಾದ, ಶ್ರೀಬ್ರಹ್ಮಾದಿ ಚೇತನರಾಶಿಗೆ ನಿರವಧಿಕ ಸರ್ವೋತ್ತಮನಾದ ಶ್ರೀಮನ್ನಾರಾಯಣನು, ಪೂರ್ವಕಲ್ಪದಲ್ಲಿ ಬ್ರಹ್ಮಮಾನದಿಂದ 50ವರುಷ ಬಹಿಬ್ರಹ್ಮಾಂಡ ಸೃಷ್ಟಿ $37^{1/2}$ ವರ್ಷ ಬ್ರಹ್ಮಾಂಡ ಸೃಷ್ಟಿಗೆ, ಸ್ಥಿತಿಗೆ ಹೀಗೆ $87^{1/2}$ ವರುಷದಕಡೇಭಾಗದಲ್ಲಿ (ದಿವಸದಲ್ಲಿ) ಹಗಲು ಉಳಿದಿರಲು ಹಗಲಿನಲ್ಲೆ 100 ವರುಷ ಮನುಷ್ಯಮಾನದಿಂದ

1. ದ್ವಾದಶಾದಿತ್ಯರು ಅತಿ ಉಲ್ಬಣವಾದ ತೇಜಸ್ಸಿನಿಂದ ತಪಿಸಿ ಪಾತಾಳದಲ್ಲಿದ್ದ ಶೇಷನಮುಖ ದಿಂದ ಸಂಹೃತಾಗ್ನಿ ಹೊರವರಟು ಸಮಸ್ತರನ್ನು ದಹಿಸಲು.

2. 100 ವರುಷ ಪ್ರಚಂಡವಾಯುವು ಶತಸಂವತ್ಸರ ಬೀಸಿ ಸರ್ವವೂ ಶೋಷಿಸಲು.

3. 100 ವರುಷ ಪರಿಯಂತರ ಸಂವೃತಮೇಘಗಳು. ಆನಿಸೊಂಡಿಲಿ ತೆರದಿ ಧೋರಾಧಾರಿ ಯಾಗಿ ಮಳೆಗರಿಯಲು, ಸರ್ವವು ಲಯಹೊಂದಿ ಪಂಚಮಹಾಭೂತಗಳು, 24 ಜಡತತ್ವಗಳು ವಂದರಲ್ಲಿ ವಂದುಕ್ರಮೇಣ ಲಯಹೊಂದಿದ ಸಮಸ್ತ ಜೀವರಾಶಿಗಳನ್ನು ಲಯಹೊಂದಿಸಿ, ಸಮಸ್ತ ಜೀವರಾಶಿಗಳನ್ನು ಲಯವೈದಿಸಿ. ಪ್ರಮಾಣ: "ಬ್ರಹ್ಮಚರ್ಮಶಿರಃ ಪಟ್ಟಹದಿದ್ವೇಕದಾಗಃ ಭೂಷಣ। ದ್ವಾದಾಶಾರ್ಕ ಶಿರೋಧಾಮೇ, ರುದ್ರೋಶೀರ್ಷಿಕನೂಪುರಃ।" ಎಂಬ ವಚನಾನುಸಾರ ಶ್ರೀನೃಸಿಂಹದೇವರು ಬ್ರಹ್ಮನ ಮಹತತ್ವಾತ್ಮಕ ಶರೀರವನ್ನು ಟೊಪ್ಪಿಗೆಯಂತೆ ರುದ್ರಶೀರ್ಷಗಳನ್ನು ನೂಪುರದಂತೆ ಧರಿಸಿ,ನರ್ತನಮಾಡಿ, ಸರ್ವಭೂಮಂಡಲವನ್ನು ಲಯಹೊಂದಿಸಿ ಬ್ರಹ್ಮಾಂಡಾಂತರ್ಗತವಾದ ಸರ್ವಭಗವದ್ರೂಪಗಳನ್ನು, ಜೀವಾಂತರ್ಗತರಪಗಳನ್ನು ಏಕಾಂತತ್ವೇನ ಐಕ್ಯಮಾಡಿಕೊಂಡು ಸರ್ವಜೀವರುಗಳನ್ನು ತನ್ನಉದರಲ್ಲಿಯಿರಿಸಿಕೊಂಡು ನಾಭಿಪೂರ್ವ ಬಲಪ್ರದೇಶದಲ್ಲಿ ಶೋಭಿಸುವಂತಮುಕ್ತರನ್ನು, ನಾಭಿದಕ್ಷಿಣಭಾಗದಲ್ಲಿ ಅಸ್ಪೃಜ್ಯರನ್ನು, ನಾಭಿ ಎಡಪೂರ್ವಪ್ರದೇಶದಲ್ಲಿ ಆಮುಕ್ತಾದಿಗಳು, ನಾಭಿಎಡ

ಅಧಿಷ್ಠಾನದಲ್ಲಿ ತಮೋಯೋಗ್ಯರನ್ನು, ನಾಭಿಮಧ್ಯ ಪ್ರದೇಶದಲ್ಲಿ ನಿತ್ಯಸಂಸಾರಿಗಳನ್ನು, ತನ್ನಉದರದಲ್ಲಿ ಇಟ್ಟುಕೊಂಡು ಪ್ರಳಯೋದಕದಲ್ಲಿ ಸರ್ವವುನಾಸ್ತಿ. ಶ್ರೀಲಲನೆಜಲವು, ಭೂದೇವಿ ವಟಪತ್ರವು, ದುರ್ಗಾದೇವಿ ಕತ್ತಲೆ, ರೂಪ ಧರಿಸಿದರು. ಆಗ ವಟಪತ್ರವು ಐವತ್ತುಕೋಟಿ ಗಾವುದ ಪರಿಮಿತಯು. (ಒಂಭತ್ತು ಕೋಟಿಗಾವುದ ವೆಂದು ಇತರಮತ) ಆಲದಯಲೆಯಮೇಲೆ ಆಶೂನ್ಯನಾಮಕ ಪರಮಾತ್ಮನು 7ಕೋಟಿಗಾವುದ ಶಿಶುವಾಗಿ ತನ್ನಬಲದ ಕಾಲಿನ ಅಂಗುಷ್ಠವನ್ನು ತನ್ನಬಾಯಿಯ ವಳಗೆ ಇಟ್ಟುಕೊಂಡು ಚೀಪುತ್ತಾ, ಹಿಂದಿನ ಅನಂತಾನಂತ ಬ್ರಹ್ಮಕಲ್ಪಗಳಲ್ಲಿ ಅನಂತಾನಂತ ಮುಕ್ತಬ್ರಹ್ಮಾದಿಗಳ ನಿರಧಿಕವಾದ ಭಕ್ತ್ಯಾತಿಶಯದಿಂದ ಸೇವೆಮಾಡಿ ತನ್ನ ಪಾದಕಮಲಗಳಿಗೆ ಅರ್ಪಿಸಿದ ಆಸೇವಾರೂಪದ ರುಚಿಯನ್ನು ಚುರು ಚುರುನೆ ಮೇಯುತ್ತಾನೆಂಬೋ ಊಹವನ್ನು ತೋರಿಸಿ ಆವಟಪತ್ರದಲ್ಲಿ ಯೋಗಮಾಡುವ ತೆರದಿಮಲಗಿದನು. ಶ್ರೀದೇವೇರಿಗೆ ನಿದ್ರಾದಿಗಳು ಇಲ್ಲ. ಆದರೆ ಸಮಸ್ತ ಜೀವರ ನಿದ್ರೆಯ ಯೋಗನಿದ್ರೆಯಂದು ಕರೆಸಿಕೊಳ್ಳುತ್ತದೆ. ಇಂಥಾ ಸುಪ್ತಿಕಾಲದಲ್ಲಿ ಸಮಸ್ತ ಪ್ರಾಣಿಗಳು ಅಲ್ಲಿ ಸುಪ್ತರು. ನಿತ್ಯಸುಪ್ತವರ್ಜಿತನಾದ ದೀಪ್ತಿ ಮೂರುತಿಯ ಆಜ್ಞದಿಂದ "ಪ್ರಳಯೇಪಿಪ್ರತಿಭಾತಿ ಪರಾತ್ಪರ" ಎಂಬ ಸೂತ್ರನಾಮಕ ವಾಯುದೇವರು ಸಮಸ್ತರಲ್ಲಿಯು ಶ್ವಾಸಕಾರ್ಯಗಳನ್ನು ಜಾಗ್ರತಿಯಿಂದ ಮಾಡಿಸುತ್ತಾರೆ. ಇಂಥಾಕಾರ್ಯವು. ಅನ್ಯರಿಗೆ ಎಂದಿಗೂ ಇಲ್ಲ. ಇಂಥಾವಟಪತ್ರಶಾಯಿ ಆದಪರಮಾತ್ಮನು $87^{1/2}$ ವರುಷ ಕೊನೆದಿನದಿ ರಾತ್ರಿಪ್ರಾರಂಭವಾಗಲು ಯೋಗನಿದ್ರಾ ಪ್ರಾರಂಭಕಾಲ. ಅದೇರಾತ್ರಿಯು 100ವ ವರ್ಷಕ್ಕೆ 8ನೇಭಾಗದೊಳು ದುರ್ಗಾ "ಜಯುಜಯುವೆಂದು" ಸ್ತುತಿಸಲು (ಶೃತಿಗೀತೆಯಿಂದ) ಸೃಷ್ಟಿಮಾಡೇನೆಂದು ಮಲಗಿದವನೋಪಾದಿಲಿ ಎಚ್ಚೆತ್ತೆನು. ಅಂದರೆ ಆವಟ ಪತ್ರದಲ್ಲಿ ಯೋಗನಿದ್ರಾಕಾಲವು $87^{1/2}$ ವರುಷದ ಕೊನೆಯದಿನ ರಾತ್ರಿ 8ಭಾಗ ಮಾಡಲು ವಂದುಭಾಗಕ್ಕೆ $1^{1/2}$ ತಾಸು ಉಳಿದಿರಲಾಗಿ ದುರ್ಗಾದೇವಿಯರು ಸ್ತೋತ್ರಮಾಡಿ ದರು. ಎಂದು ಗುರುಪುರಂದರರಾಯರು "ಗಜದಲ್ಲಿ ಗಜರೂಪನಾಗಿ". ಎಂಬ ಸುಳಾದಿ ಯಲ್ಲಿ ವಿಸ್ತಾರವಗಿ ವರ್ಣಿಸಿದ್ದಾರೆ. "ಲಯಸ್ತು ಅಷ್ಟತೋಭಾಗೇ ಸೃಷ್ಟಿಕಾಲ ಉದಾಹೃತಃ" ಎಂಬ ಪ್ರಮಾಣಾನುಸಾರ ಬ್ರಹ್ಮದೇವರ 100 ವರುಷ 8ನೇಭಾಗವೇ ಸೃಷ್ಟಿಕಾಲವೆಂತ ಕರೆಸುತ್ತದೆ. ಇದಕ್ಕೆ ಚಾತುರ್ಮಾಸ್ಯ ವರಾಹಕಲ್ಪದಲ್ಲಿಯೂ "ಆಯುಷ್ಯಸಮಯಂ ಪ್ರಾಹಹುಃ ಬ್ರಹ್ಮವಾಯು ಸಮ್ಮಿತಂ ಬುಧಾಯ ದಾ। ತಥಾಷ್ಟಮೋ ಭಾಗೋಶಿಷ್ಟ್ಯೇತ ತದಾಮಯಃ" ಎಂಬ ವಚನಾನುಸಾರವಾಗಿಯೂ, ಮತ್ತು ಭಾಗವತ ದಶಮಸ್ಕಂಧ ಉತ್ತರಾರ್ಧ ಅಧ್ಯಾಯ 94 (ಶೃತಿಗೀತಾ) ಶ್ರೀಸತ್ಯಧರ್ಮ ಸ್ವಾಮಿಗಳವರ

ಟಿಪ್ಪಣಿಯಲ್ಲಿಯು ವಿಶದವಾಗಿ ಹೇಳಿದ್ದು; ಟಿಪ್ಪಣಿ: "ತಮೋ ಸೃಷ್ಠಿಕಾಲಇತ್ಯತಃ ಅದು। 1ಯಾಮ ಅಷ್ಠೋಭವಂತಿ ದಿವ ಸಸ್ಯಚಸಾಗ್ರಂ ಭೂಮೇ ಪಶ್ಚಿಮ ಪ್ರತ್ಯೋಕ್ಷೇಪ ಹಸೋದ್ದಾಮನಮ್ಯ ಗಾಚಮ್ಯ ವಾರಿಣೇತ್ಯಾದಿ ಪರಾಶರ ವಚನಾತ್ । ಪಂಚ ಪಂಚ ಉಷಃಕಾಲ: ಸಪ್ತಪಂಚಾ ಅರುಣೋದಯಃ ಅಷ್ಟಪಂಚೇ ಭವೇತ್ಪಾತು ಶೇಷ; ಸೂರ್ಯೋದಯ, ಸ್ಮೃತಃ ಇತಿಪಂಚ ಘಟಕಾನಿಮಿಷ । ಶಬ್ದವಾಚ್ಯಾತ್ಯಾತ್ ತತಃ ಪೂರ್ವಘಟಿಕಾದ್ವಯಸಾಮಿಸೇ ಸವವದಿವಾಸಾಷ್ಟಮೋಭಾಗಃ ಪ್ರತ್ಯೂಷ ಶಬ್ದಪಶ್ಚಿಮೋ ಯಮ ಇತ್ಯುಚ್ಯತೇ। ಲೋಕಮನುಕುರ್ವಾನ್ ಹರಿರಪಿ ಪಶ್ಚಿಮ ಯುವೋಜಾಗ್ರದಿವ ಭವತಿ ಯಥಾ ಘೋಷಕಾಲ ಕರ್ತವ್ಯಸ್ಯ ಪಳದಿ ನಾನುಪ್ರವೇಶಸ್ತಯ । ಲಯಕಾಲಸ್ಯ ನಿತ್ಯಶ್ವಾದಿ ಹರೇಃ ದ್ವಿಪರರಾದ್ಧ ಆತ್ಮಕಃ ಸ್ವಯಂ ಆಯಸ್ಯತೋ ನಿಮಿಷ ಶ್ರೇಯತ್ಪ್ರತ್ಯೋ ಪಚರ್ಯಾತ್ । ಇತ್ಯುಕ್ತೇ ಲಯಕಾಲಸ್ತೆ ರಾಮಶಬ್ದವಾಚ್ಯತ್ವೇನ ।ತತ್ರಯಮಾದಿಭಜನೇ । ಶತಾನಂದ ಶತಸಂವತ್ಸದೇತ್ಮಾತಸ್ಯ ದಾದಿಭಾಗೇ ಸತಿಸಾರ್ಧ ದ್ವಾದಶವರುಷಾತ್ಮಕೋ ಅಷ್ಟಮೋಭಾಗ ಸ್ತೋದಿ ಸೃಷ್ಠಿಕಾಲ ಉದಾಹೃತಃ ।" ಎಂಬುವ ವಚನಾನುಸಾರ ವಾಗಿಯೂ ವಟಪತ್ರಸ್ತನಾದ ಪರಮಾತ್ಮನಯೋಗ ನಿದ್ರೆಯು $87^{1/2}$ ವರುಷದ ಕೊನೆಯದಿನದ ರಾತ್ರಿ 12 ತಾಸಿನಲ್ಲಿ $23^{1/4}$ ಘಟಿಕಾ ಅಂದರೆ ಸುಮರು 23 ಕಾಲು ಘಟಿಕಾ ಮಾನದಿಂದ ಯೋಗನಿದ್ರಾಕಾಲ. ಮುಂದೆ $8^{3/4}$ ಘಟಿಕಾಕಾಲ ದಿಂದ ಸೃಷ್ಠಿಕಾಲವೆಂದು ನಿರ್ಣಿತವಾದ ಪ್ರಮೇಯವು. ಆದರೆ ವಿಷ್ಣುರಹಸ್ಯದಲ್ಲಿಯು ಇದು ವಿಸ್ತಾರವಾಗಿ ಹೇಳಿರುವುದು. ಪರಮಾತ್ಮನ ಉದರದಲ್ಲಿ ಅದಕ್ಕೆ ಪ್ರಮಾಣ:–"ಸ್ವಸೃಷ್ಠಂಚ ನತು ಸ್ವಯಮೇವ ಸಂಹೃತ್ಯಚೇತನಂ ಸೋದರೇ ನುಷ್ಟವನ್, 1.ನಾಭಿರಥ ವಾಮಭಾಗ ಪ್ರಾಪ್ತ ತವುಸ್ಮಾನ್; 2.ನಾಭಿರಥ ವಾವುಭಾಗೆ ತವೋಂಯೋಗ್ಯಾನ್; 3.ಸಮಪ್ರದೇಶೇ ನಿತ್ಯ ಸಂಸಾರಿಣ; ನಿಕ್ಷಪ್ಯ; 4. ನಾಭೇ ಉಪರಿದಕ್ಷಿಣಭಾಗೆ ಮುಕ್ತಾನ್: 5. ನಾಭಿ ಉಪರಿ ವಾಮಭಾಗೆ ಮುಕ್ತಿಯೋಗ್ಯಾನ್ ನಿಕ್ಷಿಪ್ಯ ವಿಷ್ಣುರಹಸ್ಯ ಅಧ್ಯಾಯ 2 ಶ್ಲೋಕ (5–6–12) ಇದರಲ್ಲಿ ಹೇಳಿದಪ್ರಮೇಯವು ಮೇಲೆಹೇಳಿದಕ್ಕೆ ಅನುಕೂಲವಾಗಿಯೇ ಇರುವುದು. 15ವರ್ಷ ಬ್ರಹ್ಮಮಿತೆ ಪ್ರೋಕ್ತೆ ತಚ್ಚತಾ ಪರಮುಚ್ಯತೇ । ತದರ್ಧಮಪರ ಪಂಚಶತ್ ಬ್ರಹ್ಮವರ್ಷಕಂ । 15 ಅಪರಮಾಯು; ಬ್ರಹ್ಮಣಶ್ಯ ತದತ್ತ ತೋಚತಲ್ಲಯುಃ ಪ್ರಳಯುಪರ ಸಂಖ್ಯಾತು ನಾರದ ದ್ವಾದಶವರ್ಷತೇ ಅಷ್ಟಮಂ ಶೋಭವೇ ಸಾರ್ಧಂ ಸಪ್ತಾತ್ಸಬ್ದರೆಗತೇ । ಯೋಗನಿದ್ರಾಂ । ವಿಮುಂಚಾಮಿ ತತಃ ಕ್ರೀಡಾಮಿಪೂರ್ವತು । ತತಃ ಸ್ಯೇರಂತಿ ಮೇವತ್ವೇ ಪ್ರಳಂಯಾಶ್ವಾದಶೇ ಕ್ಷಿತೆ. ಕ್ರೀಡಾಸವಾಪಿ ತಾಪಶ್ಚ್ಯತೆ ।ಶಿಶೃಕ್ಷಾಮಿಸ್ಯಚೌಯತೆ; ಮತ್ತು ಶ್ರೀಮತ್‌ವಿಷ್ಣುತೀರ್ಥರು ಷೋಡಶಿ 5ನೇಪ್ರಕರಣದಲ್ಲಿ

ಸ್ಥೂಲಶರೀರ ಸೃಷ್ಠಿ ಪ್ರಕರಣದಲ್ಲಿ ಲಕ್ಷ್ಮಾಲಿಂಗಿತ-ಸಭಗವಾನ್ ಬಾಲರೂಪೇಣ ವೈಕುಂಠಸ್ಯ ಶ್ರೀಭಾಗೋಪರಿಸಾರ್ಧ ಸಪ್ತಾಶತು ವರುಷಪರಿಯಂತ ಯೋಗನಿದ್ರಾಂ ಮುಪಚಗಾಮ ।ತದಾಂಗ ಜಗತ್‌ಸರ್ಜನ ವ್ಯಾಪಾರಶೂನ್ಯತ್ವಾತ್ ಶೂನ್ಯ ಪದಾಭಿದೇಯತಾಂಚ ಹತಸ್ತೇನೈವ ಮಾನೇನ ಸಾರದ್ವಾದಶ ವರುಷ ಅವಿಶಿಷ್ಟೇಷು ಯೋಗ ನಿದ್ರಾಂ ಸಮಾಪ್ಯಂತ ಕಲಿಕ ಬ್ರಹ್ಮದದಶೇ" ಎಂತ ಈಪ್ರಕಾರ ಹೇಳಿರುವರು. ಇಷ್ಟು ಪ್ರಮಾಣಗಳು ವಿಶದವಾಗಿ ಹೇಳಿದ್ದರೂ ವಟಪತ್ರಶಾಯಿಯಾದ ಪರಮಾತ್ಮನ ಯೋಗನಿದ್ರಾ ಕಾಲವು 100ವರ್ಷ ಬ್ರಹ್ಮಮಾನದಿಂದ ಎಂದು ಹೇಳಿದರು. ಆದರೆ ಇದು ಮೇಲಿನಪ್ರಮಾಣ ಗಳಿಗೂ, ಯುಕ್ತಿಗಳಿಗೂ ವಿರೋಧವೆಂದು ತೋರುತ್ತದೆ. ಯಾಕೆಂದರೆ ಲೋಕದಲ್ಲಿ ವಬ್ಬ ಮನುಷ್ಯನ ವಂದು ಪದಾರ್ಥವನ್ನು ಸೃಷ್ಠಿಮಾಡಲಿಕ್ಕೆ ಎಷ್ಟು ಹೆಚ್ಚಿನಕಾಲ ಬೇಕಾಗುತ್ತಿದೆಯೋ ಅದೇವಸ್ತುವನ್ನು ನಾಶಮಾಡಲಿಕ್ಕೆ ಎಂದಿಗೂ ಅಷ್ಟುಕಾಲ ಬೇಕಾಗುವುದಿಲ್ಲ. ಇದು ಸರ್ವ ಸಮ್ಮತವಾದದ್ದು. ಈನ್ಯಾಯದಿಂದಲು ಮತ್ತು ಬ್ರಹ್ಮದೇವರಿಗೆ 100 ವರುಷ ಆಯುಷ್ಯ ಎಂದು ಸರ್ವರಿಂದಲು ಪ್ರಮಾಣಗಳಿಂದಲು ಮಾನ್ಯವಾದ ಸಿದ್ಧಪ್ರಮೇಯವು. ಹೀಗಿರಲು ಬ್ರಹ್ಮದೇವರ 100 ವರುಷಯೋಗನಿದ್ರಾಕಾಲವೆಂದು ವಡಂಬಟ್ಟರೆ, ಬ್ರಹ್ಮದೇವರಿಗೆ 200 ವರ್ಷಆಯುಸ್ಸು ಎಂದು ಹೇಳಿದಂತಾಯಿತು. ಇದು ಎಲ್ಲಿಯೂ ಕಂಡುಬಂದಿಲ್ಲ. ಕಾರಣ ಬ್ರಹ್ಮಮಾನ ಶತವರ್ಷ ಪರಿಯಂತರ ಯೋಗನಿದ್ರಾಎಂಬ ಪ್ರಮಾಣಕ್ಕೆ ಬ್ರಹ್ಮದೇವರ ಆಯು ನೂರುವರ್ಷ ಪರಿಯಂತರವಾಗಿ ಅಂದರೆ ಬ್ರಹ್ಮನಲ್ಲಿ ಆಯು ನೂರುವರ್ಷ ಮುಗಿಯುವ ವರೆಗೆ ಪುನಃ ಸಾಧನಜೀವಿಗಳು ಸೃಷ್ಠಿಯಲ್ಲಿ ಎಂಬುವ ಕಾರಣ ಬ್ರಹ್ಮಮಾನ ಶತವರ್ಷ ಪರಿಯಂತರ ಲಯಕಾಲ ಎಂತಹೇಳಿದ್ದಾರೆ ಹೊರತಾಗಿ ಬೇರೆ ಅಲ್ಲಿ ಪೂರ್ವದಲ್ಲಿ ಅಂಭ್ರಣಿದೇವಿಯು ಅನೇಕವಾದ ಶೃತಿಗಳಿಂದ ಸ್ತೋತ್ರಮಾಡಿದಳು ಅಂತಹೇಳಲ್ಪಟ್ಟಿದೆ. ಈಶೃತಿಗಳು ವೇದವರ್ಣಗಳು ಅವ್ಯಾಕೃತಾಕಾಶ(ಅಂದರೆ ದೇಶ) ಕಾಲ,ಜೀವಾ,ಕರ್ಮ ಇದೆಲ್ಲಾ ನಿತ್ಯವಾದಂತವು.ಪ್ರತಿಯೊಂದಕ್ಕೆ ಲಯಕಾಲದಲ್ಲಿ ವೇದಗಳಿಗೆ, ವೇದವರ್ಣಗಲಿಗೆ ಅಂದರೆ (51ಅಜಾದಿ ವರ್ಣಗಳು) ಸರ್ವಜೀವಸ್ವರೂಪಸ್ಥ ಜ್ಞಾನವ್ಯಂಜಕಶಕ್ತಿಯು ಕುಂಠಿತವಾಗುತ್ತದೆ. ಮತ್ತು ಅವ್ಯಾಕೃತಾಕಾಶಕ್ಕೆ ಅಂಡಾದಿ ಸಕಲಜಡಜೀವರುಗಳಿಗೆ ಇರಲು ಅವಕಾಶ ಕೊಡಲು ಆಶ್ರಯಕೊಟ್ಟಂತಾಯಿತು.ಇಂಥಹ ಅವ್ಯಾಕೃತಾಕಾಶವು ಪ್ರಳಯಕಾಲದಲ್ಲಿ ಅಂಡಾದಿ ಜಡ ಜೀವರುಗಲಿಗೆ ಇರಲು ಅವಕಾಶ ಕೊಡಲು ಗತಿಯು ಕುಂಠಿತವಾಗುತ್ತದೆ. ಇದಕ್ಕೆ ಉದಾಹರಣ ಸಂಕುಚಿತ ವಿಸ್ತಾರಗರ್ಭಃ ಸಂಕುಚಿತ ಹೆಂಗಸರ ರುತುಕಾಲಗಳು. ಇನ್ನುಳಿದಕಾಲವು ನಿತ್ಯ ಕಾಲವು.

ಇಂಥಾವೇದಗಳು ದೇಶ ಪ್ರಕೃತಿಜೀವರ ಕರ್ಮಗಳಿಗೆ ಅನುಗುಣ್ಯವಾಗಿರುವ ಪರಮಾಣ್ವಾದಿ ಅಣುಕಾಲಗಳು ನಾಶವಾದಾಗ್ಯೂ ದೇಶಮತ್ತುಕಾಲ ವಾಚ್ಯನಾಗಿ, ಕಾಲ ನಿಯಾಮಕನಾಗಿ ಕಾಲದಲ್ಲಿ ಬಿಂಬರೂಪನಾಗಿದ್ದು ಅವಿನಾಶಿಯಾದಮಹಾ ಕಾಲಕ್ಕೆ ಸರ್ವದಾ. ನಿತ್ಯಸ್ಥಿತಿಯನ್ನು ತಂದುಕೊಡುವನು.ಜೀವರುಗಳು ನಿತ್ಯವಾದರೂ ಜಡ ಪ್ರಕೃತಿಯು ಫಲ ವಿಧಾತ್ಮಕವಾದ ಲಿಂಗಶರೀರಬದ್ಧರಾದವರನ್ನು ಸೃಷ್ಟಿಗೆತಂದುಅವರಿಗೆ ಈ ತರಹ ದೇಹಗಳನ್ನುಕೊಟ್ಟು ಸಾಧನಮಾಡಿಸುವನು. ಆಲಯಕಾಲದಲ್ಲಿ ಮಾತ್ರ ಸೃಷ್ಟಿಸ್ಥಿತ್ಯಾದಿ ಕಾರ್ಯಗಳು ತೋರುವುದಿಲ್ಲ. ನಾನಾ ಯೋನಿಗಳಲ್ಲಿ ಸೃಷ್ಟಿಯಾಗುವಂಥಾ ಜೀವರುಗಳಿಗೆ ಸುಖ ದುಃಖಪ್ರದಾತೃಶಕ್ತಿ ಸಮಸ್ತಜೀವರುಗಳು ಮಾಡಲ್ಪಟ್ಟ ಕರ್ಮಾನುಸಾರವಾಗಿ ಮಾಡಲ್ಪಡುವ ಕರ್ಮಶಬ್ದವಾಚ್ಯ, ಕರ್ಮನಿಯಾಮಕನ ಆಜ್ಞೆಯಿಂದ ಸಮಸ್ತಕರ್ಮಗಳು ವಿಷ್ಣುಆಜ್ಞಾದಿಂದ ಜೀವರಿಂದ ಕ್ರಿಯುಗಳುಮಾಡಿಸಲು ಶಕ್ತಿಯಿಲ್ಲದೆ ಕುಂಠಿತವಾಗುತ್ತದೆ. ಜಡಪ್ರಕೃತಿ ಜಡಪ್ರಕೃತ್ಯಾತ್ಮಕ ವಾದದ್ದು. ಮತ್ತು ಲಿಂಗಶರೀರ ಜಡಪ್ರಕೃತಿ ಇವುಗಳು ಸೂಕ್ಷ್ಮ ಸ್ಥೂಲ ಶರೀರಗಳನ್ನು ಮೊದಲುಮಾಡಿಕೊಂಡು ಸಮಸ್ತ ಜಡತತ್ವಗಳಿಗೆ ತ್ರಿಗುಣಾತ್ಮಕ ವಾಗಿ ಬೇರೆ ಬೇರೆ ಸೃಷ್ಟಿಮಾಡುವ ಶಕ್ತಿಪ್ರದಾತೃಳಾದ ಶ್ರೀರಮಾದೇವಿಯ ಬಿಂಬನಾದ ಶ್ರೀರೂಪಿಯಾದ ಪರಮಾತ್ಮನ ಆಜ್ಞಾಯಿಂದ ಸಮಸ್ತ ಜಡತತ್ವಗಳು ಸೂಕ್ಷ್ಮರೂಪದಿಂದ ಅನಂತವಾದ ನಿತ್ಯಭೂತವಾದ ಮೂಲಪ್ರಕೃತಿಯಲ್ಲಿ ಕೂಡುವುವು. ತತ್ವದೇಹಾದಿಗಳ ಉಪಚಯ ಸೃಷ್ಟಿಕಾರ್ಯವು ಲಯಕಾಲದಲ್ಲಿ ಶ್ರೀಹರಿ ಆಜ್ಞಾದಿಂದ ರಮಾದೇವಿಯರು 1.ವೇದ, 2.ದೇಶ, 3.ಕಾಲ, 4.ಜೀವ, 5.ಕರ್ಮ, 6.ಪ್ರಕೃತಿಯಲ್ಲಿಯು, ಅದರಲ್ಲಿರುವ ನೈಜಶಕ್ತಿಯನ್ನು ಕುಂಠಿಸಿರುತ್ತಾನೆ.

ದೇಶತಃ,ಕಾಲತಃ,ಸಮಳಾದ ಶ್ರೀಹರಿಗೆ (ಕಾಲದೇಶವ್ಯಪ್ತಳೆನಿಪಳಿಗಾದರ, ಶೀಲಾಮೂರುತಿ ಯಿಂದ ಸುಖವೆಂಬೋದು) ಚಿದ್ರೂಪವಾದ ರಮಾದೇವಿಯರು ಶ್ರೀಪರಮಾತ್ಮನ ಪೂರ್ಣ ಶಕ್ತಿ,ಯಿಚ್ಛಾ, ಕ್ರಿಯಕ್ಕೆ ಅಧೀನರಾಗಿ ಅನಂತಗುಣದಿಂದ ನ್ಯೂನರಾಗಿರುವರು. ಅಲ್ಲಿದಶಾಬ್ದಾತ್ಮಕ ವಾದಂತ, ಅಕ್ಷರಾತ್ಮಕವಾಧಂಥಾ, ರುಗಾತ್ಮಕವಾದಂಥಾ, ವೇದಗಳಿಗೆ ಬಿಂಬಭೂತವಾದಂಥಾ ಶ್ರೀಪರಮಾತ್ಮನಿಗೆ ಶಬ್ದರೂಪ ವೇದಗತವಾದಂಥಾ ದುರ್ಗಾದೇವಿಯರು ಸಹ ಅನಂತರೂಪ ರಾಗಿರುವರು. ಶೂನ್ಯನಾಮಕ ಪುರುಷನಿಂದ ಶೋಧಿತವಾದಂಥಾ ಜ್ಞಾನಯುಕ್ತಳಾಗಿ ಪರಮ ಪುರುಷನಾದಂಥಾ ಶ್ರೀಹರಿಯನ್ನು ಸ್ತೋತ್ರಮಾಡಿ ಸಂತೋಷಗೊಳಿಸಿದರು. ವೇದಸೃಷ್ಟಿ ಓಂಕಾರ ವ್ಯಂಜನ ಪ್ರತಿಪಾದ್ಯ,ಅನಂತಾತ್ಮ,ಅನಂತರೂಪಾತ್ಮಕ, ಅನಂತಶಕ್ತಿ ನಿತ್ಯವಾದಂಥಾ ಇವುಗಳನ್ನು ಮಾಡತಕ್ಕ ಶಕ್ತಿಯುನ್ನು

ದುರ್ಗಾದೇವಿಯರಿಗೆ ಪ್ರದಾತೃವಾದನು. ಆಗ್ಗೆ ದುರ್ಗಾ ದೇವಿಯರು ಸಕಲಗುಣಪೂರ್ಣನಾದಂಥಾ ಪರಮಾತ್ಮನನ್ನು ಓಂಕಾರದಿಂದ ಅತಿಸ್ತೋತ್ರ ಮಾಡಿದಳು. ಆ ಓಂಕಾರಸೃಷ್ಠಿಯು ತಂತ್ರಸಾರದಲ್ಲಿ ಹೇಳಿದ ಪ್ರಕಾರ ಓಂಕಾರದಿಂದ ಸಕಲ ಮಂತ್ರಗಳು, ಅಜಾದಿ 51 ವರ್ಣಗಳು, ಪುರುಷಸೂಕ್ತ,ಸಕಲವೇದಗಳು ಇವಕ್ಕೆ ಅಭಿವ್ಯಂಜಕ ಶಕ್ತಿ ಮತ್ತು ದುರ್ಗಾದೇವಿಯು ಅನಂತರೂಪಗಳಿಂದ ಅನಂತವೇದಗಳಿಂದ ನಿತ್ಯವಾದವು. ವ್ಯಾಪ್ತವಾದವು. ಇದರಿಂದ ಸ್ತೋತ್ರಮಾಡಿದಳು. ಇಂಥಹಸ್ತೋತ್ರಕ್ಕೆ ಮೆಚ್ಚಿ ಪರಮಾತ್ಮನು ಆತ್ಮಸೃಷ್ಠಿಯನ್ನು ಮಾಡಿದನೆಂದು ಮೇಲೆ ಹೇಳಿದೆ.

## ಆತ್ಮಸೃಷ್ಠಿ

ಆತ್ಮಸೃಷ್ಠಿಯು ಶೂನ್ಯಾಭಿದ ಪುರುಷನಾಮಕನು ಸರ್ವರೂಪಗಳ ಪ್ರಾದುರ್ಭಾವಮಾಡಿದನು. ಸರ್ವಜೀವರುಗಳನ್ನು ತನ್ನುದರದಲ್ಲಿರಿಸಿದ ಕಾರಣ ವಿಶ್ವಕುಕ್ಷಿಯಂತೆ ಅನಂತರೂಪಿ ಪರಮಾತ್ಮಕರಿಸಿಕೊಳ್ಳುತ್ತಾನೆ. ಶೂನ್ಯನಾಮಕ ಪುರುಷಾಭಿದನ ನಾರಾಯಣನಿಂದ ವಾಸುದೇವ, ಸಂಕರುಷಣ, ಪ್ರದ್ಯುಮ್ನ, ಅನಿರುದ್ಧ,ಶ್ವೇತ, ರಕ್ತ, ಪೀತ, ನೀಲ ವಾಸುದೇವಾದಿ ಕ್ರಮದಿಂದ, ವಾಸುದೇವನು ಮುಕ್ತಿ ಪ್ರದಾತ್ಮನಾಗಿಯು, ಸಂಕರುಷಣನು ಸಂಹಾರಕ್ಕಾಗಿಯು, ಪ್ರದ್ಯುಮ್ನನು ಸುಪಾಲನಮಾಡುವದಕ್ಕಾಗಿಯು, ಅನಿರುದ್ಧನು ಸೃಷ್ಠಿಮಾಡುವಗೋಸ್ಕರವಾಗಿಯು, ನಾಲ್ಕು ರೂಪಗಳನ್ನು ಪ್ರಾದುರ್ಭಾವಮಾಡಿದರು. ಶೂನ್ಯನಾಮಾಭಿದಳಾದಂತಹ ಪುರುಷಸ್ಥಿತ ರಮಾ ದೇವಿಯಯು ಸಹ ಮಾಯಾ, ಜಯಾ, ಕೃತಿ, ಶಾಂತಿ, ಈ ಪ್ರಕಾರ ವಾಸುದೇವಾದಿ ರೂಪಗಳಿಗೆ ನಿತ್ಯವಿಯೋಗಿ ಆದಂತ ವಾಸುದೇವಾದಿ ನಾಲ್ಕುರೂಪಗಳಿಗೆ ನಿತ್ಯವಿಯೋಗಿ ಆದಂತ ರಮಾರೂಪ ಪ್ರಾದುರ್ಭಾವವಾಯಿತು. "ವಾಸುದೇವನು ಬ್ರಹ್ಮದೇವರಬಿಂಬ; ಸಂಕರ್ಷಣನು ಸಹಸ್ರಫಣಿ ಶೇಷನಬಿಂಬ; ಪ್ರದ್ಯುಮ್ನ ಕಾಮನಬಿಂಬ–ಅತಿಸುಂದರವಾದಂಥ ವಿಗಹರೂಪ ಪ್ರದ್ಯುಮ್ನ–ಕಾಮಪುತ್ರ ಅನಿರುದ್ಧನಬಿಂಬ ಅನಿರುದ್ಧ; ಇವುಗಳಿಂವ ಮುಂದೆ ಕೃದ್ಧೋಲ್ಕಾದಿ ಪಂಚಾದಿ; ವಿಶ್ವಾದಿ ಅಷ್ಟ, ವಿಮಲಾದಿನವ, ಮತ್ಸ್ಯಾದಿ ದಶ; ಶಕ್ತ್ಯಾದಿ ದ್ವಾದಶ, ಭೂರಾದಿ ಷೋಡಶ, ಆನಂದಾದಿ 23, ಕೇಶವಾದಿ 24, ಅಜಾದಿ=51, ಕಾಲಾಖ್ಯವಾದಂಥ 60 ಸಂವತ್ಸರ ನಿಯಾಮಕರೂಪಗಳು, ನಾರಾಯಣಾದಿ ಶತ, ವಿಶ್ವಾದಿ ಸಹಸ್ರ, ಪರಾದಿ ಅನಂತ, ಅಜಿತಾದ್ಯನಂತ ಒಂದಕ್ಕೊಂದು ಬೇಧವರ್ಜಿತರೂಪಗಳು, ಪ್ರಾದುರ್ಭಾವವಾದುವು. ತದಾಜ್ಞಯಾ ರಮಾದೇವಿಯು ಸಹ ಅನಂತರೂಪಗಳಾದರು. ಶ್ರೀಪುರುಷನಾಮಕನ ರೂಪಗಳು ವಿಜ್ಞಾನಮಯ,

ಆನಂದಮಯವೆಂಬ ಎರಡು ರೂಪಗಳು. ಆನಂದಮಯರೂಪ-ಪುರುಷರೂಪ, ವಿಜ್ಞಾನಮಯರೂಪ-ಸ್ತ್ರೀರೂಪ. ಸ್ವಾಮಿ ತನ್ನಲ್ಲೇತಾನು ಸ್ವಂತನಾದಾಗ್ಯೂ ದಯಾನಿಧಿಯಂತ, ಸ್ವತಂತ್ರನಾದಂಥಾ ಶ್ರೀಹರಿಯು, ಶ್ರೀರಮಾದೇವಿಯರಿಗೆ ಪ್ರೀತ್ಯರ್ಥವಾಗಿ ಸುಖಕೊಡೋನಿಮಿತ್ತವಾಗಿ, ವಿಜ್ಞಾನಮಯ ರೂಪನಾದಂಥ, ರಮಾಬಿಂಬನಾದಂಥಾ ಶ್ರೀಶಬ್ದವಾಚ್ಯನಾದ ಶ್ರೀಹರಿಯು ರಮಾರೂಪದಲ್ಲಿ ಬಿಂಬನಾದ ನಾನಾವಿಧರೂಪಗಳನ್ನು ಧರಿಸಿ, ಲಯಕಾಲ "ಅಷ್ಟಮಂ ಶಂತುನೀತ್ಯ ಪುರುಷಂ ಗವಾ। ಪ್ರಾರಂಭೇ ಸೃಷ್ಟಿಕಾಲಸ್ಯೇ ಅಜಾದೀನ್‌ಸೃಷ್ಟಿ ಮಾರಂಭತ್. ಎಂಬಪ್ರಕಾಶ ಸಂಹಿತ ಪ್ರಥಮ ಪರಿಚ್ಛೇದ ದ್ವಿತೀಯ ಅಧ್ಯಾಯ ವಾಕ್ಯಾನುಸಾರವಾಗಿ 'ಲಯಕಾಲ ಅಷ್ಟಮಂ ಶಂತುನೀಕ್ಷು' ಎಂದರೆ 87½, ವರುಷದ ಕೊನಿಯರಾತ್ರಿ ಕಡೆಭಾಗದಲ್ಲಿ ಶ್ರೀಹರಿಯು ಅಂಭ್ರಣಿಯಿಂದ ಸ್ತುತ್ಯನಾಗಿ ಆತ್ಮಸೃಷ್ಟಿ ಮಡಿದನೆಂದು ಭಾವ. ಇದು ಅಲ್ಲದೆ ಮುಂದೆ ಪ್ರಕಾಶ ಸಂಹಿತ 3ನೇ ಅಧ್ಯಾಯದಲ್ಲಿ 'ರಾತ್ರಿತ್ವೇನ ಚರಿತ್ರವರ ಬ್ರಹ್ಮಾದೀನ್ ಪ್ರಾಪಯತ್ಯಚ। ನಿಶಾಯಶ್ಚ ರಮೋ ಭಾಗೇ ಆತ್ಮಸೃಷ್ಠಾದಿ ಈಶ್ವರಃ । ಕರೋತಿ ಪುರುಷಸ್ತೆಶ್ಯೇ ಆಯುರ್ಮಾನಂ ವಿಧೀಯತೆ' ಎಂಬ ಪ್ರಮಾಣ ಸಿದ್ಧಯಾಗಿರುವುದು. 1. ಆತ್ಮಸೃಷ್ಟಿ; 2. ಪರಾಧೀನವ್ಯಾಪ್ತಿ ಸೃಷ್ಟಿ; 3. ಮಿಶ್ರಸೃಷ್ಟಿ; 4. ಕೇವಲಸೃಷ್ಟಿ; 4 ವಿಧ ಸೃಷ್ಟಿ. ಮುಂದೆ,ಮಿಶ್ರ,ಕೇವಲ ಸೃಷ್ಟಿಯಲ್ಲಿ ಪ್ರಕೃತಿ, ವೈಕೃತಿ, ವಿಕೃತಿಬೇಧದಿಂದ ದಶವಿಧಸೃಷ್ಟಿಯನ್ನು ಮಡಿದ್ದಾನೆ. ಶೂನ್ಯನಾಮಕ ಪರಮಾತ್ಮನು ಯೋಗನಿದ್ರೆಯಿಂದ ಯೆಚ್ಚೆತ್ತು ಆಂಭ್ರಣಿಸ್ತೋತ್ರಕ್ಕೆ ಮೆಚ್ಚಿ ತನ್ನ ಆತ್ಮಸೃಷ್ಟಿಯನ್ನು ಮಾಡಲಿಚ್ಛಿಸಿದನು. ಸ್ವಾಮಿಯು ಮಾಯಾದೇವಿಸಹಿತವಾಗಿ ವಾಸುದೇವ ಜಯಾ ಸಹಿತನಾಗಿ, ಸಂಕರ್ಷಣ ಕೃತಿಸಹಿತ ಪ್ರದ್ಯುಮ್ನ, ಶಾಂತಿಸಹಿತ ಅನಿರುದ್ಧ ಇತ್ಯಾದಿ ಅನಂತ ಅವತಾರ ರೂಪಗಳನ್ನು ಪ್ರಾದುರ್ಭಾವಮಾಡಿದನು. ಇದೇಪರಮಾತ್ಮನ ಆತ್ಮಸೃಷ್ಟಿ ಪರಮಾತ್ಮನ ಆಜ್ಞಾದಂತೆ ಪರಮಾತ್ಮನ ಇಚ್ಛಾನುಸಾರವಾಗಿ ಲಕ್ಷ್ಮೀದೇವೇರ ದಶಿಯಿಂದ ಮಾಯು,ಜಯಾ,ಕೃತಿ,ಶಾಂತ್ಯಾದಿ ಅನೇಕ ಲಕ್ಷ್ಮೀದೇವೇರ ಅನಂತರೂಪಗಳನ್ನು ಪ್ರಾದುರ್ಭಾವ ಮಾಡಿಸಿದನು. ಇದೇಪರಾಧೀನ ವ್ಯಾಪ್ತಿಸೃಷ್ಟಿ. ಈ ಪರಮಾತ್ಮನ ವ್ಯಾಪ್ತಸೃಷ್ಟಿಯು ಪ್ರಥಮ ವ್ಯೂಹದಲ್ಲಿಯು, ವಾಸುದೇವಾದಿರೂಪಗಳ ಪ್ರಾದುರ್ಭಾವಕಾಲವಾದರು ವ್ಯತ್ಯಾಸವಿರುವುದು. ಇರುವುದು. ಅಂದರೆ ಮೊದಲು ವಾಸುದೇವನು ಕೆಲವುಕಾಲಾಂತರ ದಲ್ಲಿ ಸಂಕರ್ಷಣ ತದನಂತರ ಅವಧಿಮೇಲೆ ಪ್ರದ್ಯುಮ್ನ ಅನಿರುದ್ಧ ಹೀಗೆ ರೂಪಗಳು ಪ್ರಾದುರ್ಭಾವ ವಾದ ಮೇಲೆ, ಶ್ರೀವಾಸುದೇವನು ಮಾಯಾಸಹಿತವಾಗಿ ಅನೇಕ ಪ್ರಕಾರಕ್ರೀಡಾ ಮಾಡಿದನು. ಆ ವಾಸುದೇವನದೇಹದ ಸ್ವೇದದಿಂದ ಲಕ್ಷ್ಮ್ಯಾತ್ಮಕವಾದ

ಪ್ರಧಾನ ವಿರಜಾ ಪ್ರಾದುರ್ಭವ, ತದನಂತರ ಪೂರ್ವಕಲ್ಪದಲ್ಲಿ ಮುಕ್ತರಾದ ಬ್ರಹ್ಮಾದಿದೇವತೆಗಳನ್ನು, ನಾರದಾದಿ ಋಷಿಗಳನ್ನು, ಗಂಧರ್ವ,ಯಕ್ಷರಾಕ್ಷಸ, ಗುಹ್ಯಕ, ಅಪ್ಸರ, ಸಿದ್ಧಾದಿಗಳನ್ನು ಶ್ರೀಸಹಿತವಾಗಿ ತನ್ನುದರದಲ್ಲಿ ನಾಭೀಪೂರ್ವಕ ದೇಶದಲ್ಲಿದ್ದವರನ್ನು, ತನ್ನ ಉದರದಿಂದ ತೆಗೆದು ಮುಕ್ತರು ಆನಂದ ಉನ್ನಾಹಮಡುವಗೋಸುಗ ಸಮಸ್ತಮುಕ್ತರನ್ನು ಹೊರಗೆ ತೆಗೆದನು. ಇದಾದರು ಈಮುಕ್ತರುಗಳ ಸೃಷ್ಟಿಯಾದರು ಪರಾಧೀನವಿಶೇಷವ್ಯಾಪ್ತಿಸೃಷ್ಟಿ. ಎನಿಸುವುದು. ಶ್ರೀವಾಸುದೇವನು ಮುಕ್ತರುಗಳ ಕ್ರೀಡೆಗೋಸ್ಕರವಾಗಿ ನಾನಾಪ್ರಕಾರ ವಾದ ವಸ್ತ್ರಾಭರಣಗಳನ್ನು ನಿರ್ವಾಹ ಮಾಡಿ ಅನೇಕ ನಗರಗಳನ್ನು ನಿರ್ಮಾಣಮಾಡಿ, ಮಹಾಸಂಭ್ರಮಯುಕ್ತವಾದ ಅನೇಕ ಸ್ವರ್ಣಾಲಂಕಾರ ಗೋಪುರಗಳ ಸಹಿತ ಮಂದಿರಗಳನ್ನು ಸೃಜಿಸಿದನು. ಮುಂದೆಮುಕ್ತರುಗಳ ಆನಂದಾಭಿವೃದ್ಧಿ ಗೋಸುಗ ವಾಸುದೇವನು ಹಯಗ್ರೀವರೂಪವನ್ನು ತಾಳಿದನು. ಶ್ರೀ ಮಾಯಾದಾಯಾಕಾರಳಾದಳು. ಆಗ್ಗೆ ಶ್ರೀಹಯಗ್ರೀವದೇವರು ಮುಕ್ತರುಗಳಿಗೆ ಅನೇಕವೇದ ವೇದಾಂಗ ಪಂಚರಾತ್ರಾದಿಗಳನ್ನು ಉಪದೇಶಮಾಡಿ ಅವರುಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟನು. ಪುನಹ ವಾಸುದೇವನು ಗೋರೂಪನಾದನು, ವೃಷಭ ಶ್ರೀ ಮಯಾ ಗೋರೂಪಳಾದಳು. ಆ ಜ್ಞಾನಾನಂದಸ್ವರೂಪನಾದ ವೃಷಭನಾಮಕ ಪರಮಾತ್ಮನನ್ನು ಗೋರೂಪಳಾದ ಲಕ್ಷ್ಮೀ ಸಹಿತನಾದ ವೃಕ್ಷಭಾಗನು ಅನಂತಾನಂತಬಗೆಯಿಂದ, ಆನಂದಕ್ಕೆ ಪುನ್ನಾಮ ರೂಪವಾದ ಜ್ಞಾನವನ್ನು ಐದಿದರು. ಮುಂದೆ ವಾಸುದೇವನು ಅನೇಕ ಪುರಪಟ್ಟಣಗಳಲ್ಲಿ ರಾಜ್ಯಕಾರ್ಯಭಾರವನ್ನು ಮಾಡುವಂತೆ ಏರ್ಪಡಿಸಿ, ಅನೇಕ ರಾಜ್ಯಾದಿಗಳನ್ನು, ಬ್ರಹ್ಮಾದಿ ದೇವತೆಗಳನ್ನು ಮಾಡಿ ಅನೇಕ ಕಲ್ಪಗಳಲ್ಲಿ ಮುಕ್ತರಾದ ದೈತ್ಯರನ್ನು ಕಳ್ಳರನ್ನಾಗಿ ಮಾಡಿ ಅವರಕಡಿಂದ ಅನೇಕ ಚೌರ್ಯಾದಿ ಪಾಪಕರ್ಮಗಳನ್ನು ಮಾಡಿಸಿ ದೇವತೆಗಳಿಂದ ದೈತ್ಯರನ್ನು ಅನೇಕ ವಿಧವಾಗಿ ಸಾಧನಮಾಡಿಸಿ ಅವರಿಗೆ ದುಃಖವನ್ನು ಹೆಚ್ಚಿಸಿದನು. ಹೀಗೆ ಸ್ವಾಮಿಯು $12^{1/2}$ ವರುಷ ಮುಗಿಯೋ ಪರಿಯಂತರವಾಗಿ ಕ್ರೀಡೆಮಾಡಿದನು. ಇಲ್ಲಿಗೆ ಮೊದಲನೇ $87^{1/2}$ ವರುಷದಿಂದ ವಾಸುದೇವನ ಪ್ರಾದುರ್ಭಾವ, $87^{1/2}$ ವರುಷ ಆದಮೇಲೆ 9 ತಿಂಗಳಿಗೆ ಆಮೇಲೆ 3 ವರುಷ 7ಮಾಸಕ್ಕೆ ಸಂಕರ್ಷಣನ ಪ್ರಾದುರ್ಭಾವ. ಆಮೇಲೆ 7ವರುಷ 3ದಿವಸದ ಮೇಲೆ ಪ್ರದ್ಯುಮ್ನನಪ್ರಾದುರ್ಭಾವ. ಆಮೇಲೆ 100 ವರುಷ ಮುಗಿಯುವಾಗ ಅನಿರುದ್ಧ-ಶಾಂತಿ ಪ್ರದುರ್ಭಾವ, ಹೀಗೆ ರಾತ್ರಿ ಅಷ್ಟಮಭಾಗ ಎಂದರೆ 100 ವರುಷ ಸರಿ ಆಯಿತು. ಪುನಹ ವಾಸುದೇವನು ಅನಿರುದ್ಧಾದಿ ಉತ್ಕ್ರಮದಿಂದ ಮುಕ್ತರ ಅವತಾರ ರೂಪಗಳನ್ನು ವರಮಾಡಿ ತನ್ನ ಉದರದಲ್ಲಿ ಇಟ್ಟುಕೊಂಡು

ಲಕ್ಷ್ಮೀರೂಪಗಳನ್ನು ತನ್ನರೂಪಗಳನ್ನು ಏಕೀಭೂತಮಾಡಿದನು. ಇಲ್ಲಿಗೆ ಮುಕ್ತರ ಕ್ರೀಡಾ ಮುಗಿಸಿದನು. ಇದೇ ವಾಸುದೇವಾದಿ ಪಂಚರೂಪಗಳ ಮೊದಲನೇವ್ಯೂಹ." ಮತ್ತು "ಯಾತಾವತ್ಕಾಲೇನ ಆತ್ಮಸೃಷ್ಠಿ ಕೆರಭವಿಸ್ತು ತಾವತಾಂವರ ಭೂತೋಪಿ ರಮತಿ ತದೇಕಾ ಭೂತಮಯ ಯಾವತ್ಕಾಲಂ ತತು ವಿಶ್ವಾ ಸುಪ್ತ ವಾಸ್ವಾಪಯುಕ್ತ ಸಾರ್ಥದ್ವಿಷದಂಬ್ರಹ್ಮ ವರ್ಷಮಿತೆ ಸೃಷ್ಟಿಃ ನಿಶಾಯಾತ್ರ ಅಂತಿಮಭಾಗೆ ಪುನಃ ಪೂರ್ವವಕ್ಸು ಆತ್ಮಸೃಷ್ಠ್ಯಾದಿ ಮೀಶ್ವರ। ಕರೋತಿ ಪುರುಷಸ್ತಶ್ಯನಾಂಯುವರ್ಾನಂ ವಿಧೀಂಯುತೆ," ಈಪ್ರಕಾರವಾಗಿ ಮಹಾಕಾಲರೂಪಿಯಾದ ಪರಮಾತ್ಮನು ಅನಂತಾನಂತ ರೂಪಗಳಿಂದ ಆತ್ಮಸೃಷ್ಠ್ಯಾದಿ ಕಾರ್ಯವನ್ನು ಪ್ರಾರಂಭಿಸಿದನು. ಯಾವ ಅನಿತ್ಯವಾದ ಪರಮಾಣುವಾದಿಕಾಲದಿಂದ ದ್ವಿಪರಾರ್ಧವು ಅವಸಾನಕಾಲಗಳಲ್ಲಿಯು ಪರಮಾತ್ಮನು, ಆಯಾಕಾಲಶಬ್ದವಾಚ್ಯನಾಗಿ ತತ್ಸಾಮರ್ಥ್ಯವನ್ನು ಪ್ರಚುರ ಮಾಡೋಕೋಸ್ಕರವಾಗಿ ಆಯಾಕಾಲಗಳಲ್ಲಿದ್ದು ಅಜ ಶಬ್ದವಾಚ್ಯನಾಗಿಯು ಅಣ್ವಾದಿ ಮಹಾಕಾಲಗಳಿಗೆ ರಕ್ಷಕತ್ವನಾಗಿರುವನು. ಮಹಾಕಾಲ ಪ್ರವಹರೂಪದಿಂದ ನಿತ್ಯವಾಗಿಯು ಪರಮಾಣ್ವಾದಿ ಕಾಲಗಳು ಅನಿತ್ಯವಾಗಿಯು ಇರುವುದು. ಈಎರಡರಲ್ಲಿಯು ಶ್ರೀಹರಿಯು ಕಾಲರೂಪಿಯಾಗಿಯು ಅವಿನಾಶ ಸ್ವರೂಪನಾಗಿಯು ಅಕಾಲ ಪ್ರವಾಹ ರಕ್ಷಕರೂಪವಾದ ಪರಮಾಣ್ವಾದಿ ಕಾಲಗಳನ್ನು ವ್ಯಂಜಕ ಮಾಡಿದರು. ಇದೇಕಾಲಸೃಷ್ಠಿ. ಇದರವಿಶೇಷ ಪ್ರಮೇಯವನ್ನು ಪ್ರಕಾಶಸಂಹಿತ ಅಧ್ಯಾಯ-3 ಶ್ರೀವಿಜಯರಾಯರ ಕಾಲಾಖ್ಯ ಎರಡು ಸುಳಾದಿಗಳನ್ನು ನೋಡಿ ಸಂಪ್ರದಾಯಜ್ಞರಿಂದ ತಿಳಿಯಬೇಕು. ಹೀಗೆ ಆ ಶೂನ್ಯನಾಮಕ ಪರಮಾತ್ಮನು "ಸದಾ (ನಾಮ) ಅಕ್ಷರ ದೇಶ ಅವ್ಯಕೃತಾಕಾಶ ಮಹಾಕಾಲಾದಿ ಗಳಿಂದೂ ನಿಂತು ವ್ಯಂಜಕನಾಗುವನು. ನಿತ್ಯಭೂತವಾದಂಥಾ ಮೂರುಜಡಗಳಿಗೆ" ವೇದ,ಕಾಲ,ದೇಶ, ಈಪ್ರಕಾರ ಸೃಷ್ಠಿಹೇಳಿದೆ. ದೇಶದಲ್ಲಿ ಕಾಲವು, ಕಾಲದಲ್ಲಿ ದೇಶವು, ಹೂವಿನಲ್ಲಿ ಪರಿಮಳ ಯಾವರೀತಿಲಿ ಇರುವುದೋ, ಅದರಂತೆ ಇರುವುದು. ವೇದ,ವೇದವರ್ಣಗಳು ಸಮಸ್ತ ದೇಶ ಕಾಲದಲ್ಲಿ ನಿತ್ಯವ್ಯಾಪ್ತವಾದಂತಾದ್ದು. ಸೃಷ್ಠಿಕಾಲದಲ್ಲಿ ಈವೇದಕ್ಕೆ ವರ್ಣಗಳಿಗೆ ಹಿಂದೆ ಹೇಳಿದಪ್ರಕಾರ ಸೃಷ್ಠಿ ಯಿಲ್ಲಿದೆ. ಸರ್ವದೇಶ, ಸರ್ವಕಾಲಗಳಲ್ಲಿ ಕುಂಠಿತವಾದ ಭಾಷಾ ಅಭಿವ್ಯಂಜಕಶಕ್ತಿಯು ವೇದಬಿಂಬನಾದ ಶ್ರೀಹರಿಯಿಂದ ಅಭಿವ್ಯಂಜಿಸುವನು. ಮುಕ್ತರಸಂಗಡ ಅತ್ಯಂತ ಕ್ರೀಡೆ ರೂಪಗಳಿಂದ ಆಡಿಕಿಂಚಿತ್‌ಹೊತ್ತು ಉಳಿದಿರಲಾಗಿ ಏಕಭೂತನಾದವು. ಉತ್ತಮಶ್ಲೋಕನು ನಗುತ ವೇಗದಿಂದ ಪುನಃ ಶೂನ್ಯನಿಂದ ಪ್ರಥಮ ವಾಸುದೇವಾದಿ ಪಂಚರೂಪವನ್ನು

ತಾಳಿದನು. ಮತ್ತು ಯಾವ ವಾಸುದೇವನು ಸರ್ವದೇಹಧಾರಿಗಳಿಗೆ ಆಶ್ರಯನಾದ ಅನಿರುದ್ಧಮೂರ್ತಿಯಿಂದಲಿ ಮುಂದೆ ಲಿಂಗೋಪಾದನ ಕಾರಣನಾಗುವನು, ವಾಸುದೇವನು ಶ್ರೀಮಾರುತನಿಂದ ಕೇಳಿ ಸರ್ವಜೀವರುಗಳಿಗೆ ಪದವಿಯನ್ನು ಕೊಡುವುದಕೋಸ್ಕರ ಹಯಗ್ರೀವರೂಪಿ ಯಾದನು. ಪರಮಾತ್ಮನು ಮತ್ತು ನಿತ್ಯಚತುರಮೂರ್ತಿಗಳಾದ ವಾಸುದೇವಾದಿರೂಪಗಳು ಏಕಭೂತವಾಗಿ ಸರ್ವರನ್ನು ತುತ್ತುವಾಡಿ ಪುನಃ ತನ್ನಉದರದಲ್ಲಿಟ್ಟುಕೊಂಡು, ಚಿತ್‌ಪ್ರಕೃತಿಯಾದ ರಮಾರೂಪಳಾದ ವಿರಜಾವಾರಿಯನ್ನು ತನ್ನದೇಹದಿಂದ ಹುಟ್ಟಿಸಿದನು. ವಿರಜಾನದಿಯಲ್ಲಿ ತನ್ನುದರದಿಂದ ಮುಕ್ತರಾಗಿರುವ ಸಮಸ್ತ ಜೀವರನ್ನು ತೆಗೆದು ಸತ್ವಜೀವರುಗಳಿಗೆ ವಿರಜಾಸ್ನಾನಮಾಡಿಸಿ ಲಿಂಗಭಂಗಗಳಾಗಿಮಾಡಿ (ತತ್ವಾಶರಿಗೆ) ಸೂತ್ರನಾಮಕ ಪ್ರಾಣನು ನಿಶ್ಚಯಿಸಿದಂತೆ ಶ್ವೇತದ್ವೀಪದಲ್ಲಿದ್ದು ವಾಸುದೇವ, ಶಿಂಶುಮಾರಾದಿ ರೂಪಗಳನ್ನು ದರ್ಶನಮಾಡಿಸಿ. ನಿಜಾನಂದರೂಪವಾದಂಥಾ ಸ್ವ ಸ್ವಯೋಗ್ಯತಾ ಮುಕ್ತಿಯನ್ನು ಐದಿಸುವನು. ಇದೇ ವಾಸುದೇವಾದಿ ದ್ವಿತೀಯವ್ಯೂಹದಿ ಕಾರ್ಯವು. ಅಲ್ಲಿಂದ ಪುನಹ ತನ್ನರೂಪಗಳನ್ನೆಲ್ಲ ಏಕೀಭೂತಮಾಡಿ ವಟಪತ್ರನಾದ ಶೂನ್ಯಾಭಿನಾದ ವಾಸುದೇವನು ಸತ್ಯಸಂಕಲ್ಪನು. ತನ್ನ ಸತ್ಯಸಂಕಲ್ಪಾನು ಸಾರವಾಗಿ ನಿಶ್ಚೇಷ್ಟವಾಗಿದ್ದು ಜೀವರುಗಳಿಗೆ ಜ್ಞಾನ, ಇಚ್ಛಾ, ಪ್ರಯತ್ನ, (ಈಕಲ್ಪದಲ್ಲಿ ಸೃಷ್ಠರಾಗುವ ಅಸೃಜ್ಯ ಜೀವರುಗಳಿಗೆ ಸ್ವ ಸ್ವಯೋಗ್ಯತಾದಂತೆ ಅಂತರಾತ್ಮನಾದ ವಾಸುದೇವನು, ಆವಾಸುದೇವನಿಂದಲೇ ನಾರಾಯಣಾಭಿದನಾಗಿ ಪ್ರಾದುರ್ಭಾವನಾದನು. ಇದೇರೂಪವು ಮುಂದೆ ಸೃಷ್ಠಿಗೆ ಬರತಕ್ಕ ಜೀವರಲ್ಲಿ ಕ್ಷೋಭಕ ಲಿಂಗ ಜೀವರು ರೂಪದಿಂದ ಅಂದರೆ ಈಕಲ್ಪದಲ್ಲಿಯು ಇಷ್ಟುಮಂದಿ ಜೀವರನ ಸೃಷ್ಠಿಸಬೇಕಂತ ಪರಮಾತ್ಮನ ಇಚ್ಛೆಇದೆಯೋ ಆಜೀವರುಗಳಿಗೆ ಜ್ಞಾನ, ಇಚ್ಛಾ, ಪ್ರಯತ್ನದಲ್ಲಿ ತನ್ನ ನಿಜಸ್ವರೂಪವಾದ ಜ್ಞಾನ, ಇಚ್ಛಾ,ಪ್ರಯತ್ನರೂಪವನ್ನು ವ್ಯಕ್ತಮಾಡಿ ಆಜೀವರುಗಳಿಗೆ ಕ್ಷುತ್ಪಿಪಾಸ ಹುಟ್ಟಿಸಿ, ಜೀವ ಮತ್ತು ಜಡಗಳಿಗೆ ಅಂದರೆ ಅನಾದಿ ಗಜಿಗಿನಲ್ಲಿರತಕ್ಕ) ಬಿಂಬಕ್ಕೂ ಗುಂಡಿಗೂ ಹ್ಯಾಂಗೆ ಸಂಯೋಗ ಆಗಬೇಕೋ ಹಾಗೆ ಅನಾದಿಲಿಂಗರೂಪವಾದ ಜಡಶರೀರಕ್ಕೂ ಚಿತ್‌ಸ್ವರೂಪನಾದ ಜೀವನಿಗೂ ಅಕ್ಷೋಭ ರೂಪಕ ನಾದ ನಾರಾಯಣನು ತನ್ನ ಸ್ವೇಧ, ಬೆವರಿನಿಂದ ಜಡಕ್ಕೂ ಚೇತನಕ್ಕೂ ಸಂಯೋಗ ಮಾಡಿದ್ದು ಮಹಾ ಅಘಟಿತಾಘಟಿತ ಶಕ್ತಿಯೋ ಹಾಂಗೆ ಆ ಜೀವರುಗಳಿಗಾತುರದೊಳು ಪ್ರವಿಷ್ಠನಾಗಿ ಪುನಃ ತನ್ನಉದರದಲ್ಲಿ ಇಟ್ಟುಕೊಂಡನು. ಪುನಃ ಈಜೀವರನ್ನು ಸೃಷ್ಠಿಗೆ ತರಬೇಕಾಗಲು ಪುನಃ ಚತುರಮೂರ್ತಿಯಾದನು. ಇದೇ ವಾಸುದೇವನ ಮೂರನೇ ವ್ಯೂಹವು. ಬ್ರಹ್ಮಾಂಡ ಸೃಷ್ಠಿಸಿ ಲಯಕ್ಕೆ ಕಾರಣವಾದರೂಪವು. ಈರೂಪಗಳಲ್ಲಿ ಕಿಂಚಿತಾದರು ಬೇಧವಿಲ್ಲ.

**ಒಂದನೇಸೃಷ್ಟಿ:–** ಇನ್ನು ಪ್ರಾತಃಕಾಲದಲ್ಲಿಯು ದ್ವಿತೀಯವಾಸುದೇವನು ಮಾಯಾದೇವಿ ದ್ವಾರಾ ಪುರುಷನಾಮಕ ಬ್ರಹ್ಮನನ್ನು ಉತ್ಪನ್ನಮಡಿದನು. ಇದರಕಿಂತ ಪೂರ್ವದಲ್ಲೇ ನಾರಾಯಣನಿಂದ ಕಾಲನಾಮಕ ಬ್ರಹ್ಮ ಹುಟ್ಟಿದ್ದಾನೆ. ಪ್ರಳಯಕಾಲದಲ್ಲಿ ಈಪುರುಷನಾಮಕ ಬ್ರಹ್ಮನು ಕಾಲನಾಮಕ ಬ್ರಹ್ಮನಲ್ಲಿ ಲಯ ಹೊಂದುತ್ತಾನೆ.

1. ಪುನಹ ಈಪುರುಷನಾಮಕ ಬ್ರಹ್ಮ ಹುಟ್ಟಿದ ಎರಡು ವರ್ಷದಮ್ಯಾಲೆ ಸಂಕರ್ಷಣನನು ಜಯಾದೇವಿದ್ವಾರಾ ವಾಯುದೇವರನ್ನು ಉತ್ಪನ್ನ ಮಾಡಿದನು.
2. ಈಸೂತ್ರನಾಮಕ ವಾಯುದೇವರು ಉತ್ಪನ್ನವಾದ ಮೂರುವರ್ಷದಮ್ಯಾಲೆ ಪ್ರದ್ಯುಮ್ನ ಕೃತಿದ್ವಾರಾ ಪ್ರಕೃತಿ –ಶ್ರದ್ಧಾ ಎಂಬ ಇಬ್ಬರು ಅವಳಿಜವಳಿ ಹೆಣ್ಣುಮಕ್ಕಳನ್ನು ಹುಟ್ಟಿಸಿದನು. ಇವರೇ ಸರಸ್ವತೀ–ಭಾರತಿ. ಇಲ್ಲಿಗೆ ಬ್ರಹ್ಮದೇವರಿಗೆ 5 ವರುಷವಾಯಿತು.
3. ಮುಂದೆ ಪ್ರದ್ಯುಮ್ನನು ಪ್ರಕೃತಿಯನ್ನು ಪುರುಷನಾಮಕ ಬ್ರಹ್ಮನಿಗೆ, ಶ್ರದ್ಧಾದೇವಿಯನ್ನು ಸೂತ್ರನಾಮಕ ವಾಯುದೇವರಿಗೆ ಕೊಟ್ಟು ಲಗ್ನವಮಾಡಿದನು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನರು ಬೀಗಬಿಜ್ಜಡಿಗರಾಗಿ ಶೋಭಿಸಿದರು.

**ಶ್ರೀಮಧ್ವೇಶಾರ್ಪಣಮಸ್ತು.**

## ಸೃಷ್ಟಿವಿಚಾರ

1. ವಾಸುಸದೇವ+ಮಾಯಾದೇವಿಯಲ್ಲಿ=ಪುರುಷನಾಮಕ ಬ್ರಹ್ಮ ಹುಟ್ಟಿದ. ಸಂಕರ್ಷಣ+ಜಯಾದೇವಿಯಲ್ಲಿ =ಸೂತ್ರನಾಮಕವಾಯು ಎರಡು ವರ್ಷದ ನಂತರ ಪ್ರಕೃತಿ ಶ್ರದ್ಧಾ ಹುಟ್ಟಿದರು.
2. ಪ್ರಕೃತಿಯಲ್ಲಿ ಜೀವನಾಮಕ ಶೇಷ. ಶ್ರದ್ಧಾಯಲ್ಲಿ ಎರಡುವರ್ಷದನಂತರ ಕಾಲನಾಮಕಗರುಡ.
3. ಸೂತ್ರನಾಮಕ ವಾಯುದೇವರು ಪುರುಷನಾಮಕ ಬ್ರಹ್ಮನಲ್ಲಿ ಬಲನೆಂಬೋ ನಾಮದಿಂದ ಭಾರತಿಸಹಿತ ರಾಗಿ ಜನಿಸಿದರು.
4. ಆ ಬಲನಾಮಕವಾಯುವಿನಲ್ಲಿ ಭಾರತೀದ್ವಾರಾ ಪುನಹ ಜೀವನಾಮಕ ಶೇಷನನ್ನು, ಕಾಲನಾಮಕ ಗರುಡನನ್ನು ಉತ್ಪತ್ತಿಮಾಡಿದರು. ವಂದುವರುಷದಮೇಲೆ 7+1=8 ವರುಷವಾಯಿತು.

5. ಪುನಹ ಪ್ರದ್ಯುಮ್ನದೇವರು ಕೃತಿಯಲ್ಲಿ ವಿರಿಂಚೀನಾಮಕ ಬ್ರಹ್ಮನನ್ನು ಹುಟ್ಟಿಸಿದನು. ತನ್ನಪತ್ನೀಸರಸ್ವತೀ ಸಹಿತ ಹುಟ್ಟಿಸಿದ.

6. ಈವಿರಿಂಚಿನಾಮಕ ಬ್ರಹ್ಮದೇವರು ತನ್ನ ಪತ್ನಿಯಾದ ಸರಸ್ವತಿಯಲ್ಲಿ ಅಮೋಘವಾದ ವೀರ್ಯವನ್ನಿಟ್ಟು ಗಾಯಿತ್ರಿ,ಸಾವಿತ್ರಿ, ಸರಸ್ವತಿ ಈ ಮೂರು ರೂಪಗಳನ್ನು ಪ್ರತ್ಯೇಕಮಾಡಿ ಮೊದಲನೇ ಗಾಯಿತ್ರಿಯಲ್ಲಿ ವಿರಿಂಚಿನಾಮಕ ಬ್ರಹ್ಮ ವಾಣಿಸಹಿತ ತಾನೇ ಹುಟ್ಟಿದ. ಇದು ಪರಮಗೋಪ್ಯ.

7. ಪುನಹ ವಿರಿಂಚಿ ಬ್ರಹ್ಮನು ಸತ್ವದಗಾಯತ್ರಿಯಲ್ಲಿ ತನ್ನವೀರ್ಯವನ್ನು ಇಟ್ಟು ಬಲನೆಂಬ ಪ್ರಾಣನಿಂದ ಜನಿಸಿದ. ಜೀವನಾಮಕಶೇಷ, ವಾರುಣಿ, ವೈಕಾರಿಕರುದ್ರನನ್ನು ಪಾರ್ವತೀಸಹಿತವಾಗಿ ಹುಟ್ಟಿಸಿದನು.

8. ಪುನಹ ಎರಡನೇರೂಪವಾದ ಸಾವಿತ್ರಿಯಲ್ಲಿ ವಿರಿಂಚಿಬ್ರಹ್ಮನು ಬಲಾಖ್ಯವಾಯು, ಭಾರತಿ ಸಹಿತರಾಗಿ ಹುಟ್ಟಿಸಿದನು.

9. ಈ ಬಲನಾಮಕವಾಯುವಿನಿಂದ ಕಾಲನಾಮಕಗರುಡ ಸೌಪರ್ಣಿಸಹಿತ ಪುನಹ ಹುಟ್ಟಿದ. ಇಲ್ಲಿ ತೈಜಸ ರುದ್ರ ಮತ್ತು ಪಾರ್ವತೀದೇವಿಯರ ಜನನ.

10. ಈ ವಿರಿಂಚಿನಾಮಕ ಬ್ರಹ್ಮನು ಮೂರನೇರೂಪಳಾದ ಸರಸ್ವತೀದೇವಿಯನ್ನು ಮೊದಲು ಮೊದಲು ದಕ್ಷಬ್ರಹ್ಮನಿಂದ ಜನಿಸಿದ ಜೀವನಾಮಕ ಶೇಷನನ್ನು ಪುನಹ ಉತ್ಪನ್ನಮಾಡಿದನು. ಈ ಜೀವನಾಮಕಶೇಷ ನಲ್ಲಿ ತಾಮಸರುದ್ರ ಪಾರ್ವತಿಜನಿಸಿದರು.

11. ಸತ್ವಗುಣ ಪ್ರಾಚುರ್ಯದಿಂದ ಸಾವಿತ್ರಿಯಾದ ಪುರುಷನಿಂದ ಪೆತ್ತ ವೈಕಾರಿಕರುದ್ರನು ತನ್ನ ಪತ್ನಿ ಉಮಾದ್ವಾರಾ, ಇಂದ್ರ ಕಾಮರು ಅಹಂಕಾರಿಕಪ್ರಾಣ, ಅನಿರುದ್ಧ, ಬೃಹಸ್ಪತಿ, ಇಂದ್ರಾಣಿ, ರತಿ,ಶಚ್ಯಾದಿ, ಸ್ವಾಯಂಭೂಮನು, ಇವರ ತರುವಾಯ, ವಿತ್ತರ, ನಿಋತಿ, ಸ್ವಾಹಾ,ಬುಧ, ಉಷಾ,ಶನಿ, ಪುಷ್ಕರ, ಪಿತೃ, ಗಂಧರ್ವರು ಮೊದಲಾಗಿ ಸಮಸ್ತ ದೇವಾಂಶರು, ಸಮಸ್ತ ಮುಕ್ತಿ ಯೋಗ್ಯಜನರು. ಒಬ್ಬರಿಗೊಬ್ಬರು ಕ್ರಮದಿಂದ ಪ್ರತ್ಯೇಕವಾಗಿ ಜನಿಸಿದರು. ತೈಜಸ,ತಾಮಸ ರುದ್ರರಿಂದ ಜೀವರುಗಳ ಸೃಷ್ಠಿ ಸರ್ಗಇಲ್ಲ.

12. ಇಷ್ಟರೊಳಗೆ ಇದೇವಿಚಾರದಲ್ಲಿ ಸೂತ್ರನಾಮಕ ಪ್ರಾಣ,ಭಾರತಿಯರಲ್ಲಿ ಗರುಡ ಇಂದ್ರ ಮೊದಲಾದ ಯಜ್ಞಾಭಿಮಾನಿ ದೇವತೆಗಳು ಮೊದಲನೇ ಸೃಷ್ಠಿಕಿಂತಲೂ ಬೇರೇ ಬೇರೇ ಅಂಶಗಳಲ್ಲಿ ಉತ್ಪನ್ನರಾದರು.

13. ಗರುಡದೇವರು ವಾಯುದೇವರಿಂದ ಜನಿಸಿದ. ಗರುಡದೇವರಿಂದ ಜಯವಿಜಯಾದಿ ದ್ವಾರಪಾಲಕರು ಉಚ್ಚಕ್ರಮದಿಂದ ಜನನ.

14. ಪುನಹ ಪ್ರಾಣದೇವರಿಂದ ವಿಶ್ವಕ್ಸೇನನಜನನ. ಇಲ್ಲಿವರಿಗೆ ಅತಿ ಸೂಕ್ಷ್ಮ ಸೃಷ್ಟಿ. ಈಸಮಸ್ತ ದೇವತೆಗಳು ಸ್ಥೂಲದೇಹ ಇಚ್ಚಾವಮಾಡಲಾಗಿ ಶ್ರೀಹರಿ ಆಜ್ಞಾದಿಂದ ತಮ್ಮ ತಮ್ಮ ಅಂಶಗಳನ್ನು ಮಿಳಿತವನ್ನಾಗಿವಮಾಡಲು ಪ್ರದ್ಯುಮ್ನದೇವರು ಇವರಿಗೆಲ್ಲಾ ಅವ್ಯಕ್ತದೇಹಕೊಟ್ಟು, ದೇವತೆಗಳ ಒಂದುಸಾವಿರವರುಷ ತನ್ನ ಉದರ ದಲ್ಲಿಟ್ಟುಕೊಂಡನು. ಆಮೇಲೆ.

15. ಪ್ರದ್ಯುಮ್ನದೇವನು ಶಾಂತೀಪತಿ ಅನಿರುದ್ಧನಕೈಗೆ ಕೊಡಲು ಅನಿರುದ್ಧದೇವನು ಸ್ಥೂಲವಾದಂಥ ಚತುರ್ವಿಂಶತಿ ತತ್ವಾತ್ಮಕ ವಾದಂಥಹ ಅತಿಸೂಕ್ಷ್ಮರೂಪವಾಗಿ ಬೀಜಾಂಕುರದಂತೆ ಅನಿರುದ್ಧದೇಹವನ್ನು ಸಾಂಶಜೀವರಿಗೆ. ಮಿಗಿಲಾದಜೀವರಿಗೆ ಕರುಣಿಸಿ ಶಾಂತೀದೇವಿ ದ್ವಾರಾ ಅನಿರುದ್ಧದೇಹ ಸೂಕ್ಷ್ಮರೂಪವಾಗಿ ನಿರ್ಮಾಣಮಾಡಲಾಗಿ, ಪುನಹ ಪ್ರದ್ಯುಮ್ನದೇವರು ನಗುತ್ತ ಸಮಸ್ತಜೀವರನ್ನು ತನ್ನಉದರದಲ್ಲಿಟ್ಟು ಕೊಂಡನು. ಇಲ್ಲಿಗೆ ಬ್ರಹ್ಮದೇವರಿಗೆ 10 ವರುಷವಾಯಿತು.

16. ಲಿಂಗ ಅವ್ಯಕ್ತ ದೇಹಗಳ ಗುಣಬಿಂದುಗಳವಿಚಾರ ಮುಂದೆ ಹೇಳಲ್ಪಡುತ್ತದೆ.

17. ಪ್ರದ್ಯುಮ್ನನು ಬ್ರಹ್ಮದೇವರ ಹನ್ನೊಂದನೇವರುಷ ಅರ್ಧನಾರೀ ರೂಪಧರಿಸಿ ವರ್ಣಬೇಧದಿಂದ ಸರ್ವ ಜೀವರನ್ನು ಹುಟ್ಟಿಸಿದನು. ಬಲಭಾಗದಲ್ಲಿದ್ದ ಪುರುಷರು ವಾಮಭಾಗದಿಂದ ಸ್ತ್ರೀಯರು. ಪರಮೇಷ್ಠಿ, ಅನಲಾ. ವರುಣ,ಮರೀಚಾದ್ಯರು ಮುಖದಿಂದ ಹುಟ್ಟಿದರು. ವಾಯು,ಖಗ,ಶೇಷ, ಶಿವ, ಇಂದ್ರ, ಕಾಮ, ವಿವಸ್ವಾನಾಮಕಸೂರ್ಯ, ಚಂದ್ರ, ಸೂರ್ಯ, ವೈಶ್ಯರು, ಊರುದಿಂದ ಹುಟ್ಟಿದರು. ಉಳಿದ ಆದಿತ್ಯರು,ರುದ್ರರು. ವಸುಗಳು ಅನಿರುದ್ಧ, ಪ್ರಾಣಾದಿ ಪಂಚಕಾದಿ 49, ಗಣೇಶ, ವಿಶ್ವಕ್ಸೇನ, ಧನಪಾದ್ಯ ಶೂದ್ರರು ಪಾದದಿಂದ ಹುಟ್ಟಿದರು. ನಿರಜಾತಿ, ಭೂರುಭು, ಮೃತ್ಯುದೇವತೆಗಳು, ಯಮ, ಅಶ್ವಿನಿದೇವತೆಗಳು, ಕಾಲಾದ್ಯರು, ಸೂಕ್ಷ್ಮಸೃಷ್ಟಿ 10 ವರುಷ ಪರಿಯಂತರ. ಇಲ್ಲಿಗೆ 20ವರುಷ ವಾಯಿತು.

18. ತರುವಾಯ ಅನಿರುದ್ಧ ದೇವನ ಕೈಗೆ ಪ್ರದ್ಯುಮ್ನಕೊಡಲು ಅನಿರುದ್ಧನು ತನ್ನಲ್ಲಿಟ್ಟು, ಶಾಂತೀದೇವಿ (ಉದರದಲ್ಲಿ)ಯಲ್ಲಿಟ್ಟು, 21ನೇವರುಷದ ಮೊದಲನೇದಿನ ಅನಿರುದ್ಧ ನಿರುತ್ತ ಪ್ರಕೃತಿಯಿಂದ ಬಂದ ಲಿಂಗಗಳನ್ನು ಶಾಲ್ಯಾದಿ ಅಂಕುರೋಪಾದಿಲಿ ಇದ್ದವನ್ನು ಸ್ಥೂಲವಾಗಿ ಗುಣತ್ರಯ

ವೈಷಮ್ಯಮಾಡಿ ಮಹದಾದಿ ತತ್ವಗಳೋಪಾದಿ ಬ್ರಹ್ಮಾಂಡಕ್ಕೆ ಉಪಾದಾನ ಕಾರಣ ವಾದಂತೆ ಲಿಂಗ ಪ್ರಕೃತಿದೆಶೆಯಿಂದ ಸ್ಥೂಲವಾಗಿ ಅನಿರುದ್ಧನು ಜೀವರನ್ನು ಸೃಜಿಸಿದನು.

ಶ್ರೀಮಧ್ವೇಶಾರ್ಪಣಮಸ್ತು.

## ಗುಣತ್ರಯ ಬಿಂದುಗಳ ವಿಚಾರ

ಅನಿರುದ್ಧನಿಂದ ಆದಸೃಷ್ಟಿ ಎಂಥಾದ್ದು ಎಂದರೆ ಬ್ರಹ್ಮದೇವರ 21ನೇ ವರುಷ ಆರಂಭದಲ್ಲಿ ಅನಿರುದ್ಧನು, ಪ್ರದ್ಯುಮ್ನದಶೆಯಿಂದ ತೆಗೆದುಕೊಂಡ ಜೀವರನ್ನು ಮೊದಲು ಸ್ವಉದರದಲ್ಲಿಟ್ಟುಕೊಂಡು ತರುವಾಯ ಶಾಂತಿಯಲ್ಲಿಟ್ಟು, ಆ ಶಾಂತಿಯಮೂಲಕ ಪ್ರಕೃತಿರೂಪ ಗುಣತ್ರಯನಿಯಾಮಕಳು.

**ಗುಣತ್ರಯಗಳ ವಿವರ:** ಸರ್ವತ್ರದಲ್ಲಿದ್ದ ಸೂಕ್ಷ್ಮರೂಪ. ಪರಮಾಣುರೂಪವಾದ ಸತ್ವ,ರಜೋ, ತಮೋ, ಮಿಶ್ರಿತವಾದ ಅನಂತಾನಂತ ರಾಶಿಯಾದ ಮೂಲಜಡ ಪ್ರಕೃತಿದಶೆಯಿಂದ ಸೃಷ್ಟಿಗೆ ತೆಗೆದು ಕೊಂಡ ವಿವರವು, ನೀಚಕ್ರಮದಿಂದ ತಿಳಿಯಬೇಕು. 1. ವಂದುಮುಷ್ಠಿತಮೋರಾಶಿ, 2. ಅದರ ದ್ವಿಗುಣರಜೋರಾಶಿ.

4 ಅದರ ದ್ವಿಗುಣಸತ್ವರಾಶಿ. ವಟ್ಟು 7. ಈ ಮೂರು ಗುಣಗಳೊಳಗೆ;

1. ಸತ್ವರಾಶಿ; 1.ರಜಸ್ತಮೋ ಮಿಶ್ರದಲ್ಲಿದೆ ತಾನು ಅಷ್ಟು ಶುದ್ಧ ಸತ್ವರಾಶಿಎನಿಸಿಕೊಂಡು ಪ್ರತ್ಯೇಕವಾಗಿರೋದು.
2. ತರುವಾಯ ರಜೋರಾಶಿವಳಗೆ ವಿಶಿಷ್ಟವಾದಂತಹವು ವಂದುಮಾಡಿ ತಮಸ್ಸು-ಅದರ ನೂರುಮಾಡಿ ರಜಸ್ಸು-ಅದರನೂರುಮಾಡಿ ಸತ್ವ; (1+100+10000=10101)
3. ಮುಂದೆ ತಮೋರಾಶಿವಳಗೆ ಭಾಗಗಳು ವಂದುಮಾಡಿರಜಸ್ಸು. ಅದರ ಹತ್ತುಮಾಡಿ ತಮಸ್ಸು, ಅದರಹತ್ತುಮಾಡಿ ಸತ್ವ, 4/2 ರಜೋರಾಶಿವಳಗೆ ಸತ್ವರಾಶಿ ಬಿಟ್ಟು ತಮೋರಾಶಿನೋಡಲಿಕ್ಕೆ ರಜೋಗುಣದ ಭಾಗ ನೂರುಮಾಡಿ ಹೆಚ್ಚಿದೆ. ಆದಕಾರಣ ರಜೋರಾಶಿಎನಿಸಿಕೊಂಡಿತು. 5/3 ತಮೋರಾಶಿ ವಳಗೆ ಸತ್ವಗುಣಬಿಟ್ಟು ರಜೋನೋಡಲಿಕ್ಕೆ ಅದರ ಹತ್ತುಮಾಡಿ ತಮಸ್ಸು ಎಂಬೋಕಾರಣ ತಮೋಗುಣೆನಿಸಿ ಕೊಂಡಿತು.

4. ಈ ಪ್ರಕಾರ ಸತ್ವರಾಶಿ ಸಮವಾಗಿ ಮೂರುಗುಣರಾಶಿಗಳಲ್ಲಿ ರಜೋಗುಣತಮೋಗುಣ ಗಳೆರಡು ತಮ್ಮ ತಮ್ಮ ಪ್ರಾಚುರ್ಯನೋಡಿಕೊಂಡು ಕರಿಸಿಕೊಂಡವು. ಮುಂದೆವಂದೊಂದು ರಾಶಿವಳಗೆ ಮೂರುಮೂರು ಹೇಳುವುದಲ್ಲಿ ಎಂದರೆ ಇದರವಳಗೆ ವಂದೊಂದುಗುಣದೊಳಗೆ ಮೂರುಪ್ರಕಾರವು. ಮೂಲಪ್ರಕೃತಿ ಸ್ಥಿತಿ ಈಪ್ರಕಾರವು.

5. ಮೂಲಪ್ರಕೃತಿವಂದುಮಡಿ ತಮಸ್ಸು ಎರಡು ಮಡಿ ರಜಸ್ಸು ನಾಲ್ಕುಮಾಡಿ ಸತ್ವ ತಮ(ರ–1–ತ–10 ಸ–10) 9ಗುಣದರಾಶಿ ವಳಗೆ ವಂದುಭಾಗರಜಸ್ಸು ಹತ್ತುಮಡಿ ತಮಸ್ಸು.ಹತ್ತುಮಾಡಿಸತ್ವ (ಸ–1–ರ–10, ತ–100)

6. ಮೂರು ಮೂರುಪ್ರಕಾರ ವಿವರ ತಮಸ್ಸನ್ನು ವಂದುಮಡಿ ರಜಸ್ಸಿನೊಳಗೆ ರಜೋ–ರಜ; ರಜೋ–ತಮ; ರಜೋ–ಸತ್ವ 11/3.

7. ತಮಸ್ಸಿನ(ರಜಸ್ಸಿನ) 10ಮಡಿ, ತಮಸ್ಸಿನೊಳಗೆ ತಮೋ–ತಮ;ತಮೋ–ರಜ; ತಮೋ–ಸತ್ವ.

8. ತಮಸ್ಸನ್ನು 10 ಮಡಿ ಸತ್ವ(100) ರವಳಗೆ ಸತ್ವ ತಮ, ಸತ್ವ ರಜ, ಸತ್ವ ಸತ್ವ, 11/3.

9. ರಜೋಗುಣದರಾಶಿ ವಳಗೆ ವಂದು ಮಡಿ ತಮಸ್ಸು, ತಮೋ–ತಮ; ತಮೋ–ರಜ; ತಮೋ–ಸತ್ವ; 100ಮಾಡಿ ತಮಸ್ಸು ಅದರ ನೂರು ರಜ–ತಮ; ರಜ–ರಜ;ರಜ–ಸತ್ವ; 10000 ಮಡಿ ಸತ್ವ 10000, ಸತ್ವ–ತಮ,; ಸತ್ವ–ರಜ; ಸತ್ವ–ಸತ್ವ; ಇದರಲ್ಲಿ ವಂದೊಂದಕ್ಕೆ ಮೂರು ಮೂರರ ಪ್ರಕಾರ.

10. ಇದರೊಳಗೆ ರಜಸತ್ವಭಾಗ 12 ಉಳ್ಳ 3ಭಾಗ ಮಹತತ್ವಕ್ಕೆ ಬಿದ್ದು. ಆಮಹತತ್ವ ನಾಶವಾದ ಮೇಲೆ ಆತತ್ವದಲ್ಲಿ ಕೊಡೋ ವಿವರ.

11. 10ಭಾಗ ಶೂದ್ಧ ಸತ್ವರಾಶಿಯಲ್ಲಿ ಕೂಡುತ್ತದೆ. ವಂದುಭಾಗ ತಮೋರಾಶಿವಳಗೆ ಕೂಡುತ್ತದೆ. ವಂದು ಭಾಗ ಸ್ವರಾಶಿಗೆ ಅಂತೂ 12 ಭಾಗ.

12. ಈಪ್ರಕಾರ ರಜೋರಾಶಿ ತಮೋರಾಶಿ ಸೃಷ್ಟಿಗೆ ಕಾರಣವಾಗುತ್ತದೆ. ಶುದ್ಧಸತ್ವರಾಶಿ ಸೃಷ್ಟಿಗೆ ಕಾರಣ ವಾಗುವುದಿಲ್ಲ. ಮುಕ್ತರಿಗೆ ಭೋಗಸಾಧನ ದೇಹಾದಿಗಳಿಗೆ ಕಾರಣವಾಗುತ್ತದೆ.

13. ಹಾಂಗೂ ತಮಸ್ಸಿನಲ್ಲಿ ಬಿದ್ಧಂತಹವರಿಗೆ ಯಾತನಾಶರೀರಾದಿಗಳಿಗೆ ಶುದ್ಧ ತಮಸ್ಸು ಕಾರಣವಾಗುತ್ತದೆ.

14. ಸತ್ವರಜ: ತಮೋರಾಶಿಗಳು ಸೃಷ್ಟಿಕಾಲಕ್ಕೆ ವಿಷಮವಸ್ತಿ ಎನಿಸಿಕೊಳ್ಳುತ್ತದೆ.

15. ಮಹಾಪ್ರಳಯ ಕಾಲಕ್ಕೆ ಸಾಮಾನ್ಯವಾಸ್ತಿ ಎನಿಸಿಕೊಳ್ಳುತ್ತದೆ.

16. ಅದುಹ್ಯಾಗೆಂದರೆ ರಜೋರಾಶಿ ವಳಗಿನ ರಜಸತ್ವ 12ಭಾಗದಿಂದ ಮಹತ್ತತ್ವಕ್ಕೆ ಬಿದ್ದು ಆಮಹತತ್ವವವು ನಾಶವಾದಮ್ಯಾಲೆ ಸ್ವರಾಶಿ ಇದರ ರಜ; ಸತ್ವದಲ್ಲಿ ಬಂದುಕೂಡುತ್ತದೆ. ಅದರೊಳಗೆ ಹತ್ತುಭಾಗ ಶುದ್ಧಸತ್ವ ರಾಶಿ ವಳಗೆ ಹೋಗಿ ಕೂಡುತ್ತದೆ. ಹಾಗೆ ವಂದುರಾಶಿವಳಗೆ ಮತ್ತೊಂದು ರಾಶಿಕಲತದೆಂಬೋ ಕಾರಣ ಸಂಹಾರಕಾಲಕ್ಕೆ ಸಾಮಾನ್ಯಾವಸ್ಥೆ ಎನಿಸಿಕೊಂಡವು.

17. ಆವೇಲೆ ಸತ್ವರಜಸ್ತವೋರಾಶಿ 3 ಏಕತ್ರವಮಾಡಿ ಮಿಶ್ರವಾದ ಪರಮಾಣುರೂಪವಾದ ಅನಂತಾನಂತ ವಾದ ಪರಮಾಣುರಾಶಿವಳಗೆ ಕೂಡಿಕೊಳ್ಳುವುದು. ಪ್ರಮಾಣ: ತೃತೀಯಸ್ಕಂಧ ಭಾಗವತ ತತ್ಪರ್ಯ.

18. ರಾಶಿಭೂತವಾದ ಸತ್ವರಜಸ್ತಮೋ ಗುಣಗಳಿಗೆ ಶ್ರೀಭೂದುರ್ಗಾ ಎಂತೆಂಬೋ ಮೂರುರೂಪಗಳಿಂದ. ಲಕ್ಷ್ಮಿದೇವಿಯರು ಆಬಿಮಾನಿಯಾಗಿರುವಳು. ಏಳುಗುಣಗಳಿಂದ ಈಸ್ಪರ್ಶಜಾತಿ ಶ್ರೀಜನಾರ್ಧನನು. ಈಮೂಲ ಸತ್ವಂವಿಜ್ಞೇಯಭುಕ್ ಮೂರ್ಲಂ ರಜವು ಸತ್ವಕೇ ಮೂಲಂ. ತಮಂತಥಾ ದುರ್ಗಾಮಹಾಲಕ್ಷ್ಮಿ ಸ್ತ್ರೀಮೂಲಕಾ। ಗುಣೇಭೋಗುನಮೂಲಾಶ್ವೇಯೋ ತಾತಸಃ ।ಭಾಗವತ ತೃತೀಯಸ್ಕಂಧ ತಾತ್ಪರ್ಯಾಃ ॥ ಈಪ್ರಕಾರ ಗುಣರೂಪ ಸೃಷ್ಟಿ.

19. ಇನ್ನು ಮಹತತ್ವವಿಚಾರವು ರಜೋರಾಶಿವಳಗಿನ ರಜ:ಸತ್ವ: ಮಹಾಪ್ರಳಯಕಾಲದಲ್ಲಿ ಮಹತತ್ವ ಸಂಹಾರವಾಗಿ ಶುದ್ಧ ಸತ್ವ ರಾಶಿವಳಗೆ ಕೂಡುವಂಥಾ ಹತ್ತುಭಾಗರಜ ಸತ್ವ ಹಾಂಗೆ ತಮೋರಾಶಿವಳಗೆ ಕೂಡುವಂತಹ ವಂದು ಭಾಗ ರಜ;ಸತ್ವ; ದ್ವಿರಾಶಿವಳಗಿಂದಾವಂದು ಭಾಗರಜ; ಸತ್ವ ಹೀಗೆ 12ಭಾಗ ರಜ; ಸತ್ವ ತವೋರಾಶಿ ವಳಗಿಂದವಂದುಭಾಗ ತಮೋಗುಣಹೀಂಗೆ 13 ಭಾಗದಿಂದ ಮಹತತ್ವ ನಿರ್ಯಾಣ.

20. ಕ್ರೂಡಾಕಾರದಿಂದ ಮಹತತ್ವದೊಳಗೆ ಬಿದ್ದ ಗುಣಗಳವಿವರ. 1ಮಡಿ ತಮಸ್ಸು ಅದರ 100ಮಡಿ ರಜಸ್ಸು ಅದರ 1000 ಮಡಿರಜಸ್ಸು ಅದರ 10000ಮಡಿ ಸತ್ವ ಹೀಗೆ.

21. ಈ ವಂದೊಂದುಗುಣಗಳು ಮೂರು ಪ್ರದೇಶ ಹೀಂಗೆ ಎಲ್ಲಿಪರ್ಯಂತ ಸೃಷ್ಟಿ ಅಲ್ಲಿಪರ್ಯಂತ ಹೆಚ್ಚುತ್ತಾ ಹೋಗಬೇಕು.

22. ಇಂಥಾ ಮಹತತ್ವ ನಾಲ್ಕ ಸತ್ವಭಾಗದಿಂದ ನಿರ್ಮಾಣವು. ಅದು ಹ್ಯಾಗಂದರೆ ಮಹತತ್ವನಾಶವಾಗಿ ಶೂದ್ಧಸತ್ವರಾಶಿ ವಳಗೆ ಕೂಡುವಂಥಾ 10 ಭಾಗ ರಜಸತ್ವಕೂಡಿವಂದು ಭಾಗ ಹಾಂಗೆ ತಮೋರಾಶಿವಳಗೆ ಕೂಡುವಂಥಾ ವಂದುಭಾಗರಜಸತ್ವ. ಒಂದೊಂದುಭಾಗ ಸ್ವರಾಶಿ ರಜ ಸತ್ವದಿಂದ ಒಂದೊಂದು ರಜಸತ್ವಮತ್ತೆ ತಮೋರಾಶಿವಳಗಿನಿಂದಬಂದಂಥಾ ತಮೋಸತ್ವಭಾಗ ಹೀಗೆ ನಾಲ್ಕುಭಾಗದಿಂದ ಮಹತತ್ವ ಸೃಷ್ಠಿ.

23. ಇಂಥಾ ಮಹತತ್ವಕ್ಕೆ ಶುದ್ಧಸತ್ವಪ್ರಾಚುರ್ಯ ವೆಂಕಾರಣ ಸತ್ವ ಸತ್ವಾಧಿಕೆನಿಸಿಕೊಂಬೋ ಮಹತತ್ವಕ್ಕೆ ಶುದ್ಧಸತ್ವವಳಗಿನ ಸತ್ವ ಬಿದ್ದಿಲ್ಲ. ರಜೋಗುಣದಿಂಲಿ ನಿರ್ಮಾಣ.

24. ಬಾಹ್ಯ ಸತ್ವ ಸತ್ವ ಆದ್ಯ ಹ್ಯಾಗೆಂದರೆ ರಜೋ ರಜ: ಸತ್ವ ಪ್ರಾಚುರ್ಯವೆಂಬೋ ಕಾರಣ ಬಾಹ್ಯ ಸತ್ವಸತ್ವಾಧಿಕವೆನಿಸಿಕೊಂಡಿತು. ಈಮಹತತ್ವು ಶುದ್ಧಸತ್ವದ ಸತ್ವಗಳು ಒಟ್ಟು ರಜ-ಸತ್ವ ನಿರ್ಮಾಣವೆಂಬಲ್ಲಿ, ಭಾಗವತ ದ್ವಿತೀಯಸ್ಕಂಧ ಪ್ರಥಮೋಧ್ಯಾಯ.

25. ಇಂಥಾ ವಿಶೇಷ ಮಹತತ್ವದೆಶೆಯಿಂದ ಬ್ರಹ್ಮರಾಯನ ಉತ್ಪತ್ತಿ ಎಂತ ತಿಳಿಯಬಾರದು. ಅಲ್ಲಿ ಇನ್ನೂ ವಿಶೇಷಉಂಟು. ಹ್ಯಾಗೆಂದರೆ ಮಹತತ್ವ ಎರಡು ಭಾಗಮಾಡಿ ಅದರೊಳಗೆ ವಂದುಭಾಗವನ್ನು 100 ಭಾಗಮಡಿ ಅದರೊಳಗೆ 30ಭಾಗದಿಂದ ಬ್ರಹ್ಮದೇವರ ಶರೀರನಿರ್ಮಾಣ. 28ಭಾಗದಿಂದ ಸೂತ್ರನಾಮಕ ವಾಯುದೇವರ ಶರೀರ 17ಭಾಗದಿಂದ ಶ್ರದ್ಧಾಎಂಭೋ ಭಾರತಿಶರೀರ.

26. ಇಂಥಾಮಹತತ್ವದ ದಶೆಯಿಂದ ತ್ರಿ(ಮೂರು) ಅಹಂಕಾರತತ್ವ ಹುಟ್ಟಿತು.

27. ಅದಕ್ಕೆ 1 ಮಡಿ ತಮಸ್ಸು,ಅದರ ಹತ್ತುಮಡಿ ರಜಸ್ಸು ಅದರ 10ಮಡಿ ಸತ್ವ ತಮೋಪ್ರಾಚುರ್ಯ ನೋಡಿಕೊಂಡು ಅಹಂಕಾರತತ್ವ ಎನಿಸಿಕೊಂಡಿತು.

28. ಮಹತತ್ತ್ವದಲ್ಲಿದ್ದ ಸತ್ವಾಂಶದಿಂದ ವೈಕಾರಿಕತತ್ವ, ಮಹತತ್ವದೊಳಗಿನ ತಮೋ ಅಂಶದಿಂದ ತಮಸಂಹಾರಕಾರ ಮಹತತ್ವದೊಳಗಿನ ರಜೋ ಅಂಶದಿಂದ ತೈಜಸ ಅಹಂಕಾರ, ಈಪಂಚತತ್ವಗಳ ಉತ್ಪತ್ತಿ ಅನಿರುದ್ಧ ಶಾಂತಿದ್ವಾರಾ ಮಾಡಿದನು.

29. ಇದೇಸತ್ವಂಚ ತಮೋಗುಣಗಳದಿಂದ ಮಹದಾದಿ ತತ್ವ.

30. ಇದೇ 100ಭಾಗ ಮಹತತ್ವದಿಂದ ವನಜಸಂಭವ ವಾಯು,ವಾಣಿ, ಭಾರತಿ.

31. ವನಜಸಂಭವ ಮೊದಲಿನಂತೆ ಪವನಸಹಿತ ತನ್ನ ಪತ್ನಿಯಲ್ಲಿ ಹುಟ್ಟಿದ ಬ್ರಹ್ಮ, ಸತ್ವ ವೈಕಾರಿಕರುದ್ರ ಪತ್ನಿ ಸಹಿತ ರುದ್ರದೇವರು ನಾಮಬೇಧದಿಂದ- ಅಹಂಕಾರದಲ್ಲಿ ಮೂರುಬೇಧವಾಗಿ ಸತ್ವ ವೈಕಾರಿಕ, ರಜೋ ತೈಜಸ. ತಮೋ ತಾಮಸರುದ್ರರು.

32. ಇಂಥಾ ಮೂರುರೂಪ ವಂದೇ ಮಾಡಿ ರುದ್ರದೇವರು ತನ್ನ ಅರ್ಧಾಂಗಿಸಹಿತ ಸವ್ಯದಿಂದ ಪುರುಷನ ವಾಮಭಾಗದಿಂದ ಸ್ತ್ರೀಯರು ಅಹಂಕಾರಿಕ ಉರುಕ್ರಮಧಾತಾದಿ 12 ಮಂದಿಸೂರ್ಯರು ಮರುದ್ಗಣ, 10ಜನರುದ್ರರು, 10ಜನ ವಿಶ್ವೇದೇವತೆಗಳು. ಅಶ್ವಿನಿಗಳು ರುಭು 8 ಜನ. ವಸುಗಳು, ಯಕ್ಷ, ಸಿದ್ಧ, ಗಂಧರ್ವ, ಉರಗ, ಋಷಿ, ಶನಿ ಮೊದಲಾದವರು ತಮ ತಮಗೆ ಜನಿಸದಂತ ಸಮಸ್ತ ಜನರು. ಗಜ,ತುರಗ, ವನರುಹ ನಾನಾ ವಿಚಿತ್ರಜೀವ, ಸ್ಥಾವರ ಜಂಗಮ ಜೀವರಾಶಿಗಣ.

33. ಮೂರುರೂಪಗಳು ಪ್ರತ್ಯೇಕಮಾಡಿ ರುದ್ರದೇವರು ಬೇರೇ ಬೇರೆ ಸೃಷ್ಠಿ. ವೈಕಾರಿಕದಿಂದ ಮನಸ್ಸು; ದೇವತಾ ದೇಹ ತೈಜಸದಿಂದ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ತಾಮಸದಿಂದ ಪಂಚಭೂತಗಳು, ಪಂಚತನ್ಮಾತ್ರಗಳು ಸೃಷ್ಠಿಮಾಡಿದ.

33. ಪ್ರಥಮಾಂಗ ಮಾರುತನಿಂದ ಗರುಡ,ಶೇಷ, ಇಂದ್ರಾದಿ ಕುಮಾರರು.

34. ಶೇಷಗರುಡ ಆರ್ಕ ಶಶಿ ಅಹಂಕಾರಿಕಪ್ರಾಣ ಮೊದಲಾದ ಉತ್ತಮದೇವತೆಗಳಿಂದ ಸರ್ವ ನೀಚದೇವತೆಗಳು ಸೃಷ್ಠಿಯಾದರು.

35. ಶೇಷಗರುಡಾದಿ ನೀಚಸುರರು. ಇಚ್ಛಾಭಿಮಾನಿದೇವತೆಗಳು ಈ ಪ್ರಕಾರ ಮುಂದೆ ವರುಷ ರುದ್ರದೇವರ ತಪಸ್ಸು. ರುದ್ರದೇವರು 14 ವರುಷ ಸೃಷ್ಠಿಮಾಡಿದರು. ಇಲ್ಲಿಗೆ 35 ವರುಷವಾಯಿತು.

36. ಅನಿರುದ್ಧದೇವನು 24 ತತ್ವಗಳನ್ನು ಸಂಕಲಿತವಾಗಿ ಬೆರೆಸಿ ಅದರೊಳಗೆ ತಾನು ಹೊಕ್ಕು ಅವ್ಯಕ್ತ, ಮಹತ್ವ, ಅ.ತತ್ವಮಾನ, ಆಕಾಶ, ವಾಯು, ತೇಜ, ಅಪ್ಪು, ಈಪ್ರಕಾರ ಆವರಣಗಳನ್ನು ಸೃಷ್ಠಿಮಾಡಿ ಅಲ್ಲಿ 24 ದೇವತೆಗಳನ್ನು ಇಟ್ಟನು. ಇಲ್ಲಿಗೆ ಬ್ರಹ್ಮದೇವರ ಹತ್ತು ವರುಷ ಮುಗಿದವು. ಅದೇವಟ್ಟು 45 ವರುಷ, ಈಉದಾರೆವೃತ್ತ ಭೂಭಾಗದಲ್ಲಿ ವಾಸುದೇವನು ಮಾಯಾದೇವಿಯಸಹಿತ ಸಮಸ್ತ ಚೇತನರಾಶಿ ನುಂಗಿ ಏಕೀಭೂತ ಮಾಡಿ ಎರಡು ವರುಷಕ್ರೀಡಾ ಮಾಡಿದ. ಇಲ್ಲಿಗೆ 47 ವರುಷ. ರಮಾದೇವಿ ಬ್ರಹ್ಮಮಾನದಿಂದ ವರುಷ ಸ್ತೋತ್ರ ಇಲ್ಲಿಗೆ 48 ವರುಷ.

37. ರಮಾದೇವಿ ಶ್ರೀಭೂದುರ್ಗಾ ಮೂರುರೂಪಗಳು ಧರಿಸಿದಳು. ಇದರಿಂದ ಶ್ರೀದೇವಿಯಲ್ಲಿ ತನ್ನ ಸ್ವಾಂತದಿಂದ ವಿಷ್ಣು. ಭೂದೇವಿಯಲ್ಲಿ ಬ್ರಹ್ಮ, ದುರ್ಗಾದೇವಿಯಲ್ಲಿ ರುದ್ರಭಿನ್ನಾಂಶದಿಂದ ಉತ್ಪತ್ತಿ. ವಿಷ್ಣುಪಾಲನಾಕರ್ತ ಬ್ರಹ್ಮ ಉತ್ಪತ್ತಿ ಕರ್ತ. ಶಿವಸಂಹಾರಕರ್ತ.

38. ತದನಂತರದಲ್ಲಿ ಬ್ರಹ್ಮಾಂಡ ಖರ್ಪರನಿರ್ಮಾಣ ಮಾಡುವದಕೋಸ್ಕರ ತತ್ವಗಳು ಮಿಶ್ರಭಾವ ಸಂಕಲಿತ (ಭೂತ)ಪಂಚ ಭೂತಗಳನ್ನು ಸಂಕಲಿತ ಮಾಡಿದನು. ಸ್ಥೂಲದೇಹಕ್ಕೆ ಇದೇಕಾರಣ. ಮನುಜ,ಜಲಚರ ಪಕ್ಷಿ,ಕ್ರಿಮಿ ಇತ್ಯಾದಿ ಇಲ್ಲಿಗೆ 49 ವರುಷವಾಗಿಹೋಗಿ ಮುಂದೆ ಸ್ವಲ್ಪದಿನಗಳು ಉಳಿದಿರಲು.

39. ಸತ್ವಾಭಿಮಾನಿ ಶ್ರೀದೇವಿಯಲ್ಲಿ 24 ತತ್ವಗಳು ಮಿಳಿತವಮಾಡಿ ವಿಷ್ಣುವೀರ್ಯವಿಟ್ಟು. ತೇಜೋರಾಶಿಯಾದ 50ಕೋಟಿ ಬ್ರಹ್ಮಾಂಡವನ್ನು.

40. ಉತ್ಪತ್ತಿಮಾಡಿದನು. ಇದೇವಿರಾಟ್‌ರೂಪ. ಎರಡನೇದೇ ಅಂಡಸಂಸ್ಥಾ ವಿರಾಡ್ರೂಪ ದಿಂದ ವಾಯು ಪ್ರವೇಶಿಸಿದನು. ಮತ್ತು ಇದಕ್ಕೆ ಸರ್ವತತ್ವ ಜನನ. ಇಲ್ಲಿಗೆ 50ವರುಷ ಕಿಂಚಿತು ನ್ಯೂನಲಿ ಗುಣವೈಷಮ್ಯ, 1. ಲಿಂಗ ಗುಣವೈಷಮ್ಯದಿಂದ ಪ್ರಜಾಸರ್ಗಅಂಕುರಾದಿ ರಚನೆ. 2. ಮೃದುಮೂಲಾ ಪ್ರಕೃತಿ ವುಪಾದಾನದಿಂದ ನವಾವರಣಬ್ರಹ್ಮಾಂಡ. 3. ಬ್ರಹ್ಮಾಂಡ ಖರ್ಪರವನ್ನು ಉತ್ಪತ್ತಿಮಾಡಿ ನಾಡೀರಾಶಿಯ ಮಧ್ಯದಲ್ಲಿಟ್ಟು. 4. ಬ್ರಹ್ಮನಾಮಕ ಪರಮಾತ್ಮ ಸಮಸ್ತ ದೇವಾಂಶರನು, ನುಂಗಿದನು. ರುದ್ರನಾಮಕ ಭಗವಂತನು ಬೊಮ್ಮ ನಲ್ಲಿ ಹೊಕ್ಕು ಸರ್ವಆತ್ಮಗ ಗುಣಾಂಶಗಳ ಸಹಿತನಾಗಿ, ಬ್ರಹ್ಮನು ವಿಷ್ಣುನಾಮಕನಲ್ಲಿಪೊಕ್ಕು ಶ್ರೀದೇವಿ ಪ್ರಕೃತಿನಾಮಕಳಾಗಿಪೊತ್ತು, ಉದರದಲ್ಲಿ ಹರಿಯಿಂದ ಸಹಿತನಾಗಿ ಬ್ರಹ್ಮಾಂಡ ಪ್ರವೇಶಿಸಿ ಜಲಪೂರ್ಣ ನಾದ.

41. ಬ್ರಹ್ಮಾಂಡದಲ್ಲಿ ಶ್ರೀದೇವಿಸಹಿತವಾಗಿ ದೇವರು ಬ್ರಹ್ಮಾಂಡ ಬುಡಭಾಗದಿಂದ ವೂರ್ಧ್ವಪ್ರದೇದಲಿ ಜಲ ಮಧ್ಯದಲಿ 10 ಕೋಟಿಪರಿಮಿತ ಬಿಟ್ಟು ಚತುರಯುಗ ದೇವತೆಗಳ ಸಾವಿರವರುಷಯುತ ಪರ್ಯಂತ ಮಲಗಿ ಸುಖಬಡಲು ಶ್ರೀದೇವಿ ಸ್ತೋತ್ರಕ್ಕೆ ಮೆಚ್ಚಿ ತನ್ನ ನಾಭಿಯಿಂದ 14ದಳ ಲೋಕಾತ್ಮಕನಾದ ಸವರ್ಣ ಕಮಲವನ್ನು ಬ್ರಹ್ಮದೇವರಿಂದ ಸಹಿತನಾಗಿ ವುತ್ಪತ್ತಿ ಮಾಡಿದನು. ಇದರಲ್ಲಿ ಬ್ರಹ್ಮದೇವರು ಕುಳಿತು ಶೋಭಿಸುತಿರೆ ಹಿರಣ್ಯಗರ್ಭನು ಬೆರಗಾದನು.

42. ಬೆರಗಾಗಿ ಯೋಚಿಸಿ ತನ್ನಕಾರಣ ಭೂತವನ್ನು ಕಾಣುವೆನೆಂದು ನಾಳಪೊಕ್ಕೆ ಕಾಣದಲೆ ಗಗನದಿ ತಪತಪ ಎಂದು ಸುಂದರ ವುಪದೇಶ ಬ್ರಹ್ಮ ಧ್ಯಾನಸಮಾಧಿಯಲ್ಲಿ ಸುರರು ಸಾವಿರ ವರುಷ ತಪಸ್ಸು ಮಾಡಲು ಪರಮಾತ್ಮಮೆಚ್ಚಿ ವಿರಾಟ್ ಸಂದರುಶನ ನಿಮಿತ್ತ ಮುಕ್ತರ ಸಹಿತ ನಾನಾಭೂಷಣದಿಂದ ಮೆರೆವ ಸ್ವಮೂರ್ತಿರೂಪ 16 ವಾಸುದೇವಾದಿ ವಿಮಲೋತರ್ಕ್ಷಣೆ ಮೊದಲಾದವು ಪರಮೇಷ್ಟಿಯಿಂದ ದಿವ್ಯ ಸಾವಿರವರುಷ ಸ್ತೋತ್ರಮಾಡಿಸಿಕೊಂಡು ಸರ್ವವೇದ ಬ್ರಹ್ಮತರ್ಕ, ಪಂಚರಾತ್ರ ವುಪದೇಶಿಶಿ. ಅದೃಶ್ಯನಾದನು. ತರುವಾಯ ದೇವತಿಗಳ ಸಾವಿರ ವರುಷ ಧೃಢದಿಂದ ವಲಿಸಿ ಸರ್ವಜಗತ್ತು ಪುಟ್ಟಿಸುವೆನೆಂದು ಸಾಮರ್ಥ್ಯವನ್ನುತಾಳಿ ಸರಸಿಜ 14 ಭುವನಾತ್ಮಕನಾಗಿ ಬೆಳಿಸಿ ಈಲೋಕಕ್ಕೆ ಆಧಾರಭೂತ ನಾದ ಶರೀರಧರಿಸಿ ಹರಿವಳಗೆ ಪ್ರವೇಶಿಸಿದ.

43. ಸರ್ವಜೀವರಾಶಿಗಳ ಸಹಿತ ಪುರುಷರೂಪದಿಂದ ವೈರಾಟ್‌ರೂಪ ಪ್ರವೇಶಿಸಿದ. ತರುವಾಯು ವೈರಾಟ್ರೂಪದಿಂದಲಿ ವುಪಸರ್ಗತಲೆ ಮೊದಲುಮಾಡಿ ಪಾದಮೂಲಪರ್ಯಂತರ ಬೆಳೆದವು 14 ಲೋಕ ಗಳು. ಇವೇ ಮದಹಂಕಾರತತ್ವಾದಿ ನಿರ್ಮಾಣಮರುತ, ಮರುತಪ್ರಧಾನ ಭಾರತಿ,ರುದ್ರ ಇಂದ್ರಕಾಮ ಸರ್ವತಾತ್ವಿಕವರ್ಗಗಳು, ಕರಣಾದಿ ತತ್ವಯಜ್ಞಸಾಧನ, ದ್ರವ್ಯ,ಛಂದಸ್ಸು, ವೇದ,ವೇದಾಂಗ ಗಿರಿ,ಶರಧಿ, ನದಿ, ದ್ವೀಪ, ನಭ, ಶ್ರಿಂಗ, ಶಫರ, ದಂತ,ಮೃಗ ಪಕ್ಷಿ, ಜಲಚರಾದಿ, ಗುಲ್ಫ,ತರು,ಭೂತ,ಪ್ರೇತ, ನಾನಾಲಕ್ಷಣಾದಿ ಶರೀರದಿಂದ ಅಜಸರ್ಗಮಾಡಿದ ಇಲ್ಲಿ ದೇವತಿಗಳಲ್ಲಿ ಅಹಂ

1) ತ್ವಹಂ ಎಂದು ಕಲಹವು ಹುಟ್ಟಿತು. ತತ್ವರೊಂದಾಗಿ ವಂದು ಶರೀರದಲ್ಲಿ ಪ್ರವೇಶಿಸಲಾಗಿ ಬಲುಪರೀಕ್ಷೆಮಾಡಿ ಪ್ರಾಣದೇವರಿಗೆ ಪ್ರಬಲತನದಿಂದ, ಸರ್ವಜನರ ಅಧಿಪತಿಯಾಗಲು ಕಾರಣವ್ಯಕ್ತಿಯಾಯಿತು.

2) ಬ್ರಹ್ಮದೇವರಿಗೆ 5ನೇಶೀರ್ಷ ಉತ್ಪನ್ನವಾದದ್ದು ರುದ್ರಗೆ ಮೋಚಕವು. ಈಪ್ರಕಾರ ಸಮಸ್ತ ಜಗತ್ತು ಪುಟ್ಟಿಸಿ ಅವರೊಳಗ ಸಹಿತವಾಗಿ ಯಾಗಗೋಸುಗ ಸಂಭಾರಾದಿಗಳನ್ನು ಸೃಜಿಸಿ ಶ್ರೀಹರಿಪ್ರತಿಬಡಿಸಲಾಗಿ, ಪರಮಾತ್ಮ ಪ್ರಸನ್ನನಾಗಿ ಅಲೌಕಿಕ ಸ್ತೋತ್ರದಿಂದ ಸುರರಿಂದ ತೃಪ್ತನಾಗಿ ಅಂತರ್ಧ್ಯಾನನಾಗಿ ಈಕಾರಣ ಇಳೆಂಯೊಳಗೆ ದೇವತಿಗಳು ಪೂರ್ವಸಾಧ್ಯರುಯೆಂದು ಪ್ರಸಿದ್ಧರಾದರು. ಬ್ರಹ್ಮದೇವರು ಇವರನ್ನು ಸಲಹಿ

ಅನುಲೋಮ ಪ್ರತಿಲೋಮ ಕುಲದಿಂದ ಸಮಸ್ತರಿಗೆ ಬುದ್ಧಿಯನಿತ್ತು, ಜಲಜಪದ್ಮಕಲ್ಪ ಅಂತ್ಯವಾಗೆ ಪ್ರಳಯ ಮಾಡುವುದುಕ್ಕೆ ಅಂತ್ಯದಿನದಲ್ಲಿ ಯಿಚ್ಚೆವುಳ್ಳವನಾಗಿ ಭೂಮಿಯನ್ನು ಮಳೆ ಮಿಕ್ಕಾದರಿಂದ ನೀರೊಳಗೆ ಮುಣಿಗಿಸಿ ಸರ್ವಪ್ರಾಣಿಗಳನ್ನು ನುಂಗಿ, ಗಾಯತ್ರಿಸಹಿತ ಸತ್ಯಲೋಕದಲ್ಲಿ ಮಲಗಿದನು. ಸರ್ವಜನನ್ನ ಪಾವನಮಾಡಿ ಸಂತೋಷದಿಂದ ಯಿದ್ದನು. ದ್ವಿತೀಯ ಪ್ರಕೃತಿಯ ಸಂಗಡ (ಅಂದರೆ ಸರಸ್ವತಿ) ಪುರುಷ ಇಲ್ಲಿಗೆ ಪದ್ಮಕಲ್ಪ ಕಡೆಭಾಗ ವಂದು ರಾತ್ರಿ ಮಲಗಿ ಮುಂದೆ ಶ್ವೇತವರಹಕಲ್ಪ ಪದ್ಮಕಲ್ಪಸೃಷ್ಟಿ.

## ಬ್ರಹ್ಮದೇವರು ಪದ್ಮಕಲ್ಪದಲ್ಲಿ ಸೃಷ್ಟಿಮಾಡಿದ್ದು.

ಮೇಲೆ ಹೇಳಿದ ವಿವರ: ಬ್ರಹ್ಮದೇವರು ಜೀವಾಭಿಮಾನಿಯಾದಂತಾ ವಾಯುದೇವರನ್ನು ತನ್ನಮನಸ್ಸಿನಿಂದ ಸೃಷ್ಟಿಮಾಡಿದನು. ಈ ವಾಯುದೇವರು ಅವ್ಯಕ್ತಮಹತತ್ವಕ್ಕೆ ನಿಯಾಮಕರಾದರು. (ಅವ್ಯಕ್ತ ಮುಖ್ಯತ್ವೇನ) ಶ್ರೀವಾಯುದೇವರನ್ನು ತಾವು (ಬ್ರಹ್ಮದೇವರು)ಹುಟ್ಟಿದ ಹತ್ತುವರುಷದಮ್ಯಾಲೆ ಸೃಷ್ಟಿಮಾಡಿದ್ದಾರೆ. (ಮನುಷ್ಯ ಮಾನ ವರುಷ) ಆಮ್ಯಾಲೆ ಬ್ರಹ್ಮದೇವರು ದಕ್ಷಿಣ ಹಸ್ತದಿಂದ;

3. ಸರಸ್ವತಿ ವಾಮಹಸ್ತದಿಂದ, ಭಾರತೀದೇವೇರು ವೊಂದೊಂದು ವರುಷದಮ್ಯಾಲೆ ಸೃಷ್ಟಿಮಾಡಿದ್ದಾರೆ.
4. ಅಲ್ಲಿಂದ ಅಹಂಕಾರಾತ್ಮಕ ದೇವತೆಗಳು. ಅಂದರೆ ಬ್ರಹ್ಮನ ದಕ್ಷಿಣಪಾದದಿಂದ ವಂದುಸಾವಿರ ವರುಷದ ಮೇಲೆ ಶೇಷದೇವರ ವುತ್ಪತ್ತಿ.
5. ಪುನಹ ಶೇಷದೇವರು ಹುಟ್ಟಿದ ಸಾವಿರವರುಷದ ಮ್ಯಾಲೆ ಗರುಡದೇವರನ್ನು.
6. ದಕ್ಷಿಣಪಾದದಿಂದ ರುದ್ರದೇವರನ ಗರುಡ ಹುಟ್ಟಿದ ಸಾವಿರವರುಷದ ಮ್ಯಾಲೆ ಹುಟ್ಟಿಸಿದ.
7. ಬ್ರಹ್ಮನ ವಾಮಪಾದದಿಂದ ವಾರುಣೀದೇವಿಯನ್ನು ಶೇಷಾನಂತರ 10 ವರುಷದ ಮ್ಯಾಲೆ ಹುಟ್ಟಿಸಿದ.
8. ಬ್ರಹ್ಮನ ವಾಮಪದದಿಂದ ಸೌಪರುಣಿಯನ್ನು ಗರುಡಾನಂತರ 10 ವರುಷದಮ್ಯಾಲೆ ಹುಟ್ಟಿಸಿದನು.
9. ಬ್ರಹ್ಮದೇವರು ಪಾರ್ವತಿದೇವರನ್ನು ವಾಮಪಾದದಿಂದ ರುದ್ರಾನಂತರ 10ವರುಷದ ಮ್ಯಾಲೆ ಹುಟ್ಟಿಸಿದನು.
10. ಪಾರ್ವತಿಯನ್ನು ಹುಟ್ಟಿಸಿದ ನೂರುವರುಷದ ಮ್ಯಾಲೆ ವಾಯುಮೂಲತ್ವದಿಂದ ಮನೋಭಿಮಾನಿ ಇಂದ್ರನನ್ನು ಸೃಷ್ಟಿಸಿದ.

11. ಮುನಹ ಬ್ರಹ್ಮದೇವರು ದಕ್ಷಿಣಬಾಹುದಿಂದ ಶಚೀದೇವಿಯನ್ನು ಇಂದ್ರನ 10ವರುಷದಮ್ಯಾಲೆ ಸೃಷ್ಟಿಸಿದ.

12. ಬ್ರಹ್ಮದೇವರು ವಾಮಬಾಹುದಿಂದ ಕಾಮದೇವರನ್ನು ಇಂದ್ರಹುಟ್ಟಿದ 30ವರುಷದ ಮ್ಯಾಲೆ ಸೃಷ್ಟಿಸಿ ಮಾಡಿದನು. ಕಾಮ ಮನಸ್ತತ್ವಕ್ಕೆ ಅಭಿಮಾನಿ.

13. ಬ್ರಹ್ಮದೇವರು ಕಾಮಹುಟ್ಟಿದ10ವರುಷದವ್ಯಾಲೆ ರತೀದೇವಿಯನ್ನು ವಾಮಬಾಹುದಿಂದ ಹುಟ್ಟಿಸಿದನು.

14. ಬ್ರಹ್ಮದೇವರು ತಮ್ಮ ಅನಾಮಿಕ ಬೆರಳಿನಿಂದ ಕಾಮದೇವರುಹುಟ್ಟಿದ 10 ವರ್ಷದ ಮ್ಯಾಲೆ ಅಹಂಕಾರಿಕ ಪ್ರಾಣನನ್ನು ಹುಟ್ಟಿಸಿದನು.

15. ಅಹಂಕಾರಿಕ ಪ್ರಾಣನ ಹೆಂಡತಿಯಾದ 5 ವರುಷದ ಮ್ಯಾಲೆ ತಾನು ವಾಮ ಅನಾಮಿಕದಿಂದ ಹುಟ್ಟಿಸಿದ್ದಾನೆ.

16. ಅಹಂಕಾರಿಕಪ್ರಾಣನ ತರುವಾಯದಲ್ಲಿ ಬ್ರಹ್ಮದೇವರು ಸ್ವಜಾನುದಿಂದ 25 ವರುಷದ ಮ್ಯಾಲೆ ಬೃಹಸ್ಪತ್ಯಾಚಾರ್ಯರನ್ನು ಹುಟ್ಟಿಸಿದನು.

17. ತರುವಾಯದಲ್ಲಿ ತಾರಾದೇವಿಯನ್ನು 5ವರುಷದ ಮೇಲೆ ಸ್ವಜ್ಞಾನದಿಂದ ಹುಟ್ಟಿಸಿದ.

18. ಮತ್ತು ಬೃಹಸ್ಪತ್ಯಾಚಾರ್ಯ ವುತ್ಪತ್ಯನಂತರದಲ್ಲಿ 5 ವರುಷದಮೇಲೆ ಬ್ರಹ್ಮದೇವರು ತಮ್ಮ ಮನಸ್ಸಿನಿಂದ ಸ್ವಾಯಂಭೂವ ಮನುವನ್ನು ಹುಟ್ಟಿಸಿದ.

19. ಸ್ವಾಯಂಭೂವ ಮನು ಹುಟ್ಟಿದ 5ವರುಷದಮೇಲೆ ಶತರೂಪಾದೇವಿಯನ್ನು ಮನಸ್ಸಿನಿಂದ ಹುಟ್ಟಿಸಿದ.

20. ಶತರೂಪಾನಂತರದಲ್ಲಿ 20ವರುಷದಮೇಲೆ ದಕ್ಷಿಣಾಂಗುಷ್ಟದಿಂದ ದಕ್ಷಪ್ರಜಾಪತಿಯನ್ನು ಹುಟ್ಟಿಸಿದ.

21. ದಕ್ಷಹುಟ್ಟಿದ 5ವರುಷದಮೇಲೆ ಬ್ರಹ್ಮದೇವರು ವಾವಾಂಗುಷ್ಟದಿಂದ ಪ್ರಸೂತಿಯನು ಪಡೆದ. ಅದರ ಪೂರ್ವಕ ಸೃಷ್ಟ್ಯರ್ಥನಾಗಿ ಹುಟ್ಟಿಸಿದ.

22. ದಕ್ಷ ಹುಟ್ಟಿದ 25 ವರುಷಗಳ ತರುವಾಯ ಬ್ರಹ್ಮದೇವರು ತಮ್ಮ ಮಧ್ಯಮಾಂಗುಲಿ ಪರ್ವಗಳಿಂದ ಅನಿರುದ್ಧನನ್ನು ಹುಟ್ಟಿಸಿದ.

23. ಅನಿರುದ್ಧ ಹುಟ್ಟಿದ 5ವರುಷದ ಮೇಲೆ ಬ್ರಹ್ಮದೇವರು ಮಧ್ಯಮಾಂಗುಲಿ ಪರ್ವದಿಂದ ವಿರಾಟ್ ನಾಮಕ ಉಷಾದೇವಿಯನ್ನು ಪೆತ್ತನು.

24. ಅನಿರುದ್ಧ ಹುಟ್ಟಿದ 100 ವರುಷದನಂತರ ಪ್ರವಾಹನನ್ನು ಕನಿಷ್ಟಾಂಗುಲಿ ಪರ್ವದಿಂದ.

25. ಪ್ರವಾಹ ಉತ್ಪತ್ತಿಯಾದ 10 ವರುಷದಮೇಲೆ ಪ್ರಾವಾಹಿ ಯನ್ನು ಕನಿಷ್ಟಾಂಗುಲಿ ಪರ್ವಗಳಿಂದ ಹುಟ್ಟಿಸಿದನು.

26. ಪ್ರವಹವಾಯುವು ಹುಟ್ಟಿದ 100ವರುಷದಮೇಲೆ ಬ್ರಹ್ಮದೇವರ ಪೃಷ್ಠದಿಂದ ಯಮದೇವರ ಉತ್ಪತ್ತಿ.

27. ಯಮದೇವರು ಹುಟ್ಟಿದ ವರುಷದ ಮ್ಯಾಲೆ ಶ್ಯಾಮಲ ಪೃಷ್ಠದಿಂದ ಉತ್ಪತ್ತಿ.

28. ಯಮುನ ತರುವಾಯು 30ವರುಷದಮೇಲೆ ಚಂದ್ರನನ್ನು ದಕಿಣ ಶ್ರೋತ್ರೃದಿಂದ ಶ್ರೋತ್ರೃ ತತ್ವಾಭಿಮಾನಿಯಾಗಿ ಹುಟ್ಟಿಸಿದ.

29. ಚಂದ್ರಹುಟ್ಟಿದ 9ವರುಷದಮೇಲೆ ವಾಮಶ್ರೋತ್ರೃದಿಂದ ರೋಹಿಣಿನ ಹುಟ್ಟಿಸಿದ.

30. ಚಂದ್ರಹುಟ್ಟಿದ 30ವರುಷದಮ್ಯಾಲೆ ದಕ್ಷಿಣಾಕ್ಷಿಯಿಂದ ಸೂರ್ಯನ ಹುಟ್ಟಿಸಿದ.

31. ಸೂರ್ಯಹುಟ್ಟಿದ 6ವರುಷದಮೇಲೆ ವಾಮಾಕ್ಷಿಯಿಂದ ಸಂಜ್ಞಾದೇವಿ ಉತ್ಪತ್ತಿ.

32. ಸೂರ್ಯಹುಟ್ಟಿದ ಶತವರುಷದಮೇಲೆ ರಸನೇಂದ್ರಿಯದಿಂದ ವರುಣನು ಹುಟ್ಟಿದ.

33. ವರುಣ ಹುಟ್ಟಿದ 20ವರುಷದಮೇಲೆ ರಸನೇಂದ್ರಿಯದಿಂದ ಗಂಗಾ ಉತ್ಪತ್ತಿ.

34. ವರುಣ ಹುಟ್ಟಿದ 10 ವರುಷದಮೇಲೆ ತೊಡಿಗಳಿಂದ ಭಗವತ್ಪ್ರೀತರಾದಂಥಾ ನಾರದರ ಉತ್ಪತ್ತಿ.

35. ನಾರದ ಹುಟ್ಟಿದ 60ವರುಷದಮೇಲೆ ವಾಗೀಂದ್ರಿಯದಿಂದ ಅಗ್ನಿ ಹುಟ್ಟಿದನು.

36. ಅಗ್ನಿಹುಟ್ಟಿದ 5ವರುಷದಮೇಲೆ ಸ್ವಾಹಾದೇವಿ ಉತ್ಪತ್ತಿ.

37. ಅಗ್ನಿ ಅನಂತರದಲ್ಲಿ ಬ್ರಹ್ಮಋಷಿಶ್ರೇಷ್ಠರಾದಂಥಾ ಭೃಗುಋಷಿಗಳನ್ನು ಭ್ರೂಮಧ್ಯದಿಂದ 10 ವರುಷದ ಮೇಲೆ ಉತ್ಪತ್ತಿ.

38. ಭೃಗುಹುಟ್ಟಿದ ವಂದುವರುಷದ ಮೇಲೆ ಭೃಗುಭಾರ್ಯಳನ್ನು ಭ್ರೂಮಧ್ಯದಿಂದ ಉತ್ಪತ್ತಿ.

39. ಬ್ರಹ್ಮದೇವರು ಭೃಗುಋಷಿಯನ್ನು ಹುಟ್ಟಿಸಿದಮೇಲೆ ಮನಸ್ಸಿನಿಂದ 100ವರುಷದಮೇಲೆ ಕಶ್ಯಪನನ್ನು ಹುಟ್ಟಿಸಿದ.

40. ಕಶ್ಯಪ ಹುಟ್ಟಿದ ವಂದುವರುಷದಮೇಲೆ ಅದತಿ ಉತ್ಪತ್ತಿ.

41. ಕಶ್ಯಪ 10 ವರುಷದಮೇಲೆ ಕಣ್ಣಿನಿಂದ ಅತ್ರಿ ಉತ್ಪತ್ತಿ.

42. ಅತ್ರಿ ಹುಟ್ಟಿದ 10ವರುಷದ ಮೇಲೆ ಪ್ರಾಣದಿಂದ ಭರದ್ವಾಜ, ವಶಿಷ್ಠರ ಉತ್ಪತ್ತಿ.

43. ಇವರು ಹುಟ್ಟಿದ 10ವರುಷದಮೇಲೆ ಇವರ ಹೆಂಡರು ಉತ್ಪತ್ತಿ. ವಂದೊಂದು ವರುಷ ಅಂತರದಿಂದ. ಎಂತ ತಿಳಿಯಬೇಕು.

44. ವಶಿಷ್ಠನಂತರದಲ್ಲಿ ವಂದುವರುಷದ ಮೇಲೆ ಗೌತುಮರು.

45. ವಶಿಷ್ಠಾನಂತರ 10ವರುಷದ ಮೇಲೆ ಜಮದಗ್ನಿ.

46. ಮರಿಚಿನ ಬ್ರಹ್ಮನ ಮನಸ್ಸಿನಿಂದ, ಆಂಗೀರಸನ ಮುಖದಿಂದ, ಪುಲಹನಹೊಕ್ಕಳಿಂದ, ವಶಿಷ್ಠನ ಪ್ರಾಣದಿಂದ ಪುಲಸ್ಯನಕಿವಿಯಿಂದ, ಕ್ರತುನಕರದಿಂದ ಹುಟ್ಟಿಸಿದರು.

47. ಜಮದಗ್ನಿ ಹುಟ್ಟಿದಮೇಲೆ 10ವರುಷದಮೇಲೆ ವೈವಸ್ವತಮನುವು.

48. ವೈವಸ್ವತ ಹುಟ್ಟಿದ 100ವರುಷದಮೇಲೆ ವಿಷ್ವಕ್ಸೇನ.

49. ವಿಷ್ವಕ್ಸೇನ ಹುಟ್ಟಿದ 14 ವರುಷದ ಮೇಲೆ ಗಣಪತಿ.

50. ಗಣಪತಿ ವುತ್ಪತ್ತ್ಯಾನಂತರ 8 ವರುಷದಮೇಲೆ ಕುಬೇರ.

51. ಕುಬೇರ ಹುಟ್ಟಿದ ವಂದುವರುಷದಮೇಲೆ ಕುಬೇರನ ಹೆಂಡತಿ.

52. ವಿಷ್ವಕ್ಸೇನ ಹುಟ್ಟಿದ 10 ವರುಷದ ಅಂತರದಲ್ಲಿ ಜಯವಿಜಯಾದಿ ದ್ವಾರಪಾಲಕರ ಉತ್ಪತ್ತಿ.

53. ಜಯವಿಜಯಾದಿ ದ್ವಾರಪಾಲಕರನಂತರ 100ವರುಷದಮೇಲೆ ಬಲ್ಯಾದಿ ದೇವತೆಗಳು.

54. ಅನಂತರ 30 ವರುಷದ ಮೇಲೆ ಪರ್ಜನ್ಯ,ಸ್ವಾಹಾದೇವಿ.

55. ಅನಂತರ 10 ವರುಷದ ಮೇಲೆ ಸುಕರ್ಮ ತತ್ವಾಭಿಮಾನಿ ಪುಷ್ಕರನು.

ಅನಂತರ ದೇವತೆಗಳನ್ನು ಅವರವರ ತಾರತಮ್ಯಾನುಸ್ಸಾರವಾಗಿ ಕಾಲಾವಧಿಯಿಂದ ಹುಟ್ಟಿಸಿರುತ್ತಾನೆ. ಈ ರೀತಿ ಶ್ರೀಹರಿ ಪ್ರಸಾದದಿಂದ ಬ್ರಹ್ಮದೇವರು ಸಕಲ ತತ್ವಾಭಿಮಾನಿ ದೇವತೆಗಳನ್ನು ಹುಟ್ಟಿಸಿದ್ದಾರೆಂದು ತಿಳಿದು ಯಾರು ನಿತ್ಯದಲ್ಲಿ ಚಿಂತನೆ ಮಾಡುತ್ತಾರೆಯೋ ಅವರಿಗೆ ಸಂದೇಹ ವಿಲ್ಲದೆ ಮೋಕ್ಷ ವಾಗುತ್ತದೆಂದು ಗರುಡಪುರಾಣ ಬ್ರಹ್ಮಕಾಂಡ 13ನೇ ಅಧ್ಯಾಯದಲ್ಲಿ ಶ್ರೀಕೃಷ್ಣ ಗರುಡಗೆ ಹೇಳಿದ್ದಾನೆ.

ಇದೇ ಪ್ರಕಾರ ಪದ್ಮಕಲ್ಪದಲ್ಲಿ ಬ್ರಹ್ಮಸೃಷ್ಟಿ ಮಾಡಿ ಮೊದಲು ಹೇಳಿದ ಪ್ರಕಾರ ಯಜ್ಞಾಭಿಮಾನಿ ದೇವತೆಗಳನ್ನು ಸೃಷ್ಠಿಮಾಡಿದ್ದಾರೆ.

44. ಬ್ರಹ್ಮದೇವರು 2ನೇದಿವಸ ಎದ್ದು ತನ್ನತಾತ ಪರಮಾತ್ಮನಿಗೆ ನಮಿಸಿ ಪ್ರೀತಿಯಿಂದಲಿ ಜಗವ ಪುಟ್ಟಿಸುವುದಕೆ ಈ ಭೂತಳವಿಲ್ಲವೆಂದು ಚಿಂತಿಸಿ ಜಾತರುವಾತ ನಾದಂತ ಹರಿ ಅಜನ ನಾಶಿಕಾದಿಂದ ಶ್ವೇತವರಾಹ ನಾಗಿ ಜನಿಸಿದನು.

45. ಅಷ್ಟರಲ್ಲಿ ಆದಿಹಿರಣ್ಯಾಕ್ಷ ಹುಟ್ಟಿದವನು ಹತನಾಗಿಯಿದ್ದನು.

46. **ಶ್ವೇತವರಾಹಕಲ್ಪಸೃಷ್ಠಿ:**– ಈಶ್ವೇತವರಹ ದೇವರು ಶಾತಕುಂಭಾಧರನಾದ ಬ್ರಹ್ಮದೇವರ ಸ್ತುತಿಗೆಮೆಚ್ಚಿ ಚಾತುರ್ಯದಿಂದ ವುದಕಪ್ರವೇಶ ಮಾಡಲಾಗಿ. ಆನೀರಿನಲ್ಲಿ ಆದಿಹಿರಣ್ಯಾಕ್ಷ ಅಡ್ಡಗಟ್ಟಲು ಅವನನ್ನು ಕೋರೆಹಲ್ಲಿನಿಂದ ಘಾತಿಸಿ ಬರುತ್ತಿರೆ ಮಧ್ಯದಲ್ಲಿ ವಾತಾವಿಷ್ಟವುಳ್ಳ ಅಸುರರು ತಡಿಯೆ ಲೀಲಾವಮಾತ್ರದಿಂದ ಮರ್ಧಿಸಿ ಪಂಚಭೂತಾತ್ಮಕವಾದ ಪೃಥ್ವಿಯನ್ನು ಘಟ್ಟಿಮಾಡಿ ಬ್ರಹ್ಮಗೆ ಯಿತ್ತನು. ಬ್ರಹ್ಮ ಪಾತೋದ್ಧಾತಕಾಲದಲ್ಲಿ ಸ್ವಶಕ್ತಿಯಿಂದ ಶಾಂತಿಯಿಂದಲಿ ಪಾತಕವೆಂಬೋ ಪಂಚಪರ್ವ (ದೈತ್ಯಾದಿಗಳ ಆದಿಸೃಷ್ಠಿ ಬ್ರಹ್ಮ ವರಾಹಕಲ್ಪದಲ್ಲಿ ತನ್ನಪೃಷ್ಠಭಾಗದಿಂದ ಸಮಸ್ತಕಲ್ಯಾದಿದೈತ್ಯರನ್ನು ದೇವತಿಗಳಕಿಂತ ಪೂರ್ವದಲ್ಲಿ ಹುಟ್ಟಿಸಿದ್ದಾನೆ.

**ದೈತ್ಯರಸೃಷ್ಠಿ.:** 1.ಕಲಿ ಮನಸ್ತತ್ವ ಆರಂಭಿಸಿ, 2.ಕುಲಕ್ಷ್ಮಿ 100ಗುಣ ನೀಚಳು ಬುದ್ಧಿತ್ವ, 3. ವಿಪ್ರಚಿತ್ತಿ 100 ಗುಣ ನಾಭಿ ಚಿತ್ತಕ್ಕೆ, 4.ನರಕಾಸುರ, ಜರಾಸಂಧ 10 ಗುಣ ಕಾಲನೇಮಿ 10ಗುಣ ಅಹಂಕಾರ. 5.ಗುಣ,ಮನ, ಬುದ್ಧಿ. 6.ಹಿರಣ್ಯಕಶ್ಯಪು 100ಗುಣ ಮನಸ್ತತ್ವ; 7.ಹಿರಣ್ಯಾಕ್ಷ 3ಗುಣ; 8.ಮಣಿಂತ 3ಗುಣ; 9.ಬಕಾಸುರ ಕಿಂಚಿತ್‌ನ್ಯೂನ; 10.ತಾರಕಾಸುರ 20ಗುಣ.11.ಶಂಬರಾಸುರ 6 ಗುಣ; (7ರಿಂದ 11 ವರೆಗೆ ಮನಸ್ತತ್ವ) 12. ಸಾಲ್ವ 4 ಗುಣ ಶ್ರೋತ್ರೇಂದ್ರಿಯ; 13. ಹಿಡಂಬ 10ಗುಣ ತ್ವಕ್ಕು. 14. ಬಾಣಾಸುರ 6ಗುಣ ಚಕ್ಷು. 15. ದ್ವಾಪರ 6ಗುಣ ಪ್ರಾಣ. 16.ನಮುಚಿ; 17.ಇಲ್ವಾಲ; 18.ದ್ವಾಪರ 10 ಗುಣ ಜಿಂಹ್ವಾ; 19.ವಾತಾಪಿ 100ಗುಣ ವಾಗೀಂದ್ರಿಯ; 20. ಧೇನುಕ; 21.ಕೇಶಿ 100ಗುಣ ಪಾಣೀದ್ವಯ; 22.ತೃಣಾವೃತ್ತ 11; 23.ಮಾಸ 10ಗುಣ ಪಾದಾಭಿಮಾನಿ; 24.ಲವಣಾಸುರ 10ಗುಣಪಾಯು; 25.ದುಂದುಮಾರ 5ಗುಣ ವುಪಸ್ಥ; 26.ಹಂಸಶಬ್ದ; 27.ಡಿಭೀಕ; 28.ಪೌಂಡ್ರಕ; 29.ಕಾಲಕೇಯ 8ಗುಣರೂಪ; 30.ಕೂಪಕರ್ಣ 8ಗುಣ ರಸ; 31.ದುಃಶ್ಯಾಸನ ವುಷಶೇನ 8ಗುಣ ಗಂಧ; 32.ವಿಕರ್ಣ ಕುಂಭಾಂಡ 8ಗುಣ

ಆಕಾಶ; 33.ರುಗ್ಮಿ 100ಗುಣ ಪಾಯು; 34.ಶತಧನ್ವ 100ಗುಣ ತೇಜ; 35.ಕಿಮ್ಮೀರ 100ಗುಣ ಅಪ್ಪು; 36.ಕಾಲಕೇಯ ವೇನ ಸೈಂಧವ 100ಗುಣ ಪೃಥ್ವಿ

## ದೈತ್ಯರು

37. ಮಧುರಹಾನಿ ದೈತ್ಯಗುಣ ಕಾಲಕೇಯರು; 38. ವದನ; 39. ಪಾಣಿ; 40.ಪಾದ; 41.ಶ್ರೋತ್ರ; 42.ಗುದ; 43.ವುಪಸ್ಥ; 44.ಪ್ರಾಣಾ; 45.ತ್ವಕು;

46.ಚಕ್ಷು; 47.ರಸನ; 48.ಕಲ್ಯಾಭಿಮಾನಿದೈತ್ಯ; 49.ದೈತ್ಯಭೃತ್ಯರು; 50.ಅನಾಖ್ಯಾತ ದೈತ್ಯರು ಪಶಾಚ; 51.ಅಪ್ರಸಿದ್ಧ ದೈತ್ಯರು. 52.ಮನುಷ್ಯಾಧಮರು; 53.ಜಡ; 54.ನಿತ್ಯಸಂಸಾರಿಗಳು; ಪಂಚಪರ್ವ ಅವಿದ್ಯಾಸೃಷ್ಟಿಸಿದ. ಇದು ಮುಂದೆ ಸೃಷ್ಠಿಗೆ ಯಾತಕ್ಕೆ ಬಾರದೆಂದು ಮರಳಿ ನೆನೆದಾಪದ್ಮಕಲ್ಪದಂತೆ ದೇವತೆಗಳ ಸೃಷ್ಠಿ.

47. ಬ್ರಹ್ಮಸನಕಾದಿಗಳನ್ನು ಬಹು ಆತುರದಿಂದ ಮನಸ್ಸಿನಿಂದ ಹುಟ್ಟಿಸಿದ. 48. ಈ ಸನಕಾದಿಗಳು ಮಾತುಕೇಳದೇ ಯಿರಲಾಗಿ ಕೋಪದಿಂದ 49.ತತ್ಕಾಲಕ್ಕೆ ಭೃಕುಟಿ ಯಿಂದಾ ಸದ್ಯೋಜಾತನೇಂಬ ಶಿವನಪೆತ್ತ. 50.ಈಸದ್ಯೋಜಾತಗೆ ಅಪ್ಪಣಿಕೊಡಲು ಮಹಾಭೀತಿವಂತರ ಪುಟ್ಟಿಸಿದ. 51. ಬ್ರಹ್ಮ ತಾನು ಕರ್ಮನಾಗು ಮುಖಜಿಂಹ್ವಾದಂತೆ ಹಸ್ತಿ,ನೇತ್ರ,ಗುಹ್ಯ ಸರ್ವರೋಮ ರೋಮಕೂಪ ನಾಭಿದಶೆಯಿಂದ ಇಂದ್ರಸ್ಮರ ಅನಿರುದ್ಧ ಅಗ್ನಿ ಮೊದಲಾದವರನ ಸರ್ವದೇವತೆಗಳು ಸರ್ವಜಾತಿ ಉತ್ಪನ್ನಮಾಡಿದ.

52. ಈಮಂದಪ್ರಜಾಸರ್ಗ ಪೂರ್ಣವಾಗದಿರಲು, ಬ್ರಹ್ಮ ತವಕದಿಂದ ದಶಪುತ್ರರ ಪಡೆದ ಅತ್ರಿ,ವಶಿಷ್ಟ, ದಕ್ಷಪ್ರಜೇಶ್ವರ ಸಹಿತ ತರುವಾಯ.

53. ಸ್ತನ,ಹೃದಯ,ಹುಬ್ಬು,ಯದೆ,ಓಷ್ಟ್ರ, ಮುಖ, ಪೃಷ್ಠ, ಮೇಢ್ರ,ಛಾಯಾ, ಅವಯವಂಗಳು ಸರ್ವ ರೋಮಂಗಳಲ್ಲಿ ಕಾಮ,ಕ್ರೋಧ,ಲೋಭಾದ್ಯರನ್ನ ಹುಟ್ಟಿಸಿದನು. ಅಲ್ಲಿಂದ

54. ಅವನಿ ವಳಗೆ ಮನುಜ ವಾಗಾಭಿಮಾನಿ ಪೊಳೆವ ವೇದ ತದಾಂಗ ಆಶ್ರಮಧರ್ಮ ಪವಿತ್ರವಾದ ದ್ರವ್ಯಂಗಳು ಪುಟ್ಟಿಸಿ ಈಪ್ರಕಾರ ಯೋಚಿಸಿದನು. ಮುಂದೆ ಬ್ರಹ್ಮದೇವರು ಸ್ವಾಯಂಭೂವ ಶತರೂಪಾನ್ನು ವಂದೇಕಾಲದಲ್ಲಿ ಅನುನಯದಿಂದ ಹುಟ್ಟಿಸಿ, ಮನಸ್ಸು ತಿದ್ದಿ ವಿವಾಹಮಡಿ ಮೈಥುನ ಭಾವದಿಂದ ಮಕ್ಕಳಾದವುಕೇಳು. ವುತ್ತಾನಪಾದ, ಪ್ರಿಯಂವ್ರತ, ಆಕೂತಿ, (ರುಚಿ,ಪ್ರಸೂತಿ,ದಕ್ಷ) ದೇವಹೂತಿ–ಕರ್ದಮ ಮೂರುಹೆಣ್ಣುಮಕ್ಕಳ ವಿವಾಹ ಮಾಡಿದ.

55. ಸ್ವಾಯಂಭುವು ಮನು ನಾಲ್ಕುವಿಧ ಸೃಷ್ಠಿ, 1.ಶ್ವೇದಜ; 2.ವುದ್ಭಿಜ; 3.ಜರಾಯಜ; 4.ಅಂಡಜ; ಜಾತಿ ಪ್ರಭೇಧದಿಂದ 4ಲಕ್ಷಯೋನಿ ಮನುಜ; ಪಶು 30ಲಕ್ಷ; ಪಕ್ಷಿ 10ಲಕ್ಷ; ಕ್ರಿಮಿ 11 ಲಕ್ಷ; ವಾರಿಜರ 9ಲಕ್ಷ; ಇಷ್ಟು ಹುಟ್ಟಿಸಿದವು.

56. ಕಶ್ಯಪ ಮುನಿಗೆ ದಕ್ಷತನ್ನ 13ಮಂದಿ ಹೆಣ್ಣುಮಕ್ಕಳನ್ನು ಲಗ್ನಮಾಡಿ ಕೊಡಲಾಗಿ, ದನುಜದೈತ್ಯರು ದೇವತೆಗಳು ವುರಗಾದ್ಯರು ಮನುಜ ಮೊದಲಾದ ಯಾವತ್ತು ಪ್ರಜಾಸರ್ಗ ನಡಿತು.

57. ಈ ಪ್ರಕಾರ ಕಶ್ಯಪರ ಸೃಷ್ಠಿನಿಬಿಡಿಯಾಗಿ ತುಂಬಿತುಳಕಲು ನಿಲ್ಲಲು ಭೂಮಿಯಿಲ್ಲದಂತೆ ಆಗಲು ಬ್ರಹ್ಮನಾಜ್ಞೆಯಿಂದ ಮೃತ್ಯುದೇವತಿಯ ಪುಟ್ಟಿಸಲು ಮಗಳಾಗಿ ನಿಂತು ರೋದನಮಾಡಲು ನಿನ್ನನಾಶಕ್ಕೆ ಗುರಿ ಮಾಡಬೇಡ ನೆಂದು ಕೇಳಲಾಗಿ ಆಗ್ಗೆ ಪ್ರಾಣನಾಶಕ್ಕೆ.

58. ಜ್ವರಾದಿ ವುಳಿದ ರೋಗಗಳನ್ನು ವುದ್ಭವಮಾಡಿ ಮುಂದೆ ಈ ಮನ್ವಂತರ ಮುಗಿದಮೇಲೆ.

59. ಸ್ವಾಯಂಭುವು ಮನುಕಲ್ಪವಾದಮೇಲೆ ಸಾರ್ವೋಚಿಷ ಸೃಷ್ಠಿ.

## ಮನ್ವಂತರಗಳ ವಿಚಾರ

60. 1. **ಸ್ವಾಯಂಭುವು ಮನು:–** ಯಜ್ಞನಾಮಕ ಇಂದ್ರ(ದೇವರು) ಯಿಂದ್ರದೇವತಿಗಳು ತುಷಿತಗಣ. ಪುತ್ರರು ಪ್ರಿಯಂವ್ರತ, ವುತ್ತಾನಪಾದ. ಧರ್ಮಾಧಿಕಾರಿ ಋಷಿಗಳು ಮರೀಚಿ,ಭೃಗು, ಆಂಗೀರ,ಕ್ರತು, ಪುಲಸ್ತ್ಯ, ಪುಲಹ, ವಶಿಷ್ಟ. ಭಗವದವತಾರ ಕಪಿಲ, ದತ್ತ, ವರಾಹ.

61. 2. **ಸಾರೋಚಿಷಮನು:–** ಇಂದ್ರ ರೋಚನಾ (ವಾಯು) ದೇವತಿಗಳು ಮೇಲಿನಂತೆ; ಪುತ್ರರು ದ್ಯುನುತ್;ಸುಷೇಣ ರೋಚಿಷ ಪ್ರಮುಖ ಋಷಿಗಳು ಔಜ,ಸ್ತಂಭ,ದಯ, ಭಗವದ್ರೂಪಗಳು ವಿಭು,ಉಪೇಂದ್ರ.

62. 3. **ಉತ್ತಮಮನು:–** (ಪ್ರಿಯಂವ್ರತ ಪುತ್ರ) ಇಂದ್ರ ಸತ್ಯಜಿತು,ಯಮ ದೇವತೆಗಳು ಭದ್ರವೇದ ಶೃತ ಸತ್ಯ ಧರ್ಮಪುತ್ರುರು ಪನಸ,ಸಂಜಯ, ಧರ್ಮಾದಿ ಋಷಿಗಳು ಪ್ರಮೋದ ವಿಮದಾಶಕ್ತಿ: ಇತ್ಯಾದ್ಯಾವಶಿಷ್ಟಃ ಭಗವದ್ರೂಪ ಸತ್ಯ,ಶೇನ.

63. 4. **ತಾಪಸ :–** (ಭಗವದ್ರೂಪ ವುತ್ತಮನ ಭಾತೃ)ಇಂದ್ರ ತ್ರಿಶಿಖ(ಅಶ್ವಿನಿದೇವತ)ದೇವತೆಗಳು ಹರಿಃ ಭೂತಾಖ್ಯ ದಯಃ ಪುತ್ರರು ವುಷಾಖ್ಯಾತ ದಯ ಧರ್ಮಾದಿಋಷಿಗಳು ಜ್ಯೋಡಿರ್ಧಾನಾದನು; ಭಗವದವತಾರ ಹರಿ.

64. 5. **ರೈವತ (ತಾಪಸಾನುಜಃ):–** ಇಂದ್ರವಿಭು (ಅಶ್ವಿನದೇವತಿ) ದೇವತಿಗಳು ಭೂತಾಭ್ಯಾದಯಃ ಪುತ್ರರು ಬಲ, ವಿಂಥ್ಯಾದ್ಯಯ ಧರ್ಮಾದಿರುಷಿಗಳು, ಹಿರಣ್ಯರೋಮ, ವೇದಶಿರ ವೂರ್ಧ್ವ, ಬಾಹ್ಯದಯಃ, ಭಗವದವತಾರ ವೈಕುಂಠ.

65. 6. **ಚಾಕ್ಷುಷಮನು:–** (ಚಕ್ಷುಪುತ್ರ) ಇಂದ್ರ ಮಂದರನ್ನು ದೇವತೆಗಳು ಅಪ್ಯಾದಯು ಪುತ್ರರು ಪುರುಷ ಸುದ್ಯುವ್ನಾ ಭಗವದವತಾರ ಮತ್ಸ್ಯ, ಕೂರ್ಮ.ಅಜಿತ, ಧನ್ವಂತರಿ.

66. 7. **ವೈವಸ್ವತಮನು:–** (ಶ್ರಾದ್ಧಾದೇವ)ಇಂದ್ರ ಪುರಂದರ ದೇವತಿಗಳು ವಸು ರುದ್ರ ಆದಿತ್ಯ ಮರುದ್ಗಣ ಅಶ್ವಿನಿ ಪುತ್ರರು. ಇಕ್ಷ್ವಾಕು ಪ್ರಭುತಿಗಳು, ಋಷಿಗಳು, ಕಶ್ಯಪಾದ್ಯ ವಿಶ್ವಾಮಿತ್ರ ಗೌತಮ, ಜಮದಗ್ನಿ, ವಶಿಷ್ಠ, ಭಗವದವತಾರ ನರಸಿಂಹ,ವಾಮನ, ತ್ರಿವಿಕ್ರಮ, ಪರಶುರಾಮ, ರಾಮಕೃಷ್ಣ, ಬುದ್ಧ, ಕಲ್ಕಿ,ವ್ಯಾಸ.

67. 8. **ಸಾವರ್ಣಿಮನು:–** (ರವಿಪುತ್ರ) ಇಂದ್ರ ಬಲಿಚಕ್ರವರ್ತಿ ದೇವತೆಗಳು ಸುತಸಾ,ದಯ; ಪುತ್ರರು ನಿರ್ಮೋತ, ವಿರಜಾಸ್ಯಾದ್ಯಾಃ, ಋಷಿಗಳು ಗಾಲವ, ಕೃಪ, ಅಶ್ವತ್ಥಾಮ, ಪರುಶುರಾಮ, ವ್ಯಾಸ ಭಗದವತಾರಪ್ರಭು.

68. 9. **ದಕ್ಷಸಾವರ್ಣಿ:–** (ವರುಣಪುತ್ರ) ಇಂದ್ರ ಅದ್ಭುತ ದೇವತೆಗಳು ಪರಾದಯಃ ಪುತ್ರರು ದೃಷ್ಟಕೇತಾದಯೋ; ಋಷಿಗಳು ನನ್ನುಭಾ; ಭಗದವತಾರ ವೃಷಭಃ.

69. 10. **ಬ್ರಹ್ಮಸಾವರ್ಣಿ:–** ಇಂದ್ರ ರುದ್ರ ಶಂಭ. ದೇವತಿಗಳು ಸುಭಾಸನಾದ್ಯಾ; ಪುತ್ರರು ಭೂರಿಷೇಣಾದ್ಯಾ; ಋಷಿಗಳು; ಹವಿಷತ್ಪ್ರಮುವಾ; ಭಗದವತಾರ ವಿಷ್ವಕ್ಸೇನ.

70. 11. **ಧರ್ಮಸಾವರ್ಣಿ:–** ಇಂದ್ರ ವಿಧೃತ; ದೇವತೆಗಳು ವಿಹಂಗಮಾಧ್ಯಾ; ಪುತ್ರರು; ಅನಾಗತ; ಸತ್ಯ ಧರ್ಮ ದಯ, ಋಷಿಗಳು ಚಾರಣಾಯ: ಭಗದವತಾರ ಧರ್ಮಕೇತು.

71. 12. **ರುದ್ರಸಾವರ್ಣಿ:–** (ಮೇರುಸಾವರ್ಣಿ)ಇಂದ್ರ ಪದ್ಯತ (ರುತುಧಾಮ) ದೇವತೆಗಳು ಹರಿವಾದ್ಯಾ; ಮನುಪುತ್ರರು ದೇವಶ್ರೇಷ್ಠಾ ದಯಾ; ಋಷಿಗಳು ಅಗ್ನಿದ್ರ; ಕಾದಯಾಃ ಭಗದವತಾರ ಸ್ವಧಾಮ.

72. 13. **ದೇವಸಾವರ್ಣಿ:–** (ವೇದಸಾವರ್ಣಿ) ಇಂದ್ರದಿವಸತಿ ದೇವತಿಗಳು ಸುಕರ್ಮಾಧ್ಯಾ; ಮನುಪುತ್ರ ಚಿತ್ರಸೇನಾಧ್ಯಾ; ಋಷಿಗಳು ನಿರ್ಮೋಚಕಮುಖ; ಭಗವದವತಾರ ಯೋಗೇಶ್ವರ.

73. 14. **ಇಂದ್ರಸಾವರ್ಣಿ:-** ಇಂದ್ರರುಚಿ; ದೇವತೆಗಳು ಪವಿತ್ರಾದಯ; ಜಂತುವೀರಮ್ಯಾದ್ಯಾ; ಋಷಿಗಳು ಅಗ್ನಿರ್ಬಾಹು; ಶುಚಿ ಶುದ್ಧೋಮಾಘದಾದ್ಯಾ; ಭಗದವತಾರ ಬೃಹ.

ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು.

## ಶ್ರೀಮುಖ್ಯಪ್ರಾಣದೇವರ ಅವತಾರಗಳು

1. ಮರುತ; 2. ಮುಖ್ಯಪ್ರಾಣ; 3.ಧೃತಿ: 4.ಸ್ಮೃತಿ; 5.ಸುರವರ; 6.ಮಹಾಧ್ಯಾತ; 7.ಬಲವಿಜ್ಞಾತ; 8.ಗರಳ. 9.ಭಕ್ತಿ; 10.ಭೇಷಜ; 11.ವೇದಸ್ಥ; 12.ಸ್ವರವರ್ಣ; 13.ಜೀವೇಶ್ವರ; 14.ವಿಭಾಷಣ; 15.ವಿಶ್ವಚೇಷ್ಟತ; 16.ವೀರಭಯ; 17.ಭೀಮ; 18.ಅನಿಲ; 19.ಸ್ಥಿತಿ; 20.ವೈರಾಗ್ಯ; 21.ರೋಚನ; 22.ವಿಮುಕ್ತಾಗಾನಂದ; 23.ದಶಮತಿ; 24.ಅನಿಮಿಷ; 25.ಅನಿದ್ರ; 26.ಶುಚಿ; 27.ಸತ್ಯಾತ್ಮಕಶರೀರ; 28.ವಿಖ್ಯಾತ;

## ಪಂಚವೃತ್ತಿ ತ್ರಿವೃತ್ತಿ ಕರಣವಿಚಾರ

**ಮುಂದೆ ಪಂಚವೃತ್ತಿಕರಣ:-** ವಾಸುದೇವನಾದಂತಾಥ ಪರಮಾತ್ಮನು ಶ್ರೀದೇವಿಯಲ್ಲಿ ವಿಷ್ಣು ರೂಪನಾಗಿಯು ಭೂದೇವಿಯಲ್ಲಿ ಬ್ರಹ್ಮಾಂತರ್ಯಾಮಿ ಆಗಿಯು ದುರ್ಗಾದೇವಿಯಲ್ಲಿ ರುದ್ರಾಂತರ್ಯಾಮಿಯಾಗಿಯು ಸ್ಥೂಲಸೃಷ್ಟಿ ಮಾಡೋದರ ಕೋಸ್ಕರವಾಗಿ 24 ಜಡ ತತ್ವ ಗಳನ್ನು ಸಂಯೋಗಮಡಿ ಸಂಯುಕ್ತವಾಗಿ ಲೀಲಾಮಾತ್ರದಿಂದ ಕ್ರಮಾತ್ ತತ್ವಗಳನ್ನು ಭೂತಗಳನ್ನು ಕೂಡಿಸಿದನು. ಅವೇನಂದರೆ ಆಕಾಶಾದಿ ಭೂತಾನಾಂ ಪಂಚಾನಾಂ ಮೂಲವಾಸಿಷ ಅಂದರೆ ಮೂಲರಾಶಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ನೂರು ನೂರುಭಾಗವನ್ನು ತೆಗೆದು ಅವುಗಳನ್ನು ಅಯಿದುಭಾಗಮಾಡಿ, ಪ್ರತಿವಂದರಲ್ಲಿ ಯಿದರಂತೆ ಕೂಡಿಸಲು ಇದು ಪಂಚೀಕರಣವೆನಿಸುತ್ತದೆ. ಆಕಾಶ ಪಂಚಭೂತ ಸತ್ವಭಾಗ ಮಿಳಿತದಿಂದ ಅಂದರೆ ತೇಜೋಭಾಗದಿಂದ ಪಂಚಜ್ಞಾನೇಂದ್ರಿಯ. 2. ಆಕಾಶಾದಿ ಪಂಚಭೂತ ರಜೋಭಾಗ ಅಂದರೆ ಪೃಥ್ವಾಭಾಗದಿಂದ ಪಂಚಕರ್ಮೇಂದ್ರಿಯ. 3. ಆಕಾಶಾದಿ ಪಂಚಭೂತ ತಮೋಭಾಗದಿಂದ ಅಂದರೆ ಅಪ್ಪು ಭಾಗದಿಂದ ಪಂಚತನ್ಮಾತ್ರ ಹಾಗೇ ನಿರ್ಮಾಣಮಾಡಿದ ವಿವರ:- 1. ಪಂಚಜ್ಞಾನೇಂದ್ರಿಯ: ಆಕಾಶ ತೇಜೋ ಸತ್ವ ಭಾಗ ಶೋತ್ರ ದಿಗ್ದೇವತಾ ವಿಷ್ಣು. 2. ವಾಯು ತೇಜೋ ಸತ್ವ ಭಾಗತ್ವಕು ಅಹಂಕಾರಿಕ ಮಧುಸೂಧನ. 3. ತೇಜೋ

ತೇಜೋಸತ್ವಭಾಗ ಚಕ್ಷುವಿನ ಸ್ವಾನ್ನಾಮಕ ತ್ರಿವಿಕ್ರಮ. 4. ಅಪ್ಪುಃ ತೇಜೋಸತ್ವ ಭಾಗ ಜಿಂಹ್ವಾವರಣ ವಾಮನ. 5. ಪೃಥ್ವೀ ತೇಜೋ ಸತ್ವಭಾಗ ಘ್ರಾಣ ಅಶ್ವಿನಿಗಳುಶ್ರೀಧರ. 2. ಪಂಚಕರ್ಮೇಂದ್ರಿಯ:- ಅ) ಆಕಾಶ ಪೃಥ್ವಿರಜೋಭಾಗ -ವಾಕ್- ಅಗ್ನಿ- ಹೃಷೀಕೇಶ. ಆ) ವಾಯುಪೃಥ್ವಿರಜೋಭಾಗ- ಪಾಣಿ- ದಕ್ಷ- ಪದ್ಮನಾಭ. ಇ) ತೇಜಪೃಥ್ವಿರಜೋಭಾಗ - ಪಾದ- ಜಯಂತ - ದಾಮೋದರ. ಈ) ಅಪ್ಪುಪೃಥ್ವಿರಜೋಭಾಗ-ಉಪಸ್ಥ- ಸ್ವಾಯಂಭುವುಮನು-ವಾಸುದೇವ. ಉ)ಪೃಥ್ವಿ ಪೃಥ್ವಿರಜೋಭಾಗ -ಪಾಯು(ಗುದ)- ಮಿತ್ರನಾಮಕಸೂರ್ಯ- ಸಂಕರ್ಷಣ. 3. ಪಂಚತನ್ಮಾತ್ರಗಳು:- ಅ)ಆಕಾಶ-ಅಪ್ಪು-ತಮೋಭಾಗ-ಶಬ್ದ- ಬೃಹಸ್ಪತಿ,ಪ್ರಾಣ-ಪ್ರದ್ಯುಮ್ನ. ಆ)ವಾಯು- ಅಪ್ಪು- ತಮೋಭಾಗ -ಸ್ಪರ್ಶ- ಬೃಹಸ್ಪತಿ,ಅಪಾನ-ಅನಿರುದ್ಧ. ಇ)ತೇಜ-ಅಪ್ಪು-ತಮೋಭಾಗ□ರೂಪ- ಬೃಹಸ್ಪತಿ,ವ್ಯಾನ-ಪುರುಷೋತ್ತಮ. ಈ)ಅಪ್ಪು-ಅಪ್ಪು-ತಮೋಭಾಗ□ರಸ- ಬೃಹಸ್ಪತಿ,ಉದಾನ-ಅಧೋಕ್ಷಜ. ಉ)ಪೃಥ್ವಿ-ಅಪ್ಪು-ತಮೋಭಾಗ-ಗಂಧ- ಬೃಹಸ್ಪತಿ,ಸಮಾನ-ನಾರಸಿಂಹ.

ರಜೋಅಂಶದಿಂದ ಪೃಥ್ವಿವಾಯುಭಾಗದಿಂದ 1.ಪ್ರಾಣವಾಯು; 2.ಆಕಾಶವಾಯು; 3.ಸಮಾನವಾಯು; 4.ವ್ಯಾನವಾಯು; 5.ತೇಜವಾಯು; 6.ಉದಾನವಾಯು; 7.ಅಪಾನವಾಯು; ಪಂಚವೃತ್ತಿಮನ; ಪ್ರಭೋಧ; 1.ಆಕಾಶ- ಆಕಾಶಭಾಗದಿಂದ ಅಂತಃಕರಣ. 2.ವಾಯು-ಆಕಾಶಭಾಗದಿಂದ-ಮನಸ್ಸು ಅಂತಃಕರಣ. 3.ತೇಜ-ಆಕಾಶಭಾಗದಿಂದ-ಬುದ್ಧಿ ಅಂತಃಕರಣ. 4.ಅಪ್ಪು- ಆಕಾಶಭಾಗದಿಂದ- ಚಿತ್ತ ಅಂತಃಕರಣ. 5.ಪೃಥ್ವಿ-ಆಕಾಶಭಾಗದಿಂದ- ಅಹಂಕಾರ ಅಂತಃಕರಣ; ಇವು ಪಂಚಭೂತ ನಿತ್ಯಾಂಶದಿಂದ ಸೃಷ್ಠಿ ಅಂದರೆ ತೇಜೋಭಾಗದಿಂದ.

1. ಆಕಾಶಪ್ರಧಾನ ವಿಚಾರದಿಂದ ಅಂತಃಕರಣಪಂಚ ; 2. ವಾಯುಪ್ರಧಾನ ವಿಚಾರದಿಂದ ಪ್ರಾಣವಾಯು ಪಂಚಕ; 3. ತೇಜೋ ಪ್ರಧಾನ ವಿಚಾರದಿಂದ ಜ್ಞಾನೇಂದ್ರಿಯ ಪಂಚಕ; 4.ಅಪ್ಪುಪ್ರಧಾನ ವಿಚಾರದಿಂದ ಶಬ್ದಾದಿಪಂಚಕ;5.ಪೃಥ್ವಿಪ್ರಧಾನ-ವಿಚಾರದಿಂದ-ಕರ್ಮೇಂದರಿಯಪಂಚಕ; 1. ಜನ್ಮಾದಿ ಸಂಸ್ಕಾರಗಳು ಅಂತಃಕರಣ ಆಶ್ರಯ. 2. ಸಂಕಲ್ಪ ವಿಕಲ್ಪಗಳು ಮನೋಗತವಾದದ್ದು. 3.ಕಾರ್ಯಾಕಾರ್ಯ ನಿಶ್ಚಯ ಬುದ್ಧಿಗತವಾದದ್ದು. 4.ಕಾರ್ಯದ ಚಿಂತೆ ಚಿತ್ತಗತವಾದದ್ದು. 5. ಈಚಿಂತಾ ಕೃತ್ಯ ಅಹಂಕಾರಗತವಾದದ್ದು. ಇದೇವೆ ಪಂಚವೃತ್ತೀಕರಣ ಇದರಲ್ಲಿ ಮುಖ್ಯಮೂರು ದ್ರವ್ಯಗಳು ಎರಡು ಸೇರಿ ಇವೆ.

## ತ್ರಿವೃತ್ತೀಕರಣ

ಪೃಥ್ವಿ–ಅಪ್ಪು–ತೇಜ ಈಮೂರು ಮುಕ್ತಭೂತಗಳ ಸಂಯೋಗವೇ ತ್ರಿವೃತ್ತೀಕರಣವೆನಿಸುತ್ತದೆ. 1. ಪೃಥ್ವೀಭಾಗ: 4–ತೇಜ–1ಅಪ್ಪು–3ಭಾಗ ಇದಕ್ಕೆಪೃಥ್ವೀರಾಶಿಯಂತ ಕರೆಸಿಕೊಳ್ಳುತ್ತದೆ. 2.ಅಪ್ಪುಭಾಗ 4–ಪೃಥ್ವಿ 3–ತೇಜ–1ಭಾಗಇದುಅಪ್ಪುರಾಶಿ. 3.ತೇಜ4 ಭಾಗ ▯ ಅಪ್ಪು–3ಭಾಗ, ಪೃಥ್ವಿ 1ಭಾಗ;ಈಮೂರುರಾಶಿಗಳಲ್ಲಾದರು ವಾಯುಆಕಾಶ ಭಾಗವು ಅಗೋಚರವಾಗಿಕೂಡಿರುತ್ತದೆ. 4.ವಾಯುಭಾಗ–5–ತೇಜ–3–ಅಪ್ಪು–3 ಈ ಪ್ರಕಾರವಾಗಿ ವಾಯುಪೃಥ್ವ್ಯಾಕಾಶವನ್ನು ಸೃಷ್ಠಿಮಾಡಿದನು. 5. ದೇವತೆಗಳ ದೇಹಕ್ಕೆ ತೇಜಸ್ಸು–4 ಭಾಗ–ಅಪ್ಪು–3ಭಾಗ–ಪೃಥ್ವಿ–1ಭಾಗ; ತೇಜೋಮಯಶರೀರವಾದ ದೇವತೆಗಳಿಗೆಕಾರಣ. 6. ಪೃಥ್ವಿ–4ಭಾಗ. ಅಪ್ಪು–3ಭಾಗ,ತೇಜ–ಭಾಗ. ಇದು ಮನುಷ್ಯಶರೀರ ಮತ್ತು ಪೃಥ್ವಿಯಲ್ಲಿ ಜನಿಸತಕ್ಕ ಸಕಲಯೋನಿಗಳಿಗೆಕಾರಣ. 7. ವಾಯು–4ಭಾಗ.ಪೃಥ್ವಿ–2ಭಾಗ, ಅಪ್ಪು–1ಭಾಗ,ತೇಜ–1ಭಾಗ, ಇದು ಆಕಾಶದಲ್ಲಿ ಚರಿಸುವ ಪಕ್ಷಿಗಳಿಗೆ ಕಾರಣ, 8. ಅಪ್ಪು–4ಭಾಗ,ಪೃಥ್ವಿ–3ಭಾಗ, ತೇಜ–1ಭಾಗ, ಜಲಚರಪ್ರಾಣಿಗಳದೇಹ ದೇಹಕ್ಕೆ ಕಾರಣ. ಈಪ್ರಕಾರ ವಾಗಿ ಶ್ರೀಹರಿಯು 49ನೇವರುಷ ಕೊನೆಭಾಗದಲ್ಲಿ ಪಂಚಭೂತಗಳನ್ನು 24 ತತ್ವಗಳನ್ನು ಮಿಳಿತಮಾಡಿ ಬಹಿರ್‌ಬ್ರಹ್ಮಾಂಡದಲ್ಲೇ, ಬ್ರಹ್ಮಾದಿ ಸಕಲ ತತ್ವಾಭಿಮಾನಿಗಳ, ಮತ್ತು ಪಾವಕ,ಜಯಂತ ಪುಷ್ಕರಾಂತ ಕಲಾಭಿಮಾನಿದೇವತೆಗಳ ಸಹಿತ ತೇಜೋಮಯವಾದ ಸ್ಥೂಲ ಶರೀರವನ್ನು ಕೊಟ್ಟು ಬ್ರಹ್ಮಾಂಡ ಹುಟ್ಟುವಮೊದಲೆ ಕೊಟ್ಟನು. ಈಪ್ರಕಾರ ಬ್ರಹ್ಮದೇವರ ಪ್ರತಿವಂದು ದಿನದಲ್ಲಿ 14ಮಂದಿ ಮನು ಇಂದ್ರ ಋಷ್ಯಾದಿಗಳು ಭಗದವತಾರಗಳು. ಇದಲ್ಲದೇ ಬ್ರಹ್ಮಾಂಡ ಖರ್ಪರಉತ್ಪತ್ತಿ ಯಾದನಂತರ ಕಾಲವ್ಯವಧಾನದಿಂದ ಪಾತಾಳಾದಿ 14ಲೋಕಗಳ ಸೃಷ್ಠಿ ಮತ್ತು ಸಪ್ತದ್ವೀಪ, ಸಪ್ತಸಮುದ್ರ, ಶ್ವೇತದ್ವೀಪ, ಅನಂತಾಸನ, ವೈಕುಂಠಾದಿ ತ್ರಿಧಾಮಗಳಲ್ಲಿ ರಾಜೇಂಯ (ಶ್ರೀ)ಭೂದುರ್ಗಾ ಭಾಗಗಳ ಸೃಷ್ಠಿಸಿದ ವಿವರಗಳನ್ನು ಶ್ರೀವಿಜಯರಾಯರು ತಮ್ಮ ಸುಳಾದಿಗಳಲ್ಲಿ ಬಹುರಮ್ಯವಾಗಿ ವರ್ಣಿಸಿದ್ದಾರೆ. ಇಲ್ಲಿಗೆ ಶ್ರೀಹರಿ ಉಪಾಸನಾ ಕ್ರಮದ ಪ್ರಥಮಭಾಗ ಮುಗಿಯಿತು.

# ಶ್ರೀ ವಿಜಯರಾಯ ವಿಜಯತೆ

## ಶ್ರೀಗುರುಗೋಪಾಲದಾಸಾಚಾರ್ಯರಿಂದ ರಚಿತವಾದ
## ಶ್ರೀಹರಿ ಉಪಾಸನಾಕ್ರಮ ಭಾಗ-2.
## ಮಾನಸಪೂಜಾಕ್ರಮ (ವಿರಾಟ್‌ಪ್ರಜೆ)

ಶ್ರೀಗುರುಭ್ಯೋನಮಃ ಶ್ರೀರಾಘವೇಂದ್ರಗುರುಭ್ಯೋನಮಃ
ಶ್ರೀವಾದಿರಾಜಗುರುಭ್ಯೋನಮಃ

ಸೃಷ್ಟಿಚಿಂತನ ಮಾಡಿಕೊಂಡು, ಪುರುಷಯಜ್ಞ ಉಪಾಸನಾಮುಗಿಸಿ, ಕೈಕಾಲುತೊಳೆದು ಕೊಂಡು, ಅಷ್ಟದಿಗ್ಬಂಧನಮಾಡಿ, ಗುರುಮಂತ್ರಮಾಡಿಕೊಂಡು, ಶುದ್ಧಿಯನ್ನು ಮುಗಿಸಿ, ಮಾತೃಕಾನ್ಯಾಸ, ತತ್ವಾನ್ಯಾಸಮುಗಿಸಿಕೊಂಡು, ನಾಡಿನದಿಗಳಲ್ಲಿಸ್ನಾನಮಾಡಿ, ಬುದ್ಧಿಯಲ್ಲಿ ಕಪಿ, ಮಹಿದಾಸ, ದತ್ತಾತ್ರೇಯನನ್ನು ಆವಾಹನಮಾಡಿಕೊಂಡು, ಉಪಾಸನಕ್ಕೆಕೂಡಬೇಕು. **"ವಿರಾಟ್" ಪೂಜ ಪರಮಾತ್ಮನ ಬಾಲರೂಪದಿಂದ ಹಿಡಿದು ಮನುಷ್ಯರೂಪದವರೆಗು, ಪರಮಾತ್ಮನಯಾವರೂಪಗಳಲ್ಲಿ ಪ್ರೇಮಉಂಟೋ ಅಂಥಾರೂಪವನ್ನು ಕಣ್ಣುದಣಿಯ ನೋಡಿ, ಮನಸ್ಸಿನಲ್ಲಿ ಪ್ರತಿಮಾಮಾಡಿಕೊಂಡು, ಉಪಾಸನಾ ಮಾಡಬೇಕು. ಇಂಥಾರೂಪವೇ ಸ್ಥೂಲರೂಪ ಎಂತ ಎನಿಸಿಕೊಳ್ಳುತ್ತದೆ. ಈಸ್ಥೂಲ ಮಾನಸಿಕ ಪ್ರತಿಮಾದೇವರು ಅಲ್ಲ. ಆದರೆ ತೇಜೋಮಯರೂಪ ದೇವರು ತೇಜೋಮಯ ರೂಪಾಂತರ್ಗತನಾಗಿರುತ್ತಾನೆ. ಇಂಥಾತೇಜೋಮಯಮಾನಸಿಕ ರೂಪಾಂತರ್ಗತ ಪರಮಾತ್ಮನ ಸಾಕ್ಷಾತ್ಕರಿಸಿಕೊಳ್ಳುವುದೇ ಮಾನಸಿಕ ಪ್ರಜಾವೆನಿಸಿಕೊಳ್ಳುತ್ತದೆ.**

## ವಿರಾಟ್‌ಪೂಜೆ

ಪರಮಾತ್ಮನವಕ್ಷಸ್ಥಳದಲ್ಲಿ ಶ್ರೀಲಕ್ಷ್ಮೀದೇವೇರುಕುಳಿತುಕೊಂಡು, ಶ್ರೀಪರಮಾತ್ಮನ ಅಂಗಸೌಂದರ್ಯವನ್ನುನೋಡಿ ಆಲಂಬುದ್ಧಿಹೊಂದಿ ಮೂರುರೂಪಳಾದಳು. ಯಾವುದೆಂದರೆ ಶ್ರೀ, ಭೂ, ದುರ್ಗಾ. ಈ ಮೂರು ರೂಪಗಳಿಂದ ನೋಡಿ ಮನಸ್ಸು ಸ್ವಸ್ಥವಿಲ್ಲದೆ, ಪಾತಾಳಲೋಕದಕೆಳಗೆ ಶೇಷದೇವರು ಬ್ರಹ್ಮಾಂಡವನ್ನು ವಂದುಸಾಸಿವಿಯೋಪಾದೇಲಿ ಹೊತ್ತಿದ್ದಾರೆ. ಇಲ್ಲಿ ಲಕ್ಷ್ಮೀದೇವಿಯರು ಬಂದು ನೋಡಿ, ಶೇಷದೇವರು ಸಹಸ್ರಕಣ್ಣುಗಳಿಂದ ಪರಮಾತ್ಮನ ಸಹಜ ಸೌಂದರ್ಯವನ್ನು ನೋಡಿ ಆಲಂಬುದ್ಧಿಹೊಂದದೆ, ದೇವರು ಇನ್ನೂಸಹಸ್ರ ಕಣ್ಣುಗಳುಕೊಡಲಿಲ್ಲ ಎಂತ ಪರಮಾತ್ಮನನ್ನು ಸಹಸ್ರ ಬಾಯಿಯಿಂದ ಸ್ತೋತ್ರಮಾಡೋದನ್ನು ನೋಡಿ (ಲಕ್ಷ್ಮೀದೇವಿ) ಆಶ್ಚರ್ಯಹೊಂದಿದಳು. ಅಲ್ಲಿ

ತುಂಬುರ,ನಾರದರು ಶೇಷದೇವರ ಮಹಿಮಾವನ್ನು ಸತ್ಯಲೋಕದಲ್ಲಿ ಬ್ರಹ್ಮನ ಸಭೆಯಲ್ಲಿ ಕೂತಿದ್ದನ್ನು ರುದ್ರದೇವರುಕೇಳಿ ಬಹುಪರಿಯಿಂದ ಕೈಲಾಸದಲ್ಲಿ ಕುಳಿತು ತಪಸ್ಸನ್ನು ಮುಂದೆ ಶೇಷಪದವಿಕೋಸ್ಕರ ಮಾಡುತ್ತಿದ್ದಾರೆ.

1. ಶೇಷದೇವರ ಕೆಳಗೆ ಒಂದುಕೋಟಿಗಾವುದ ಕೆಳಗೆವಾಯುಕೂರ್ಮ;
2. ವಾಯುಕೂರ್ಮದ ಕೆಳಗೆ 3 ಕೋಟಿ ಗಾವುದ ಕೆಳಗೆ ವಿಷ್ಣುಕೂರ್ಮ;
3. ವಿಷ್ಣುಕೂರ್ಮ ಇದರ ಕೆಳಗೆ ಐದುಕೋಟಿ ಗಾವುದ ಮಂಡೂಕರೂಪಿಹರಿ;
4. ಮಂಡೂಕರೂಪಿಹರಿ ಇದರಕೆಳಗೆ 4ಕೋಟಿಗಾವುದಕೆಳಗೆ ಶಕ್ತಿನಾಮಕ ಹರಿ.
5. ಶಕ್ತಿನಾಮಕಹರಿ ಇದರಕೆಳಗೆ ಐದುಕೋಟಿ ಗಾವುದಕೆಳಗೆ ಕಾಲಾಗ್ನಿರುದ್ರನಾಮಕ ಹರಿ;
6. ಕಾಲಾಗ್ನಿರುದ್ರನಾಮಕಹರಿ ಇದರ ಕೆಳಗೆ ಐದುಕೋಟಿಗಾವುದ ಕೆಳಗೆವರಾಹರೂಪಿ ಹರಿ.
7. ವರಾಹರೂಪಿ ಹರಿ.

ಇಲ್ಲಿಂದ ಬ್ರಹ್ಮಾಂಡಖರ್ಪರ. ಅಚಿತು ಶೇಷದೇವರ ಕೆಳಗೆ ಇಪ್ಪತ್ತೈದುಕೋಟಿಗಾವುದ (25 ಕೋಟಿ ಖರ್ಪರ) ವಿರಾಡ್ರೂಪಿ ಪರಮಾತ್ಮನ ಅಳಿತಿ 25 ಕೋಟಿ 1 ಲಕ್ಷಗಾವುದ. ಅಂತೂ 50 ಕೋಟಿಗಾವುದ ಬ್ರಹ್ಮಾಂಡ ಇಂಥಾವಿರಾಡ್ರೂಪಿಪರಮಾತ್ಮನ ಪಾದದಲ್ಲಿ ಪದ್ಮರೇಖಾದಿಗಳು ಚಿಂತನೆ ಮಾಡಬೇಕು.

**1. ಚಕ್ರರೇಖಾಚಿಂತನ:–** ಪಾದದಲ್ಲಿ ಚಕ್ರರೇಖಾ ಯಾಕೆಧಾರಣಮಾಡಿದ್ದಾನೆ ಎಂದರೆ, ಯಾವನು ಈ ಚಕ್ರರೇಖಾ ಚಿಂತನೆ ಮಾಡುತ್ತಾನೆಯೋ ಅವನಿಗೆ ಅಜ್ಞಾನಾಖ್ಯತಮಸ್ಸು ಕಳೆದು ಜ್ಞಾನ ಪ್ರಕಾಶಮಾಡಿ ತನ್ನ ಮಾರ್ಗತೋರಿಸುತ್ತಾನೆ.

**2. ಶಂಖರೇಖಾಚಿಂತನೆ:–** ಶಂಖರೇಖಾ ಯಾಕೆಧಾರಣಮಾಡಿದ್ದಾನೆ ಎಂದರೆ, ಯಾರು ಶಂಖ ರೇಖಾಚಿಂತನೆ ಮಾಡುತ್ತಾರೆಯೋ ಶಿಕ್ಷಾದಿ ಷಡಂಗಯುಕ್ತ ನಾಲ್ಕುವೇದಗಳು, ಇತಿಹಾಸ ಸಕಲ ಪುರಾಣ, ಸಕಲ ಮಂತ್ರ,ಸಮಸ್ತ ಉಪನಿಷದಾದಿ ವಿದ್ಯಗಳನ್ನು ತಿಳಿಸುತ್ತಾನೆ.

**3. ಪದ್ಮರೇಖಾಚಿಂತನೆ:–** ಪದ್ಮರೇಖಾಚಿಂತನ ಮಾಡಿದರೆ. ಪದ್ಮ–ಪದ್ಮಜ–ಪದ್ಮನಾಭ, ಈಮೂರು ಮಂದಿಯಿಂದಲು, ಕುಟುಂಬಿಯಾಗಿ ಸರ್ವದಾ ವಾಸಮಾಡುತ್ತಾನೆ. ಮತ್ತು ಪದ್ಮದಲ್ಲಿ ಸಹಸ್ರದಳ ಗಳು ಇಂಥಾ ಸಹಸ್ರ

ತೀರ್ಥಗಳಲ್ಲಿ ಸ್ನಾನಮಾಡಿದಹಾಗಾಯಿತು. ಮತ್ತು ವಕ್ಷಸ್ಥಳದಲ್ಲಿದ್ದ ಲಕ್ಷ್ಮೀ ದೇವೇರು ಇಂಥಾ ಅಲೌಕಿಕಸೌಂದರ್ಯವನ್ನು ನೋಡಿ ನಿನ್ನಪಾದಪದ್ಮದಲ್ಲಿ ಸೇವೆಮಾಡುವ ತನ್ನ ಹೃತ್ಪದ್ಮದಲ್ಲಿ ಶೃತಿಪಾದ್ಯನಾದ ನಿನ್ನಮಹಿಮಾಧ್ಯಾನಿಸುತ್ತಾ ನಿನ್ನಸೇವಾ ಎರಡು ಕೈಗಳಿಂದ ಆಲಂಬುದ್ಧಿಹೊಂದದೇ ಮಾಡುತ್ತಾಇದ್ದಾರೆ.

4. **ಗದಾರೇಖಾಚಿಂತನೆ:–** ಗದಾರೇಖಾಚಿಂತನವಮಾಡಿದರೆ ಸ್ವರೂಪೋಪದ್ರವಗಳನ್ನು ಕೊಡತಕ್ಕ ದೈತ್ಯರು, ಪಿಶಾಚಾದಿಗಳು ಕೂಷ್ಮಾಂಡಾದಿ ಬ್ರಹ್ಮರಾಕ್ಷಸಾದಿಗಳನ್ನು ಚೂರ್ಣಮಾಡುತ್ತಾನೆ.

5. **ವಜ್ರರೇಖಾಚಿಂತನೆ:–** ವಜ್ರರೇಖಾಚಿಂತನ ಮಾಡಿದರೆ ಒಲಿದ ಸ್ವಹಸ್ತದಿಂದ ನಿನ್ನ ಪಾದ ಮಹಿಮೆಯನ್ನು ಬರೆದು ಧ್ಯಾನ ಮಾಡತಕ್ಕ ವೈಷ್ಣವಾಗ್ರೇಸರರ ಪಾದಸಮುದಾಯವನ್ನು ವೋದನ ಮಾಡುತ್ತಾನೆ.

6. **ಅಂಕುಶರೇಖಾಚಿಂತನೆ:–** ಅಂಕುಶರೇಖಾಚಿಂತನದಿಂದ ನಿನ್ನಮಹಾತ್ಮೆ,ಜ್ಞಾನ,ಶ್ರವಣಮಾಡಿ ನಿನ್ನ ಅರ್ಚಕರಿಗೆ, ಮತ್ತಗಜಗಳಂತೆ ಇರತಕ್ಕ ಅರಿಷಡ್ವರ್ಗಗಳನ್ನು ಖಚಿಡನಮಾಡುತ್ತಾನೆ.

7. **ಧ್ವಜರೇಖಾಚಿಂತನ:–** ಧ್ವಜರೇಖಾಚಿಂತನದಿಂದ ಪರಮಾದರದಿಂದ ನಿನ್ನಕಥಾಶ್ವರಣದಿಂದ ಸಂತುಷ್ಟರಾದ ನಿನ್ನಭಕ್ತರನ್ನು ಉತ್ಸುಕರನ್ನಾಗಿ ಮಾಡುತ್ತಾನೆ. ಮತ್ತು ಈಸ್ವಾಮಿ ಎಂಥಾವನೆಂದರೆ, ಚೆಲುವೆಗಂಗೆಯನ್ನು ಪೆತ್ತಪಾದ. ಅಹಲ್ಯೆಯನ್ನು ಉದ್ಧಾರ ಮಾಡಿದಪಾದ, ಗಯಾಸುರನು ತಲೆಯಮೇಲೆ ಇಟ್ಟುಕೊಂಡತಹಪಾದ,ಬಲಿಚಕ್ರವರ್ತಿ ತಲೆ ಮೆಟ್ಟಿದಂತಹಪಾದ. ಬ್ರಹ್ಮಾಂಡವನ್ನು ಈರಡಿಮಡಿ ಅಳಿದಪಾದ. ದುರ್ಯೋಧನನ್ನು ಸಿಂಹಾಸನದಿಂದ ಉರುಳಿಸಿದಪದ. ನಲಕೂಬರ, ಮಣಿಗ್ರೀವರನ್ನು ಉದ್ಧರಿಸಿದಪಾದ. ತೊಂಡೆಕಾಟ ಯಾದಂಥಾ ಮೃಗರಾಜನನ್ನು ಉದ್ಧರಿಸಿದಪಾದ. ಇದರತಳದಲ್ಲಿ (ಮೂಲದಲ್ಲಿ):–

1. **ಪಾತಾಳಲೋಕ:–** ಪಾತಾಳಲೋಕವನ್ನು ಧಾರಣಮಾಡಿದ್ದಾನೆ. ಇಂಥಾ ಪಾತಾಳಲೋಕದಲ್ಲಿ ಸರ್ಪರಾಜರುಗಳು ವಾಸುಕಿ, ಶಂಖ, ಮಹಾಶಂಖ, ಶ್ವೇತ,ಧನುಂಜಯ, ಧೃತರಾಷ್ಟ್ರ, ಶಂಖಚೂಡ,ಕಂಬಳ,ಸ್ವತರ, ಪ್ರಬಲ,ವಾತ, ಇತ್ಯಾದಿ ಖ್ಯಾತಿಯಾದ ಮಿಗಿಲಾದಸರ್ಪಶ್ರೇಷ್ಠ ರಾದವರು,5–10–100–1000 ಫಣಿಗಳಿಂದ ಯುಕ್ತರಾಗಿ ತಮ್ಮತಲೆಚುಮೇಲಿದ್ದ ಮಣಿಕಾಂತಿ ಯಿಂದ ನಿವೃತ್ತಿಮಾಡಿಕೊಂಡು ಅತಿಕೋಪಉಳ್ಳವರಾಗಿ ಭೀತಿತೋರುತಿದ್ದಾರೆ. ಇಷ್ಟು ಪಾತಾಳದ ಭೂಮಿಯದಪ್ಪ 10000 ಗಾವುದ.

**2. ರಸಾತಳಲೋಕ:–** ರಸಾತಳಲೋಕ ಪರಮಾತ್ಮನಪಾದದ ನಖದಿಂದ ಹುಟ್ಟಿದೆ. ಆಪಾದದ ನಖಗಳು ಎಂಥಾದ್ದು ಎಂದರೆ, ರತ್ನಕಾಂತಿಗೆ ಮಿಗಿಲಾದಂಥಾದ್ದು ಪೃಥ್ವಿ ಉತ್ಪಾದಕ ತದಾಶ್ರಯ ಭಕ್ತಜನಕೆ ಆಶ್ರಯವಾದಂತಾಪಾದ, ಧ್ವಜವಜ್ರಾಂಕುಶ ಶಂಖ, ಚಕ್ರ, ಗ್ದಾಪದ್ಮ ಲಾಂಛನ, ಸ್ವರ್ಗಾದಿ ಜನಕ ಜಾತಿ ಉದ್ಭವ, ತರುಣಾದಿತ್ಯಾವರಣಕಾಂತಿಗೆ ಮಿಗಿಲಾದದ್ದು. ಇಲ್ಲಿ ದೈತ್ಯರು ಕಾಲಕೇಯರು (ಕಲಿನಾಮಕ್ಯಚಿತಾ ದೇವಶತೃಗಳು, ಹಿರಣ್ಯಪುರವಾಸಿಗಳು) ಇತ್ಯಾದಿಜನರು ತೇಜೋವಂತರಾಗಿ ಪರಮಾತ್ಮನ ನಿಂದನ ಮಾಡುವವರಾಗಿ ಯೋಗಬಲದಿಂದ ವಂದುಬಿಲದಲ್ಲಿ ಇಷ್ಟುಮಂದಿ ವಾಸಮಾಡುತ್ತಾರೆ. ಯಾಕೆಂದರೆ ವೈಶ್ವಾನರನ ವಾಣ್‌ರೂಪ ಮಂತ್ರಭೀತಿಯಿಂದ, ಪ್ರಳಯದ ಭೀತಿಯಿಂದ, ಇಂದ್ರದೂತ ಸರಮಾದಿಂದ, ವೇದಮಂತ್ರಗಳಿಂದ ಖ್ಯಾತಿಹೊಂದಿರುತ್ತಾನೆ. ಇದು ಇಂದ್ರನಲ್ಲಿದ್ದ ವಂದುಶ್ವಾಸರೂಪ. ತನ್ನಾಮಕ ಹರಿತನ್ನವರೊಡನೆ ಪೂಜೆಗೊಳ್ಳುತ್ತಿರುವನು. ರಸಾತಳದ ಭೂಮಿದಪ್ಪ 10000 ಗಾವುದ.

**3. ಮಹಾತಳಲೋಕ:–** ಕದ್ರುದೇವಿ ಮಕ್ಕಳಾದ ಉರಗನಾಮಕರು ಬಹುಫಣಿಗಳುಳ್ಳ ಕ್ರೋಧವ ಶಾಂತಗುಣ ಪ್ರವಿಷ್ಠರಾದ ಕುಹಕ, ಕಾಲಿಯ,ಸುಷೇಣಾದಿ ಸರ್ಪಶ್ರೇಷ್ಠರು ತಮ್ಮ ಹೆಂಡರು ಮಕ್ಕಳಿಂದ ಸಹಿತ ಪ್ರಮತ್ತರಾಗಿರುತ್ತಾರೆ. ಹರ್ಷದಿಂದ ಹುಟ್ಟಿದೆ. ಮಹಾತಳಲೋಕದ ಭೂಮಿಯದಪ್ಪ 10000ಗಾವುದ.

**4. ತಳಾತಳಲೋಕ:–** ತಳಾತಳಲೋಕ ಪರಮಾತ್ಮನ ಜಂಘೆಯಿಂದ ಹುಟ್ಟಿದೆ. ದೈತ್ಯಶಿಲ್ಪಿಯಾದ ಮಯಾಸುರನೆಂಬ ರಾಕ್ಷಸ ಇಲ್ಲಿವಾಸ. ಇವನಿಂದ ಸೃಷ್ಟಿಸಲ್ಪಟ್ಟ ತ್ರಿಪುರಾಎಂಬೋ ಪಟ್ಟಣ ಪರಮಾತ್ಮನ ಚಕ್ರದಿಂದ ನಾಶವಾದಮೇಲೆ ಹರಪ್ರಸಾದಸಂಪಾದಿಸಿ ರುದ್ರದೇವರ ಪೂಜಾಮಾಡಿ ಅನುಗ್ರಹ ಪಡೆದು ಸುಖದಿಂದ ಭೀತಿರಹಿತನಾಗಿದ್ದಾನೆ. ತಳಾತಳಲೋಕದ ಭೂಮಿಚುದಪ್ಪ 10000 ಗಾವುದ.

**5. ಸುತಳಲೋಕ:–** ಸುತಳಲೋಕ ಕನ್ನಡಿಯಂತಿರುತಿಪ್ಪ ಜಾನ್ಮದ್ವಯದಿಂದ ಹುಟ್ಟಿದೆ. ಭೂಮಿದಪ್ಪ 10000 ಗಾವುದ. ಸಂಪನ್ನ ಸತ್ಕೀರ್ತಿ ಪ್ರತಾಪ ಸಜ್ಜನಶಿಖಾಮಣಿ–ಪುಣ್ಯಶ್ಲೋಕನಾದಂಥ **ಬಲಿ** ಚಕ್ರವರ್ತಿಇಲ್ಲಿ ವಾಮನಮೂರ್ತಿಯನ್ನು ಉಪಾಸನೆ ಮಡುತ್ತಿದ್ದಾರೆ. ಶ್ರೀವಾಮನಮೂರ್ತಿಯನ್ನು ಉಪಾಸನೆ ಮಾಡುತ್ತಿದ್ದಾರೆ. ಶ್ರೀವಾಮನರೂಪಿ ಪರಮಾತ್ಮ ಬಲಿಚಕ್ರವರ್ತಿಮನಿಮುಂದೆ ಗದಾ ಪಾಣಿಯಾಗಿ ನಿಂತಿದ್ದಾನೆ. ಈ ಬಲಿಚಕ್ರವರ್ತಿ ದಿಗ್ವಿಜಯಾರ್ಥಿಯಾಗಿ ಬಂದ ರಾವಣನನ್ನು ಪಾದಾಂಗುಟದಿಂದ ಹತ್ತುಸಹಸ್ರ

ಗಾವುದ ದೂರವಗಿದ. ಇಲ್ಲಿ ಒಂದು ಮನ್ವಂತರಕಾಲ ಭಗವದಾರಾಧನೆ ಮಾಡುತ್ತಾ ಇರುತ್ತಾನೆ.

6. **ವಿತಳಲೋಕ:**– ವಿತಳಲೋಕ ಭೂಮಿದಪ್ಪ 10000 ಗಾವುದ. ತೊಡೆಗಳಿಂದ ಹುಟ್ಟಿದೆ. ಇಲ್ಲಿ ಇಂದಿರಾಶ್ರಯ ವೈಕುಲಜನ್ಯಕರಾಶ್ರಯ ಮಯನಿಂದ ಜನಿಸಿದೆ. ಬಲನೆಂಬ ರಾಕ್ಷಸ ತನ್ನಿಂದ ಜನಿಸಿದ 96 ಮಾಯಗಳಿಂದ ಕೂಡಿದವನು. ಇವನಲ್ಲಿ ಮೋದುವ ಜನಸಂದೋಹ ಉಂಟು. ಬಲನೆಂಬ ರಾಕ್ಷಸ ಆಕಳಿಸಿದರೆ ಪುಂಸಾದಿ ಸ್ತ್ರೀಯರು ಉದ್ಭವರಾಗುವರು. ಮಂದಹಾಸದಿಂದ ಪುರುಷರೊಡನೆ ಮನಬಂದಂತೆ ಕ್ರೀಡಿಸುವರು. ಅನುರಾಗದಿಂದ ಇಂದುಮೌಳಿ ಇಲ್ಲಿ ರುದ್ರ ದೇವರು ಹಾಟಕೇಶ್ವರ ಎಂತ ಹೆಸರು. ಹಾಟಕೇಶ್ವರ ರುದ್ರದೇವರು ಭೂತಗಣಗಳಿಂದಯುಕ್ತರಾಗಿ. ಪ್ರಜಾಸೃಷ್ಠಿಮಾಡಲು ಉದ್ದೇಶ, ಪಾರ್ವತಿಯಿಂದ ಯುಕ್ತನಾಗಿರುತ್ತಾನೆ. ಪಾರ್ವತೀಪರಮೇಶ್ವರ ಸಂಯೋಗದಿಂದ ಹಾಟಕಾಸ್ಯನದಿ ಇಲ್ಲಿ ಹರಿಯುತ್ತದೆ. ಆನದಿ ಉಭಯ ತೀರದಲ್ಲಿ ಗಾಳಿಬಿಸಿಲಿನಿಂದ ಗಟ್ಟಿಯಾದಮಣ್ಣು ಭಂಗಾರ. ಈಭಂಗಾರದ ಆಭರಣಗಳಿಂದ ದೈತ್ಯಾಗ್ರೇಸರರು ಸ್ತ್ರೀಯರಿಂದಯುಕ್ತರಾಗಿ ಶೋಭಿಸುತ್ತಾರೆ. ಇಲ್ಲಿಹುಟ್ಟಿದವರು ಹಾಟಕಾಸ್ಯ ರಸದಿಂದ ಮದಹುಟ್ಟಿ 1000 ಆನೆಬಲವುಳ್ಳವರಾಗಿ ನಾನೇ ಈಶ್ವರನೆಂದು ಮಧಾಂಧರಾಗಿರುತ್ತಾರೆ.

7. **ಅತಳಲೋಕ:**– ಅತಳಲೋಕ ಪರಮಾತ್ಮನ ತೊಡೆಗಳ ಮೇಲುಭಾಗದಿಂದ ಹುಟ್ಟಿದೆ. ಈಲೋಕದ ಭೂಮಿಚುದಪ್ಪ 10000 ಗಾವುದ. ಅರ್ಪ, ಮೃಗ ಪಶು ಜಾತಿ ಉತ್ಪತ್ತಿಸಿರೋಣದಿಂದ ಉನ್ನತವನಗಲು ಕದ್ರುಸುತರು, ದೈತ್ಯದಾನವರು ವಾಸವಾಗಿ ಬಂಧುಗಳಸಂಗಡ ಇರುತ್ತಾರೆ.ಮಯನಸಹಾಯದಿಂದ ನಿರ್ಮಿತವಾದ ನವರತ್ನಖಚಿತ ಗೋಪುರಗಳು, ಮನಿಗಳು, ಉಪ್ಪರಿಗೆಗಳು ಚತುರಂಗ ಮೊದಲಾದ ಶೃಂಗಾರಸ್ಥಳಗಳು, ಮಿಥುನೀಭಾವವುಳ್ಳ ಮೃಗಪಕ್ಷಿ ಜಾತಿಗಳು. ಶತಪತ್ರ ಮೊದಲಾದ ಪುಷ್ಪಗಳು ಉಳ್ಳಂಥಾದ್ದು ಇಲ್ಲಿವಾಸ. ಇದುಲೋಕಕ್ಕೆ 6 ಸಂಧಿ ಯಾಗುತ್ತದೆ. ಸಂಧಿ ಒಂದಕ್ಕೆ 500 ಗಾವುದ. ಅಚಿತು ಆರುಸಂಧಿಗೆ 3000 ಸಾವಿರ ಗಾವುದವಾಗುತ್ತದೆ.

8. **ಭೂಲೋಕ:**– ಭೂಮಿದಪ್ಪ 16000 ಗಾವುದ ಮೇರು ಪರ್ವತ 16000ಗಾವುದ ವಳಗೆ ಹೋಗಿದೆ. ಇದು ಅತಳದಲ್ಲಿ ಕಾಣಿಸುತ್ತದೆ. ಪರಮಾತ್ಮನ ಕಟಿ ಪ್ರದೇಶದಿಂದ ಹುಟ್ಟಿದೆ. ಜಾಂಬೂನದಿವಸನ. ಸ್ವರ್ಣಮಂಜೀರ, ಜಘನರವಿನಂತೆ ಒಪ್ಪುವ ನಾನಾಪ್ರಕಾರದಲ್ಲಿ ನವಖಂಡ ವುಳ್ಳ

ಜಂಬೂದ್ವೀಪಮಿಗಿಲಾದ ಭುವನರಾಶಿಯೊಳು, ಅಲ್ಲಿಗಲ್ಲಿ ದ್ವೀಪವಿವರ. ಪರ್ವತನದಿಗಳು, ಕರ್ಮಸಾಧನೆಮಾಡುವ ಮೃಗ,ಪಕ್ಷಿ,ಮಾನವರು, ದಿವಿಜದಾನವರ ಅವತಾರಗಳಾಗುವವು. ತವಕದಿಂದ ಶ್ರೀಹರಿ ಅವತಾರಗಳು ಉಂಟು. ದಿವಾರಾತ್ರಿಯಲ್ಲಿ ಸಿದ್ಧಪವನಮಧ್ಯ ಸರ್ವರು ಚಿಂತನಮಾಡಬೇಕು.

9. **ಭುವರ್ಲೋಕ:-** ಇದು ಪರಮಾತ್ಮನ ನಾಭಿಯಿಂದ ಹುಟ್ಟಿರುತ್ತದೆ. ಇದಕ್ಕೆ ಉಪಸರ್ಗ ಎಂತ ಹೆಸರು. ಅಂತರಿಕ್ಷಲೋಕ ಮೇಘಾದಿಮಂಡಲ ಉಕ್ತಕ್ರಮದಿಂದ ಯೋಜನಾ ಬೇಧದಿಕ್ಪಾಲಕರು ಉಂಟು. ಸರ್ವದೇವತೆಗಳು ಲಕ್ಷ್ಮೀರಮಣನ ಸೇವೆ ಮಾಡುತ್ತಾರೆ.

## ಶಿಂಶುಮಾರ ಪರಮಾತ್ಮನ ವಿಚಾರ

ಮೇರುಪರ್ವತಕ್ಕೆ ಆಧಾರನಾಗಿ ಶಿಂಶುಮಾರರೂಪಿ ಪರಮಾತ್ಮನಿದ್ದಾನೆ. (ಅನಂತ ಶಕ್ತಿಗಳನ್ನು ಧರಿಸಿದ್ದಾನೆ) ಶಿಂಶುಮಾರರೂಪ 36ಲಕ್ಷಗಾವುದ. ಬಾಲ 12 ಲಕ್ಷಗಾವುದ, ದೇಹ 12ಲಕ್ಷ ಗಾವುದ, ಕೊಂಡಿಗಳು 12ಲಕ್ಷಗಾವುದ. ಅಂತು 36 ಲಕ್ಷಗಾವುದ.ಇಂಥಾ ಶಿಂಶುಮಾರನಲ್ಲಿ ಸಕಲ ಜ್ಯೋತಿಶ್ಚಕ್ರ ಧಾರಣ, ತಲಿಕೆಳಗೆಮಾಡಿ ಬಲಭಾಗಕ್ಕೆ ಕೊಂಡಿ ಬಗ್ಗಿ ಶಿಂಶುಮಾರಮೂರ್ತಿ ಇದ್ದಾನೆ. ಬಾಲಾಗ್ರದಲ್ಲಿ ಧೃವರಾಯ-ಧೃವಮಂಡಲ. ಬಾಲಮಧ್ಯದಲ್ಲಿ ಶಕ್ತಿಧರ, ಪ್ರಜಾಪತಿ, ಇಚಿದ್ರಧರ್ಮ,ಅಗ್ನಿ, ಪುಚ್ಛಾಮೂಲದಲ್ಲಿ ಧಾತಾವಿಧಾತ, ಟೊಂಕದಲ್ಲಿ-ಸಪ್ತೃಋಷಿಗಳು, ದಕ್ಷಿಣ ಪಾರ್ಶ್ವದಲ್ಲಿ ನಕ್ಷತ್ರಗಳು, ಸರ್ವಭಾಗದಲ್ಲಿ ದಕ್ಷಿಣಾಯನಾದಿ ಕಾಲಗಳು. ಪೃಷ್ಠಭಾಗ ಅಜವೀಧಿ- ಆಕಾಶಗಂಗ, ಉದರದಲ್ಲಿ ಪುನರ್ವಸು-ಪುಷ್ಯಮಿ, ದಕ್ಷಿಣವಾಮಶ್ರೇಣಿಗಳಲ್ಲಿ ಆರಿದ್ರ, ಆ ಈದಕ್ಷಿಣವಾ,ಪಾದದಲ್ಲಿ ಅಭಿಜಿತ್-ಉತ್ತರಾಷಾಢ, ದಕ್ಷಿಣವಾಮನಾಶಿಕಾದಲ್ಲಿ ಶ್ರವಣಾ-ಪೂರ್ವಾಷಾಢ, ದಕ್ಷಿಣ ವಾಮನೇತ್ರಗಳಲ್ಲಿ ಧನಿಷ್ಠಾ-ಮೂಲ, ದಕ್ಷಿಣ ವಾಮಸ್ಕಂಧಭಾಗದಲ್ಲಿ ಮಖಾ-ಪುಬ್ಬ-ಉತ್ತರ-ಹಸ್ತ-ಸ್ವಾತಿ-ವಿಶಾಖ-ಅನೂರಾಧ (9ನಕ್ಷತ್ರಗಳು) ದಕ್ಷಿಣಾಯನ ವಾಮಪಾರ್ಶ್ವಗಳಲ್ಲಿ ತಿಳಿಯತಕ್ಕದ್ದು. ಪೂರ್ವಾಭಾದ್ರ-ಉತ್ತರಾಭಾದ್ರ-ರೇವತಿ-ಅಶ್ವಿನಿ-ಭರಣಿ- ಕೃತ್ತಿಕಾ-ರೋಹಿಣಿ-ಮೃಗಶಿರಾ 98ನಕ್ಷತ್ರಗಳು). ಶಿಂಶುಮಾರ ಪರಮಾತ್ಮನ ದಕ್ಷಿಣಪಾರ್ಶ್ವದಲ್ಲಿ ತಿಳಿಯತಕ್ಕದ್ದು. ದಕ್ಷಿಣವಾಮದೇಹಗಳಲ್ಲಿ ಶತಭಿಷ-ಜೇಷ್ಠಾ, ಉತ್ತರಾಯನದಲ್ಲಿ ಅಗಸ್ತ್ಯರು ಅವನ ಧ್ಯಾನದಲ್ಲಿ ಯಮದೇವರು. ಮುಖದಲ್ಲಿ ಅಂಗಾರಕ, ಉಪಥದಲ್ಲಿ ಶನಿ, ಹೆಗಲಿನಲ್ಲಿ ಬೃಹಸ್ಪತಿ, ವಕ್ಷಸ್ಥಳದಲ್ಲಿ ಸೂರ್ಯ, ಹ್ಲದಯದಲ್ಲಿ ನಾರಾಯಣ-ಮನಸ್ಸಿನಲ್ಲಿ ಚಂದ್ರ ನಾಭಿಯಲ್ಲಿಶುಕ್ರ, ಸ್ತನಯುಗ್ಮಗಳಲ್ಲಿ ಅಶ್ವಿನೀದೇವತೆಗಳು. ಪ್ರಾಣೋಪಾನದಲ್ಲಿ

ಬುಧ,ಗಳ (ಕಂಠ)ದಲ್ಲಿ ರಾಹು. ಸರ್ವಾಂಗದಲ್ಲಿ ಕೇತು. ರೋಮಗಳಲ್ಲಿ ಸಮಸ್ತ ನಕ್ಷತ್ರಗಳು.

## 28 ನಕ್ಷತ್ರಗಳಿಗೆ ನಿಯಾಮಕ ಭಗವದ್ರೂಪಗಳು.

| ಸಂಖ್ಯೆ | ನಕ್ಷತ್ರ | ಭಗವದ್ರೂಪ | ಸಂಖ್ಯೆ | ನಕ್ಷತ್ರ | ಭಗವದ್ರೂಪ |
|---|---|---|---|---|---|
| 01 | ಅಶ್ವಿನಿ | ಋಷಭ | 15 | | ಹರಿ |
| 02 | ಭರಣಿ | ಕಪಿಲ | 16 | | ಶ್ರೀಕೃಷ್ಣ |
| 03 | ಕೃತ್ತಿಕಾ | ಯಜ್ಞ | 17 | | ಧನ್ವಂತರಿ |
| 04 | | ಹಯಗ್ರೀವ | 18 | | ಸನತ್ಕುಮಾರ |
| 05 | | ಹಂಸಗರ್ಭ | 19 | | ಅಜಿತ |
| 06 | | ತಾಪಸ | 20 | | ನಾರಾಯಣ |
| 07 | | ಧರ್ಮಕೇತು | 21 | | ಮೋಹಿನಿ |
| 08 | | ವೇಕುಂಠ | 22 | | ಯೋಗೇಶ್ವರ |
| 09 | | ದತ್ತಾತ್ರೇಯ | 23 | | ಉರುಕ್ರಮ |
| 10 | | ಪೃಶ್ನೀಗರ್ಭ | 24 | | ಬೃಹದ್ಭಾನು |
| 11 | | ಸಾರ್ವಭೌಮ | 25 | | ಸ್ವಧಾಮ |
| 12 | | ನಾರಾಯಣ | 26 | | ಶಿಂಶುಮಾರ |
| 13 | | ಶಶಿವರಣ | 27 | | ವಾಸ್ತವ್ಯಾನಚಿದ |
| 14 | | ವೈಕುಂಠ | 28 | | ಮಹಿದಾಸ |
| | | | 29 | | ರಾಜರಾಜೇಶ್ವರ |

ಇಂಥಾ ಶಿಂಶುಮಾರ ಮೂರ್ತಿಯನ್ನು ಯಾರು ಧ್ಯಾನಮಾಡುತ್ತಾರೋ ಅದರ ಫಲ:

**1. ಶ್ಲೋಕ :**

॥ ಗ್ರಹರಕ್ಷಿತಾಂ ಕಾಮ ಯಮಾದಿ ದೈವಿಕಂ।
ರೂಪಂಹರೇರ್ಮಂತ್ರಂ ಕಲತಃಶ್ರೀ ಕಾಲಂ।
ನಮಶ್ಯಸ್ತ ವತೋ ನಶ್ವರೇ ವೈಸ್ತಮಂತ್ರಕಾಲಂ । ಕೃತಮಂಶುಪಾಪಂ ॥

## ಅಂತರಿಕ್ಷಲೋಕ ವಿಸ್ತೀರ್ಣ

ಅಂತರಿಕ್ಷಲೋಕದ ವಿಸ್ತೀರ್ಣ ವಂದುಕೋಟಿಗಾವುದ ಭೂಲೋಕದಿಂದ ಸ್ವರ್ಗಲೋಕಕ್ಕೆ. 51 ಲಕ್ಷಗಾವುದ ಭೂಮಿಯಿಂದ ಮೇಲಕ್ಕೆ ಮೇಘಮಂಡಲ. ಯಕ್ಷ,ರಾಕ್ಷಸ, ಸಿದ್ಧ,ಚಾರಣ, ವಿದ್ಯಾ ಧರ, ಗಂಧರ್ವಲೋಕಗಳು. ಸತ್‌ಲೋಕ ಗಂಧರ್ವಲೋಕಕ್ಕೆ ಶೇರಿ ವಂದು ಲಕ್ಷಗಾವುದ. ಸೂರ್ಯಮಂಡಲ,ಚಂದ್ರಮಂಡಲ, ನಕ್ಷತ್ರಮಂಡಲ ವಂದೊಂದು ಲಕ್ಷ ಪ್ರಕಾರಗಳು. ಶುಕ್ರ,ಬುಧ,ಮಂಗಳ, ಗುರು,ಶನಿಮಂಡಲಗಳು ವಂದೊಂದು ಎರಡು ಲಕ್ಷಗಾವುದ ಪ್ರಕಾರ. ಸಪ್ತಋಷಿಮಂಡಲ 11 ಲಕ್ಷಗಾವುದ. ಧೃವಮಂಡಲ 13ಲಕ್ಷಗಾವುದ. ಸ್ವರ್ಗಲೋಕ 13ಲಕ್ಷಗಾವುದ. ಸ್ವರ್ಗಲೋಕ 13 ಲಕ್ಷಗಾವುದ. ಅಂತೂ 51 ಲಕ್ಷಗಾವುದ.

**10. ಸ್ವರ್ಗಲೋಕ:–** ಸ್ವರ್ಗಲೋಕ ಪರಮಾತ್ಮನ ಹೃದಯದಿಂದ ಹುಟ್ಟಿದೆ. ಇದು ವಂದು ಕೋಟಿ ಗಾವುದ ವಿಸ್ತಾರ. ಪರಮಾತ್ಮನ ಹೃದಯ ತದಾಶ್ರಯ ತದ್ಭಿನ್ನ, ಇಂದ್ರ ಉಪೇಂದ್ರ ರೂಪಿ ಪರಮಾತ್ಮನನ್ನ ಪ್ರಜೆಮಾಡುತ್ತಾನೆ. ಐರಾವತ,ಕಾಮಧೇನು, ಕಲ್ಪವೃಕ್ಷ, ಉಚ್ಚೈಶ್ರವ, ಶಚೀದೇವೇರಿಂದ, ವಡಗೂಡಿ ಸಾರಥಿ ಮಾತಲೆಯಿಂದ ವಡಗೂಡಿ ಅಮರಾವತಿ ಪಟ್ಟಣ ನಂದನವನ, ಚೈತ್ರರಥ–ವೈಭ್ರಾಜಿಕ, ಸರ್ವತೋಭದ್ರವನಗಳ ವಿಹಾರ ಇತ್ಯಾದಿ ಅನುಭವ ದಿಂದ ಇದ್ದಾನೆ. ಸ್ವರ್ಗವಾಸಿಗಳು ಇಂದ್ರನನ್ನು ನಾನಾರೀತಿಯಿಂದ ಪೂಜಿಸುತ್ತಾರೆ.

**11. ಮಹರ್ಲೋಕ:–** ಮಹರ್ಲೋಕ ಇದು ಪರಮಾತ್ಮನ ವಕ್ಷಸ್ಥಳದಿಂದ ಹುಟ್ಟಿದೆ. ಇದರ ವಿಸ್ತೀರ್ಣ 16ಕೋಟಿಗಾವುದ. ಸ್ವರ್ಗದಿಂದ ಮಹರ್ಲೋಕಕ್ಕೆ 75ಲಕ್ಷಗಾವುದ. ಇಲ್ಲಿ ಇಂದ್ರದೇವರು ಪ್ರಭು. ಇಲ್ಲಿ ಸಮಸ್ತದೇವತೆಗಳು, ನಾರದಾದಿಗಳು ಪ್ರದ್ಯುಮ್ನನನ್ನು, ಅನಿರುದ್ಧ ನನ್ನು ಉಪಾಸನೆ ಮಾಡುವರು.

**12. ಜನೋಲೋಕ:–** ಜನೋಲೋಕ ಇದು ಪರಮಾತ್ಮನ ಕಂಠದಿಂದ ಹುಟ್ಟಿದೆ. ಇದರ ವಿಸ್ತೀರ್ಣ 16ಕೋಟಿ ಗಾವುದ. ಮಹರ್ಲೋಕದಿಂದ

ವಂಮುಕೋಟಿ ಹನ್ನೆರಡುವರೆಲಕ್ಷ ಗಾವುದವಿದೆ. ಇಲ್ಲಿಮೈತ್ರೇಯರು,ಸನಕಾದಿಗಳು, ರುದ್ರಾಧಿಪತ್ಯದಲ್ಲಿದ್ದಾರೆ. ಬೃಹಸ್ಪತ್ಯಾ ಚಾರ್ಯರು ಇಲ್ಲಿವಾಸ. ಶಕ್ರ್ಯಾದಿ ದೇವತೆಗಳು ಸಮಸ್ತ ಪ್ರಮಥಗಣಗಳಿಂದ ಪೂಜಾಸ್ತೋತ್ರ ಗಳು ಕೊಳ್ಳುತಿಪ್ಪ. ಇಲ್ಲಿ ಚಿತ್ರವನಗಳು ವಿಹಾರಕ್ಕಾಗಿ ಉಂಟು. ವಿಚಿತ್ರಧ್ವನಿ ಮಾಡುವ ಖಗಜಾತಿ ಇದೆ.

13. **ತಪೋಲೋಕ:**–ತಪೋಲೋಕದ ವಿಸ್ತೀರ್ಣ 10ಕೋಟಿಗಾವುದವಿದೆ. ಇಲ್ಲಿಸಕಲ ಋಷಿ ಗಳಸಂಗಡ ರುದ್ರದೇವರು ಬ್ರಹ್ಮದೇವರ ಆಧೀನದಲ್ಲಿದ್ದಾರೆ. ಜನೋಲೋಕದಿಂದ ವಂದು ಕೋಟಿ 68ಲಕ್ಷ 75 ಸಾವಿರಗಾವುದವಿದೆ. ರುದ್ರದೆವರು ನರಸಿಂಹದೇವರ ಪೂಜಾ ಮಾಡುತ್ತಾರೆ. ಗಣಪತಿ ಷಣ್ಮುಖರ ಸಂಗಡ ಇಂದ್ರದೇವರಿಂದಲು ಸ್ತೋತ್ರಪೂಜಾದಿಗಳು ರುದ್ರದೇವರು ಮಾಡಿಸಿಕೊಳ್ಳುತ್ತಿದ್ದಾರೆ. ಎಲ್ಲಾದೇವತೆಗಳು ಬ್ರಹ್ಮದೇವರನ್ನು ನೋಡಬೇಕೆಂದರೆ ರುದ್ರದೇವರದ್ವಾರಾ ಇಲ್ಲಿ ನೋಡಬೇಕು. ಭ್ರೂಮಧ್ಯದಿಂದ ಹುಟ್ಟಿದೆ.

**14. ಸತ್ಯಲೋಕ:**– ಸತ್ಯಲೋಕದ ವಿಸ್ತೀರ್ಣ ಕೋಟಿಗಾವುದ. ತಪೋಲೋಕದಿಂದ ಸತ್ಯ ಲೋಕಕ್ಕೆ 4ಕೋಟಿ 6ಲಕ್ಷ 25ಸಾವಿರ ಗಾವುದವಿದೆ. ಇಲ್ಲಿ ಬ್ರಹ್ಮದೇವರು ಪರಮಾತ್ಮನಲ್ಲಿ ಅನಂತಾನಂತರೂಪ ಧ್ಯಾನಮಾಡುತ್ತಾರೆ. ಇಲ್ಲಿ ವಾಯುದೇವರು ಮರುದ್ಗಣಗಳಿಂದ ಪ್ರಜೆ ಗೊಳುತಿಪ್ಪರು. ವಿರಜಾನಾಮಕದಿಂದ ಗಂಗಾಹರಿ ವರ್ತಮಾನಕಳೆದು, ಭಜಕರ ಪಾಪ ಭೂಲೋಕದಲ್ಲಿ ಕಳೆಯುತ್ತಾ ವಾಸಮಾಡ್ಯಾಳೆ.ಸತ್ಯಲೋಕ ಪರಮಾತ್ಮನ ಶಿರಸ್ಸಿನಿಂದ ಹುಟ್ಟಿದೆ.

**ವೈಕುಂಠಲೋಕ:**– ವೈಕುಂಠಲೋಕದ ವಿಸ್ತೀರ್ಣ 28ಕೋಟಿಗಾವುದ. ಸತ್ಯಲೋಕದಿಂದ ಎಂಟುಕೋಟಿ ಹನ್ನೆರಡುವರೆ ಲಕ್ಷ ಗಾವುದವಿದೆ. ವೈಕುಂಠ ಪರಮಾತ್ಮನ ಮುಕುಟ ದಿಂದ ಹುಟ್ಟಿದೆ. ಇಲ್ಲಿ ಮೂರುಭಾಗಗಳು ಶ್ರೀ,ಭೂ,ದುರ್ಗಾತ್ಮಕ ವಾದದ್ದು. ಇದರೊಳಗೆ ಶ್ರೀಭಾಗ ಮತ್ತು ಭೂಭಾಗದಲ್ಲಿ ಕೆಲವು ನಿತ್ಯಭಾಗಗಳು. **ಪ್ರಳಯಕಾಲದಲ್ಲಿ ಶ್ರೀಭಾಗಕ್ಕೆ ನಾಶವಿಲ್ಲ ಮಿಕ್ಕಾದಕ್ಕೆ ನಾಶ ಉಂಟು.**

**ಶ್ರೀಭಾಗದ ವಿವರ:**– ಶ್ರೀಭಾಗದಲ್ಲಿ ಎರಡು ಪ್ರಕಾರ.ಮೊದಲನೇ ಪ್ರಾಕಾರ 4 ಕೋಟಿಗಾವುದ ವಿಸ್ತಾರ. ಎರಡನೇಯದು 12 ಕೋಟಿವಿಸ್ತಾರ. ಎರಡನೇ ಪ್ರಾಕಾರದಲ್ಲಿ ಮತ್ತೂ ಏಳು ಪ್ರಾಕಾರಗಳು ಉಂಟು.

| | |
|---|---|
| ಮೊದಲನೇ ಪ್ರಾಕಾರದಲ್ಲಿ | ಕರ್ಮಜದೇವತೆಗಳು |
| ಎರಡನೇ ಪ್ರಾಕಾರದಲ್ಲಿ | ಸರಸ್ವತ್ಯಾದಿಗಳು. |

| | |
|---|---|
| ಮೂರನೇ ಪ್ರಾಕಾರದಲ್ಲಿ | ಮರುದ್ಗಣಗಳು. |
| ನಾಲ್ಕನೇ ಪ್ರಾಕಾರದಲ್ಲಿ | ಸೂರ್ಯಾದಿಗಳು. |
| ಐದನೇ ಪ್ರಾಕಾರದಲ್ಲಿ | ಇಂದ್ರಾದಿಗಳು. |
| ಆರನೇ ಪ್ರಾಕಾರದಲ್ಲಿ | ರುದ್ರಾದಿಗಳು. |
| ಏಳನೇ ಪ್ರಾಕಾರದಲ್ಲಿ | ಬ್ರಹ್ಮಾದಿಗಳು ಈಪ್ರಕಾರ ಇದ್ದಾರೆ. |

**ಶ್ರೀಭಾಗದ ಭೂಮಿ 20ಕೋಟಿಗಾವುದ. ವಂದುವರೆಕೋಟಿ ಅರಸಮುದ್ರ. ಮತ್ತು ವಂದುವರೆ ಕೋಟಿ ಣ್ಯವೆಂಬ ಸುಧಾಸಮುದ್ರಗಳು. ಅಚಿತೂ 23ಕೋಟಿ ಗಾವುದ.**

ದುರ್ಗಾಭಾಗಕ್ಕೆ ಎರಡುವರೆಕೋಟಿ ಭೂಮಿ ವಿಸ್ತಾರ. ವಂದುಕೋಟಿ ಅರ ಎಂಬೋಸಮುದ್ರ, ಮತ್ತು ಧಡಿಭೂಭಾಗ ಎರಡುವರೆಕೋಟಿ, ಭೂವಿಸ್ತಾರ ವಂದುಕೋಟಿ. ವಂದುವರೆಕೋಟಿ ಣ್ಯ ವೆಂಬೋ ಸುಧಾಸಮುದ್ರ ಮತ್ತು ಧಡಿಗಳು ಏಳುಪ್ರಕಾರ. ವಳಗೆ ಒಂದೊಂದು ಪ್ರಾಕಾರಕ್ಕೆ, ವಂದೊಂದು ದಿಕ್ಕಿಗೆ ವಂದೊಂದು ಬಾಗಿಲು. ಅಂತೂ ನಾಲ್ಕುದಿಕ್ಕಿಗೆ ನಾಲ್ಕುಬಾಗಿಲಂತೆ 7 ಪ್ರಾಕಾರಕ್ಕೆ 28ಬಾಗಿಲು. ಇದು ಶ್ರೀಭಾಗಕ್ಕೆ ಬಹಿ. ಶ್ರೀಭಾಗದ ಪೂರ್ವದಿಕ್ಕು ಮೊದಲುಮಾಡಿ ನಾಲ್ಕರಂತೆ 12 ದ್ವಾರಗಳು.

| ಸಂಖ್ಯೆ | ದಿಕ್ಕು | ಪ್ರಥಮದ್ವಾರ | ದ್ವಿತೀಯದ್ವಾರ | ತೃತೀಯದ್ವಾರ |
|---|---|---|---|---|
| 01 | ಪೂರ್ವಕ್ಕೆ | ರಮಾ (ಶಾಂತಿನಾಮಕಳಾಗಿ) | ಪ್ರಾಣ,ಸೂರ್ಯ ದ್ಯುನಾಮ್ನಿಭಾರತಿ | ಜಯ, ವಿಜಯ |
| 02 | ದಕ್ಷಿಣಕ್ಕೆ | ರಮಾ(ಜಯಾನಾಮಕಳಾಗಿ) | ವ್ಯಾನ,ಇಂದ್ರ, ದಿಗ್‌ನಾಮ್ನಿಭಾರತಿ. | ಬಲ,ಪ್ರಬಲ. |
| 03 | ಪಶ್ಚಿಮಕ್ಕೆ | ರಮಾ(ಕೃತೀನಾಮಕಳಾಗಿ) | ಅಪಾನವಾಯು,ಅಗ್ನಿ, ಕ್ಷಿತಿಶನಾಮಕಭಾರತಿ. | ಕುಮುದ, ಕುಮುದಾಕ್ಷ. |
| 04 | ಉತ್ತರಕ್ಕೆ | ರಮಾ(ಮಾಯಾನಾಮಕಳಾಗಿ) | ಸಮಾನವಾಯು,ಇಂದ್ರ ದ್ಯುಗ್‌ನಾಮಕಭಾರತಿ. | ನಂದ,ಸುನಂದ. |
| 05 | ಊರ್ಧ್ವಕ್ಕೆ | ರಮಾ(ಲಕ್ಷ್ಮೀ) | ಉದಾನನಾಮಕವಾಯು ವಾಗ್ನಾಮಿ ಭಾರತಿ. | ಆಕಾಶನಾಮಕ ಲಕ್ಷ್ಮೀ. |

**ಅಂತೂ 15 ಬಾಗಿಲುಗಳು ಪರಮಾತ್ಮನ ಅರಮನಿಗೆ ಇವೆ. ಇಂಥಾ ವಿರಾಡ್ರೂಪಿ ಪರಮಾತ್ಮ ನಿಂದ ಪ್ರತಿ ಅಂಶದಿಂದ ದೇವತೆಗಳು ಜನ್ಯರಾಗಿದ್ದಾರೆ.**

| ಅವಯವ | ದೇವತೆ ಹೆಸರು | ಅವಯವ | ದೇವತೆ ಹೆಸರು |
|---|---|---|---|
| ಪಾದದಿಂದ | ಜಯಂತ | ಮೇಂಢ್ರದಿಂದ | ದಕ್ಷ |
| ವೃಷಣದಿಂದ | ಮಿತ್ರನಾಮಕ ಸೂರ್ಯ | ರೇತಸ್ಸಿನಿಂದ | ರುದ್ರ |
| ಶಿಶ್ನದಿಂದ | ಜರಾಮುಕ | ರೇತಸ್ಸು | ಉದಕ |
| ವೀರ್ಯ | ಬ್ರಹ್ಮಾಂಡ | ತ್ರದಶ ಗಣಾದಿ | ಸ್ವಾಹಾ |
| ಉದರದಿಂದ | ಸ್ವಧಾತನು | ಉದಧಿಗಳು | ಜಾಷಧಿವನಗಳು. |
| ರೋಮಗಳಿಂದ | ಸರ್ವಔಷಧಿಗಳು | ಮಹಾರುಹ | ವನಸ್ಪತಿಗಳು |
| ರೋಮಕೂಪಗಳಿಂದ | ಪ್ರಳಯೋದಕ | ಕಿವಿಗಳಿಂದ | ದಿಗಭಿಮಾನಿಗಳಾದ ಚಂದ್ರ,ಯಮ, ವರುಣ, ಮಿತ್ರ, ಕುಬೇರಾದಿಗಳು |
| ನಾಶಿಕ | ಅಶ್ವಿನಿದೇವತೆಗಳು | ಘ್ರಾಣ | ಗಂಧಾಭಿಮಾನಿದೇವತೆ |
| ಮುಖ | ಅಗ್ನಿಹೋತ್ರ | ನೇತ್ರ | ಸೂರ್ಯ |
| ರೆಪ್ಪೆಗಳು | ದಿವಾರಾತ್ರಿ ದೇವತೆಗಳು | ಹುಬ್ಬು | ಬ್ರಹ್ಮಲೋಕ |
| ತಾಲು | ಉದಕ | | |

ಇತ್ಯಾದಿ ಈಪರಮಾತ್ಮನಿಂದ ಉಂಟಾಯಿತೆಂದು ಚಿಂತಿಸಿ ಪರಮಾತ್ಮನ ಸತ್-ಚಿತ್- ಆನಂದ, ಆತ್ಮನೆಂತ ಉಪಾಸನ ಮಾಡಬೇಕು. ಹ್ಯಾಗೆಂದರೆ ಆತ- ದೋಷ ತದಾಶ್ರಯತಾತ ನಾರಾಯಣ. ಅರಾ-ಜೀವಃ ಜಡಂಚ ತದ್ಭಿನ್ನಸ್ಯಾತ್‌ನಾರಾಯಣಃ. ಇಂಥಾ ನಾರಾಯಣ ನಿತ್ಯಾ ನಿತ್ಯಜಗತ್ತಿನ ನಿಯಾಮಕ. ಆತ್ಮಪೂರ್ಣಾತ್ಮ ಮಮಸ್ವಾಮಿ- ಆತ್ಮಮಮಸ್ವಾಮಿ ಎಂದು ಪಂಚ ಭೂತಗಳಿಂದ ಪೂಜೆಮಾಡಬೇಕು. "ಓಂ ಪೃಥುವಾತ್ಮನೇ ಗಂಧಂ ಓಂ: ಓಂರಂ ತೇಜಾತ್ಮಕ ಧೂಪಂ ದೀಪಂ ಓಂ: ಓಂಯಂ ವಾಯುವಾತ್ಮ ಚಾಮರಂ ಓಂ;

ಓಂಆಕಾಶಾತ್ಮಕ ಪುಷ್ಪಂ ಓಂ: ಓಂ ವಿಂ ಅಮೃತಂ ತರ್ಪಯಾಮಿ ಓಂ" ಎಂದು ಧ್ಯಾನಸ್ತೋತ್ರಮಾಡಿ, ಚತುರ್ಗುಣೋ ಪಾಸನ ಉದ್ಧಾರನಾಗಬೇಕು. ತರುವಾಯ ಕೆಲವುಕಾಲದಮೇಲೆ ಸೂಕ್ಷ್ಮಉಪಾಸನೆ ಬರುತ್ತದೆ. ಇಂಥಾಹ ವಿರಾಡ್ರೂಪಿ ಪರಮಾತ್ಮ ಬ್ರಹ್ಮಾಂಡದಲ್ಲಿದ್ದು, ಬ್ರಹ್ಮಾಂಡಕ್ಕೆ ಆಶ್ರಯದಾತನಾಗಿ ನಮ್ಮ ಪಿಂಡಾಂಡ ಸ್ಥೂಲದೇಹವನ್ನು ಪುರುಷರೂಪದಿಂದ ಹೊತ್ತಿದ್ದಾನೆ. (ಬೊಮ್ಮಾಂಡದೊಳಗಿದ್ದ ಸ್ಥೂಲವಾದ ವಸ್ತುಗಳು ನಿಮ್ನವಾಗಿ ದೇಹದಲ್ಲಿ ಸೂಕ್ಷ್ಮವಾಗಿ ಉಂಟು ಕೇಳೂ)

ಇಂಥಾವಿರಾಡ್ರೂಪಿ ಪರಮಾತ್ಮ ತನ್ನಕಟಿಯಲ್ಲಿ, ಖರ್ಪರದಲ್ಲಿ ಅನಂತಾಸನ, ವಸ್ತಿಯಲ್ಲಿ ಕೆಳಗಿನ ಹೊಟ್ಟಾರು ಗಂಭೀರ ನಾಭಿಯಲ್ಲಿಶ್ವೇತದ್ವೀಪ ಸ್ವರ್ಣಭೂಮಿ-ಪೀತಾಂಬರ, ಅನಂತಾಸನ-ವಡ್ಯಾಣ, ಮೇರುಸಂಹಾಸನ. ಆಕಾಶ-ಛತ್ರಿ, ನಕ್ಷತ್ರ-ಆಭರಣ, ಸೂರ್ಯ, ಚಂದ್ರ- ಕಣ್ಣುಗಳು, ವಾಯು-ಛಾಮರ, ಗರುಡ-ಪೀತಾಂಬರ ಪಾದುಕಗಳು, ಧರಣಿ-ಮಂಟಪ, ಭೂ ದೇವಿ ವನಮಾಲ-ವೈಜಯಂತಿಮಾಲ, ವರುಣ-ಭಾಗೀರಥಿ ಅಗ್ರೋದಕ, ರುದ್ರ-ಕಲಶ, ಬ್ರಹ್ಮ-ಕೌಸ್ತುಭಮಣಿ ಪುಷ್ಪಗಳು, ಶೇಷ-ಹಾಸಿಗಿತಲೆದಿಂಬು ಕರ್ನಕುಂಡಲ, ವಾಯು-ಚೂಡಾರತ್ನ, ಗದ-ಕಾಮ, ಚಕ್ರ-ಅನಿರುದ್ಧ, ಶಂಖ-ಮನ್ಮಥ, ಗೋಪಿಚಂದನ-ಭೂದೇವಿ ಉಪಕರಣ, ಜಯ ವಿಜಯರು-ದ್ವಾರಪಾಲಕರು, ರಮಾ-ಕಿರೀಟ ಪುಷ್ಪ ಗಂಧ ಪದ್ಮ ಕಾಯ ಸಕಲ ವಾಸಿನೀದ್ರವ್ಯ, ಹಿಮವಂತ-ತೋರಣ, ಇಂದ್ರ-ರತ್ನ, ಸೂರ್ಯ-ಸುವರ್ಣ, ಚಂದ್ರ-ಬೆಳ್ಳಿಆಭರಣ, ಸೂರ್ಯ ಚಂದ್ರ ಅಗ್ನಿ-ನಂದಾದೀಪ, ಶೇಷ-ದೀಪಸ್ತಂಭ, ಬತ್ತಿ-ವರುಣ, ತೈಲ-ವಾಸ್ತುದೇವತೆಗಳು, ಅಗ್ನಿ- ವರಾರ್ತಿ, ನಿಋತಿ-ಧೂಪಾರ್ತಿ. ಈಪ್ರಕಾರ ತತ್ವೇಶ ಚಿಂತನಾಮಾಡಿದರೆ ಅವರು ಪದಾರ್ಥ ಗಳಾಗುತ್ತಾರೆ. ಕಣ್ಣಿಗೆ ಕಾಂಬುವುದಿಲ್ಲ ಪುಣ್ಯಬರುತ್ತದೆ. ಗೃಹಸ್ತನಲ್ಲಿ-ಅರ್ಚಕಬ್ರಹ್ಮ, ವಾನಪ್ರಸ್ತನಲ್ಲಿ -ಶೌಬರಿ, ಬ್ರಹ್ಮಚಾರಿಯಲ್ಲಿ- ಅಗ್ನಿ, ಯತಿಗಳಲ್ಲಿ-ಸನಕಾದಿಗಳು. ಹೀಗೆ ತಿಳಿದು ನೈವೇದ್ಯ ಮಾಡಬೇಕು. ಅನ್ನಾಭಿಮಾನಿ ಚಂದ್ರಸ್ತು-ಕೇಶವ, ಪರ್ಣದಿಂದ ಹಿಡಿದು ಪರಿಮಳ ಬುಧ ಶ್ರೀಕೃಷ್ಣನವರೆಗೂ ಆಯಾ ಅಭಿಮಾನಿಗಳನ್ನು ಚಿಂತಿಸಿ ನವವಿಧ ಭಕುತಿಯಿಂದ ಪೂಜಿಸಬೇಕು.

ಇತಿ ವಿರಾಟ್‌ಪೂಜಾ ಸಂಪೂರ್ಣಂ.

ಶ್ರೀಮಧ್ವಾಂತರ್ಗತ ಶ್ರೀಮದ್ವೇಶಾರ್ಪಣಮಸ್ತು.

## ಸೂಕ್ಷ್ಮ ಉಪಾಸನಾ:

ಇಂಥಾ ವಿರಾಡ್ರೂಪ ಪರಮಾತ್ಮ ನಮ್ಮ ಸ್ಥೂಲದೇಹ ಎಂಬೋ ಪಿಂಡಾಂಡದೊಳಗೆ ಪಾದ ನಖಶಿಖ ಪರಿಯಂತರ ತನ್ನ ನಿಜ ಅವಯವಗಳಿಂದ ಈಶರೀರ ಅವಯುವಗಳಲ್ಲಿ ನಿಯಾಮಕತ್ವೇನ ಆಧಾರಭೂತನಾಗಿದ್ದಾನೆ ಹ್ಯಾಂಗೆಇದ್ದಾನೆ ಅಂದರೆ "ಶಿರೋ–ನಾರಾಯಣ:ಲಲಾಟ–ಪ್ರದ್ಯುಮ್ನ, ಭ್ರೂ–ಕೇಶವ, ಭ್ರೂಮಧ್ಯೆ–(ಹುಬ್ಬುಗಲಿಗೆ) ನಾರಾಯಣ: ಬಲಗ್ಬಣ್ಣು–ಪ್ರದ್ಯುಮ್ನ; ಎಡಭುಜ–ಅನಿರುದ್ಧ; ಈರೀತಿ ಪ್ರತಿಯೊಂದು ಅವಯವಗಳಲ್ಲಿ, ಪಂಚಭೂತಗಳಲ್ಲಿ, ಭಗವದ್ರೂಪಗಳನ್ನು ಚಿಂತಿಸಿ, ನಾಡಿಗಳಲ್ಲಿ:–

| ಅವಯವ | ನಾಡಿಯಹೆಸರು | ವರ್ಣ | ನಿಯಾಮಕಭಗವದ್ರೂಪ | ದಿಕ್ಕು |
|---|---|---|---|---|
| ಪೃಷ್ಠಭಾಗ | ವಜ್ರಿಕ | ಹರಿದ್ವರ್ಣ | ಪ್ರದ್ಯುಮ್ನ | |
| ವಾಮಭಾಗ | ಆರ್ಯಕ | ನೀಲವರ್ಣ | ಅನಿರುದ್ಧ | |
| ಅಗ್ರಭಾಗ | ಪ್ರಕಾಶಿನಿ | ಶುಕ್ಲವರ್ಣ | ವಾಸುದೇವ | |
| ದಕ್ಷಿಣಕ್ಕೆ | ವೈವೃತ | ಪಿಂಗಳವರ್ಣ | ಸಂಕರ್ಷಣ | |
| ಮಧ್ಯಭಾಗ | ಬ್ರಹ್ಮನಾಡಿ | ರಕ್ತವರ್ಣ | ನಾರಾಯಣ ದ್ವಿಶತರೂಪ | |
| ಪಶ್ಚಿಮಕ್ಕೆ | ವಜ್ರಿಕ | | ಪ್ರದ್ಯುಮ್ನ | |
| ವಾಮಭಾಗ | ಇಡಾ | | ಅನಿರುದ್ಧ | |
| ಅಗ್ರಭಾಗಕ್ಕೆ | ಧಾರುಣಿ | | ವಾಸುದೇವ | |
| ದಕ್ಷಿಣಕ್ಕೆ | ಪಿಂಗಳ | | ಸಂಕರುಷಣ | |

ಹಾಗೂ ಹೀಗೂ 72000 ನಾಡಿಗಳಲ್ಲಿ **ಬೃಹತೀಸಹಸ್ರವಾಚಕ ಗಳಾದ 72000 ರೂಪಗಳು, (ವಿಶ್ವಾದಿ)** ದಕ್ಷಿಣಭಾಗಕ್ಕೆ 36000 ಬೃಹತೀಸಹಸ್ರ ಸ್ವರಾಕ್ಷರ, ವಾಮಭಾಗಕ್ಕೆ 36000 ವ್ಯಂಜ ನಾತ್ಮಕ ವಾಚ್ಯ ಆಭರಣಗಳು. ಮಸ್ತಕಕ್ಕೆ ಕಿರೀಟಾಖ್ಯ ಆಭರಣ. ಅನಿರುದ್ಧೋದ್ಭುತ ವರಾಹ ಕೂರ್ಮ: ಕಂಠೌಸ್ತುಭಾವ್ಯಾ ಶ್ರೀಅನಿರುದ್ಧೋ ವರಾಹ ಉರುಸೇ (ಎದಿ) ವೈಪ್ರಥಮ 240 ತ್ರಿಚೌಸತಿ.

2. ಪ್ರತಿಪಾದ್ಯ ಶುಕ್ಲವರ್ಣೋ ವಾಸುದೇವಾಸಿತಿ ತ್ರಿಗುಣ ಮುಕ್ತಮಾಲಾ.

3. ಎರಡನೇ 240 ತ್ರಿಚೌಸೀತಿ ಪ್ರತಿಪಾದ್ಯ ಪಿಂಗಳವರ್ಣ ಸಂಕರ್ಷಣಸ್ವಾಸೇತಿ ತನ್ನ 83 ರೂಪಗಳಿಂದ ತ್ರಿಗುಣಯುಕ್ತ ವೈಢೂರ್ಯಮಾಲಾ.

4. ಮೂರನೇ ತ್ರಿಚೌಸೀತಿ 240 ಪೀತವರ್ಣ, 240ಪೀತವರ್ಣ ಪ್ರದ್ಯುಮ್ನಾಸ್ವಾಸೇತಿ ತನ್ನ 83 ರೂಪಕ್ರಮದಿಂದ ಕಾಂಚನಮಾಲಾ.

5. 83 ರೂಪಗಳಿಂದ 140 ಭೋಗ ಪ್ರತಿಪಾದ್ಯ ರಕ್ತವರ್ಣ ನಾರಾಯಣ ಅನೀತ್ಯುಕ್ತರಶತ ರೂಪ ಗಳಿಂದ ದ್ವಿಗುಣಿತ ರತ್ನಮಾಲಾ.

6. ಅಂತ್ಯಭಾಗಕ್ಕೆ ಪ್ರತಿಪಾದ್ಯ ನೀಲವರ್ಣಕ ಅನಿರುದ್ಧ ಅಸೀತ್ಯು ತ್ರಿಂಶತ ಸ್ವರೂಪಗಳಿಂದ ದ್ವಿಗುಣಿತ ಇಂದ್ರನೀಲಾಮಾಲಾ, ನೃಸಿಂಹೋದ್ಭುತ ನಾನಾರತ್ನಸಮೂಹದಿಂದ ನಿರ್ಮಿತ ರತ್ನಮಾಲಾ ಬಾಹುಗಳಲ್ಲಿ ಕೇಯೂರ ಸೂರ್ಯಾಭರಣ ನೃಸಿಂಹೋದ್ಭುತ ವಾಮನ. ಟೊಂಕದಲ್ಲಿ ಉಡಿಗಾಭರಣ. ಈರೀತಿ ಸರ್ವಾಭರಣಗಳನ್ನು ಚಿಂತಿಸಬೇಕು. ಅನಿರುದ್ಧಾದಿ ತ್ರಯೋದ್ಭುತ ಮೂರ್ತಿಗಳು.

1. **ಸ್ವರೂಪದೇಹದ ವಿಚಾರ:** ಸ್ವರೂಪದೇಹ (ಚಿದ್ದೇಹ) ಸ್ವರೂಪದೇಹದಲ್ಲಿರತಕ್ಕ ತತ್ವಗಳು:

| ಸಂಖ್ಯೆ | ಇಂದ್ರಿಯದ ಹೆಸರು. | ತತ್ವಗಳ ಹೆಸರು | ಸಂಖ್ಯೆ | ಇಂದ್ರಿಯದ ಹೆಸರು. | ತತ್ವಗಳ ಹೆಸರು |
|---|---|---|---|---|---|
| 01 | ಮನ | ಶಕ್ತಿ | 07 | ವದನ | ವಿದ್ಯಾ |
| 02 | ನೇತ್ರ | ಸವಿತು | 08 | ಪಾಣಿ | ಮರ್ತ್ಯ |
| 03 | ಕರ್ಣ | ಪ್ರತಿಷ್ಠ | 09 | ಪಾದ | ನಿತ್ಯಾ |
| 04 | ತ್ವಕು | ಸ್ಫೂರ್ತಿ | 10 | ಪಾಯು | ಮಾಯ |
| 05 | ಜಿಂಹ್ವೆ | ಪ್ರಕೃತಿ | 11 | ಉಪಸ್ಥ | ಕಾಲ |
| 06 | ನಾಶಿಕ | ಕಳಾ | 12 | ದೇಹಾಕಾರ | ಪುರುಷರೂಪ |

ಸ್ವರೂಪದೇಹದಲ್ಲಿ ಮಾತಾರೀಶ್ವನಾಮಕ ವಾಯುದೇವರಿದ್ದಾರೆ. ಜೀವಾಂತರ್ಗತ ನೃಸಿಂಹ ರೂಪಗಳು 80,725.ಸ್ವರೂಪದಲ್ಲಿ ವಿಶ್ವ, ಆನಂದಮಯ,

ಅಚ್ಯುತ. ನಾರಾಯಣ. ಸ್ವರೂಪದಲ್ಲಿ 2 ಅರ್ಬುದ 109 ನರಸಿಂಹರೂಪಗಳು, ಜ್ಞಾನಾನಚಿದಾತ್ಮಕ 24 ತತ್ವಗಳು, ನಿಯಾಮಕ ಭಗವದ್ರೂಪಗಳು.

1.ನಾರಾಯಣ, ತುರ್ಯ ಆನಂದಮಯ 3052 ರೂಪದಿಂದ ಇದ್ದಾನೆ. ನರಸಿಂಹ ಪ್ರೇರಣಾ ರೂಪ ವಾಸುದೇವ,ವಿಶ್ವ. 2.ಸಂಕರುಷಣ ತೈಜಸ. 3. ಪ್ರದ್ಯುಮ್ನ 12 ದಳ ವುರು ಆತ್ಮಮೂರ್ತಿ. 4. ಅನಿರುದ್ಧ–ಪ್ರಾಜ್ಞ ಪ್ರತಿದೇಹದಲ್ಲಿ ಪಂಚಮೂರ್ತಿಗಳು, 25 ತತ್ವ 25 ತತ್ವನಿಯಾಮಕ ರೂಪಗಳು. ಅಂತು 30ರೂಪ. ಪರಮಾತ್ಮ ಸ್ವರೂಪದೇಹದಲ್ಲಿ 15 ರೂಪದಿಂದ ಇದ್ದಾನೆ. ಹೇಗೆಂದರೆ ಜೀವನ:

| ಸಂಖ್ಯೆ | ಅವಯವ | ಭಗವದ್ರೂಪ | ಸಂಖ್ಯೆ | ಅವಯವ | ಭಗವದ್ರೂಪ |
|---|---|---|---|---|---|
| 01 | ಮನಸ್ಸಿನಲ್ಲಿ | ರುದ್ರಮೂರ್ತಿ | 09 | ತ್ವಕು | ಅಹಂಕಾರಿಕಪ್ರಾಣ |
| 02 | ವದನದಲ್ಲಿ | ಧನ್ವಂತರಿ | 10 | ಚಕ್ಷು | ವಿವಸ್ವ ಸೂರ್ಯ |
| 03 | ವಾಕ್ಯದಲ್ಲಿ | ಅಗ್ನಿಮೂರ್ತಿ | 11 | ಜಿಂಹ್ವೆ | ವರುಣ |
| 04 | ಹಸ್ತದಲ್ಲಿ | ದಕ್ಷಮೂರ್ತಿ | 12 | | ವಿಶ್ವ |
| 05 | ಪಾದದಲ್ಲಿ | ಜಯಂತ | 13 | | ತೈಜಸ |
| 06 | ಜಿಹ್ವೆದಲ್ಲಿ | ಸ್ವಾಯಂಭೂಮನು | 14 | | ಪ್ರಾಜ್ಞ |
| 07 | ಗುದದಲ್ಲಿ | ಮಿತ್ರಮೂರ್ತಿ | 15 | | ತುರ್ಯ |
| 08 | ಶ್ರೋತ್ರ | ದಿಗ್ದೇವತಾ | | | |

ಈಪ್ರಕಾರ ಅಂತು 15 ರೂಪದಿಂದ್ದಾರೆ. ರವಾಾದೇವೇರು ಇಷ್ಟುರೂಪಗಳಲ್ಲಿದ್ದಾರೆ. ಇಂಥಾ ಆನಂದಮಯವಾಚ್ಯ ಪ್ರಾಜ್ಞನನ್ನು ಚಿಂತಿಸಿ ಲಿಂಗದೇಹದ ಜೀವನಲ್ಲಿದ್ದ ಪ್ರಾಜ್ಞನಲ್ಲಿ ಲೀನನಾಗಿ ವಿಜ್ಞಾನವುಯನಲ್ಲಿ ದಿಕ್ಸಚಿಂತನಾಮಾಡಬೇಕು. ವಚಿದು ಅಂಶದಿಂದ ಆನಂದಮಯನನ್ನು ತೆಗೆದು ಲಿಂಗಗತ ವಿಜ್ಞಾನಮಯನನ್ನು ಚಿಂತಿಸಬೇಕು.

## 2. ಲಿಂಗದೇಹದ ವಿಚಾರ

2. **ಲಿಂಗದೇಹ:**– ಇಂತಹ ಜೀವನ ಸ್ವರೂಪದೇಹದಮೇಲೆ ಪರಮಾತ್ಮನ ಇಚ್ಛಾವರಣ ಲಿಂಗ ಶರೀರ ಸಪ್ತಾವರಣಯುಕ್ತವಾದದ್ದು. ಸಪ್ತಾವರಣ: 1.ಈಶ್ವರೇಚ್ಛಾ; 2.ಲಿಂಗ; 3.ಪರಮಾಚ್ಛಾದಿಕ; 4.ಜೀವಾಚ್ಛಾದಿಕ; 5.ಅವಿದ್ಯಾಪಂಚಕ; 6.ಕಾಮ; 7. ಕರ್ಮ: ಷೋಡಶಕಳಾತ್ಮಕವಾದದ್ದು. ಲಿಂಗದೇಹ ತ್ರಿಪರಿಚ್ಛೇದ ಉಳ್ಳದ್ದು. ಸತ್ವ–ರಜ–ತಮ.

1. **ಸತ್ವಪರಿಚ್ಛೇದ:**– ಸತ್ವದಲ್ಲಿ ವಿಶ್ವರೂಪಿ ಪರಮಾತ್ಮ ತ್ರಿಗುಣಸೃಷ್ಠಿ ನಿಯಾಮಕರೂಪ ಹಯಗ್ರೀವ. **ಪರಮಾತ್ಮ ವಿಷ್ಣು ಶ್ರೀರಮಾ ಇಚ್ಛಾಶಕ್ತಿ ಓಂ ಶ್ರೀಂ.** 2.ಅವ್ಯಕ್ತತ್ಮ ಜ್ಞಾನಾತ್ಮ. 3.ಮಹತ್ತತ್ವ ಪರಮಾತ್ಮ. 4.ಅಹಂಕಾರತತ್ವ–ಅಂತರಾತ್ಮ. 5.ಮನಸ್ಸು–ಆತ್ಮ, ಅರಿಷಡ್ವರ್ಗಗಳು ಇವೆ. ಅಹಂ ಮಮತೆ ಇದೆ.

2. **ರಜೋಪರಿಚ್ಛೇದ:**–ಪಂಚಜ್ಞಾನೇಂದ್ರಿಯಗಳು ಪಂಚಕರ್ಮೇಂದ್ರಿಯಗಳು ಅಂತು 10. ಇದಕ್ಕೆ ತೈಜಸ ರೂಪಿ ಪರಮಾತ್ಮ. ಪರೂಶುರಾಮ, ಬ್ರಹ್ಮ, ಭೂರಮಾರೂಪ ಕ್ರಿಯಾಶಕ್ತಿ ಓಂಕ್ಲೀಂ.

3. **ತಮೋಪರಿಚ್ಛೇದ:**– ಪ್ರಾಜ್ಞ ಕೃಷ್ಣ ದುರ್ಗಾರಮಾರೂಪ ಜ್ಞಾನಶಕ್ತಿ ಓಂ **ಹ್ರೀಂ.** ಅ)ಗಂಧ; ಆ)ರಸ; ಇ)ರೂಪ; ಈ) ಸ್ಪರ್ಶ; ಉ)ಶಬ್ದ;. ಅಯಿದು ಪಂಚಭೂತಗಳು ಇವೆ. ಇದಕ್ಕೆ ಅನಿರುದ್ಧ,ಪ್ರದ್ಯುಮ್ನ,ಸಂಕರ್ಷಣ, ನಾರಾಯಣ, ಲಿಂಗದೇಹದಲ್ಲಿ ಸೂತ್ರನಾಮಕ ವಾಯುದೇವರು ಇದ್ದಾನೆ. ಪಚಿಭಪರ್ವ: ಅವಿದ್ಯಾಕಾಮ; ಅನಾದಿಕರ್ಮಅದೆ. ಅಂತು 16 ಕಳೆ ಗಳು ಇದ್ದ ಈಕೇಶವಾದಿ ಅನಿರುದ್ಧನಪರ್ಯಂತ 16 ರೂಪಗಳು. ತುರ್ಯನಾಮಕ ವಾಸುದೇವನೆ (ವಿಜ್ಞಾನಮಯ) ಈ ಅನಿರುದ್ಧಾದಿ ಪಂಚರೂಪಗಳನ್ನು ಧರಿಸಿದ್ದಾನೆ. **"ಲಿಂಗ" ಎಂದರೆ ಅಂತ್ಯಶರೀರ ಅದಕ್ಕೆ "ತುರ್ಯ" ಎಂತ ಹೆಸರು.**

### ಅವಿದ್ಯಾಪಂಚಕಗಳು

| ಸಂಖ್ಯೆ | ಅವಿದ್ಯ | ಕಾರ್ಯ | ಭಗವದ್ರೂಪ | ಪತ್ನೀಯರು. |
|---|---|---|---|---|
| 01 | ತಮ | ಅಜ್ಞಾನಕಾರ್ಯ | ಕೃದ್ಧೋಲ್ಕ | ದುರ್ಗಾ |
| 02 | ಮೋಹ | ಭ್ರಾಂತಿಕಾರ್ಯ | ಮಹೋಲ್ಕ | ಅಂಭ್ರಣಿ |
| 03 | ಮಹಾಮೋಹ | ಮಹಾಭ್ರಾಂತಿ | ವೀರೋಲ್ಕ | ಲಕ್ಷ್ಮಿ |

| | | | | |
|---|---|---|---|---|
| 04 | ತಾಮಿಶ್ರ | ಮಹಾಕ್ರೋಧ | ದ್ಯುಲ್ಕ | ದಕ್ಷಣ |
| 05 | ಅಂಧತಾಮಿಶ್ರ | ಮರಣಾಖ್ಯ | ಸಹಸ್ರೋಲ್ಕ | ಜಯಂತಿ |

ಇಲ್ಲಿ ರಮಾದೇವಿಯರ ವಿನಃ ಇನ್ನೊಬ್ಬರಿಗೆ ಕಾರ್ಯವಿಲ್ಲ. ಶ್ರೀರಮಾದೇವರು. ಲಿಂಗದೇಹದ ಬಲವನ್ನು ಪಾದದಿಂದ ಮುಟ್ಟಿ ಜೀವನ ಪ್ಲತ್ತಿಜ್ಞಾನ ಹೊರಗೆ ಬಿಡುತ್ತಾಳೆ. ಇಲ್ಲಿ ಪುರುಷನಾಮಕ ರೂಪದಿಂದ ಜೀವಿಗೆ ಪ್ರೇರಣೆ. ಜನಾರ್ದನರೂಪಿ ಪರಮಾತ್ಮ ಲಿಂಗದೇಹಕ್ಕೆ ಜರಾಮರಣಬಾರದಂತೆ ಸಂರಕ್ಷಣಮಾಡುತ್ತಿದ್ದಾನೆ. ವಿಜ್ಞಾನಮಯ 548 ರೂಪಗಳಿಂದ ಇದ್ದಾನೆ. ಈಲಿಂಗದೇಹದ 16 ಕಳಕ್ಕೆ ಶ್ರೀಜಗನ್ನಾಥಸ್ವಾಮಿಗಳು, ಬ್ರಹ್ಮಸೂತ್ರ ಭಾಷ್ಯಕ್ಕೆ ವ್ಯಾಖ್ಯಾನದಲ್ಲಿ ಭಗವದ್ರೂಪಗಳು ಬರೆದಿದ್ದಾರೆ.ಇದಕ್ಕೆ **"ಓಂ ಇಯಿದಾಮ ಸನಾತ್ ಓಂ"** ಎಂಬ ಬ್ರಹ್ಮಸೂತ್ರವಿದೆ.

## ಷೋಡಶಕಳೆಗಳವಿವರ:

| ಸಂಖ್ಯೆ | ಕಳ | ನಿಯಾಮಕ | ಭಗವದ್ರೂಪ |
|---|---|---|---|
| 01 | ಕರ್ಮ | ಪುಷ್ಕರ | ಅನಿರುದ್ಧ |
| 02 | ನಾಮ | ಉಷಾ | ಪ್ರದ್ಯುಮ್ನ |
| 03 | ಮಂತ್ರವಾಕ್ಕು | ಸ್ವಾಹಾ | ವಾಸುದೇವ |
| 04 | ಮೌನ | ಪರ್ಜನ್ಯ | ಪ್ರದ್ಯುಮ್ನ |
| 05 | ಸಂಕಲ್ಪ | ಮಿ.ಸೂರ್ಯ | ಅನಿರುದ್ಧ |
| 06 | ಚಿತ್ತ | ಅಗ್ನಿ | ವಾಸುದೇವ |
| 07 | ಧ್ಯಾನ | ವರುಣ | ಅನಿರುದ್ಧ |
| 08 | ವಿಜ್ಞಾನ | ಚಂದ್ರ | ನಾರಾಯಣ |
| 09 | ಬಲ | ಪ್ರ. ವಾಯು | ವಾಸುದೇವ |
| 10 | ಅನ್ನ | ಅನಿರುದ್ಧ | ಅನಿರುದ್ಧ |
| 11 | ಅಪ್ಪು | ಅಹ.ಪ್ರಾಣ | ಪ್ರದ್ಯುಮ್ನ |
| 12 | ತೇಜ | ಇಂದ್ರ | ಸಂಕರ್ಷಣ |
| 13 | ಆಕಾಶ | ಉಮಾ | ನಾರಾಯಣ |

| | | | |
|---|---|---|---|
| 14 | ಸ್ಮರಾ | ರುದ್ರ | ಸಂಕರ್ಷಣ |
| 15 | ಆಶೆ/ಶ್ರದ್ಧ | ಭಾರತಿ | ವಾಸುದೇವ |
| 16 | ಪ್ರಾಣ | ಮುಖ್ಯಪ್ರಾಣ | ವಾಸುದೇವ |

ಈಕಳೆಗಳು ಮುಂದೆ ಸಾಧನಕ್ಕೆ ಕಾರಣವಾಗುತ್ತವೆ. ದೇಹಉತ್ಪತ್ತಿಗೆ ಕಾರಣ. ಲಿಂಗದ ತೃತೀಯ ಪರಿಚ್ಛೇದದಲ್ಲಿ ಬ್ರಹ್ಮ,ವಾಯು, ಸರಸ್ವತಿ,ಭಾರತಿ, ನಾಲ್ಕುಮಂದಿ. ಗುಣನಿಯಾಮಕ ಪರಮಾತ್ಮನ ಧ್ಯಾನ ಮಾಡುತ್ತಾರೆ. ಇಂಥಾ ವಿಜ್ಞಾನಮಯನನ್ನು ಸಾಧಿಸಿ ಲಿಂಗದೇಹದ ಗುಣವೈಷಮ್ಯ ಶರೀರ ದಲ್ಲಿ ಚಿಂತನಾಮಾಡಬೇಕು. ಸತ್ವ-10, ರಜ-12-, ತಮ-1 ಅಚಿತು 23. ಗುಣದಿಂದ ಸೃಷ್ಠಿ. ಇದಕ್ಕೆ ಮತ್ಸ್ಯಾದಿ-10, ಶಕ್ತ್ಯಾದಿ-12, ಜನಾರ್ದನ-1 ಅಂತು-23ರೂಪಗಳು. ಇದಕ್ಕೆ ಸತ್ವ-100,ರಜ-12, ತಮ-1 ಅಂತು 113 ಗುಣದಿಂದ ಮಹತ್ತರ ಶರೀರ ಇಲ್ಲಿ ಬ್ರಹ್ಮ,ವಾಯು,ಸರಸ್ವತಿ,ಭಾರತಿ ಇದ್ದಾರೆ.ಇದಕ್ಕೆ ನಾರಾಯಣಾದಿ-100 ವಿಶ್ವಾದಿ-8,ಅನಿರುದ್ಧಾದಿ-5 ಅಂತು 113 ರೂಪಗಳು. ಸತ್ವ-10,ರಜ-10, ತಮ-1 ಅಂತು 21 ಗುಣದಿಂದ ಅಹಂಕಾರ ಶರೀರ ಉತ್ಪತ್ತಿಆಯಿತು. ಇಲ್ಲಿ ರುದ್ರಾದಿಗಲಿಗೆ ವಾಸ. ಸತ್ವ-1ಲಕ್ಷ; ರಜ-1200, ತಮ-10 ಅಚಿತು ವಂದುಲಕ್ಷ ಹನ್ನೆರಡುನೂರಾ ಹತ್ತು ಗುಣದಿಂದ ಅನಿರುದ್ಧ ದೇಹ ಸೃಷ್ಠಿ. ಇದಕ್ಕೆ ನಾರಾಯಣಾದಿ ಶತ ಜನಾರ್ದನರೂಪಗಳು. ಇಲ್ಲಿ ದೈತ್ಯರು ದೇವತೆಗಳು ಎಲ್ಲರುವಾಸ. ಇಲ್ಲಿ ಪವಮಾನನಾಮಕ ವಾಯುದೇವರು ಇದ್ದಾರೆ.

## ೩. ಅನಿರುದ್ಧದೇಹದ ವಿಚಾರ

ಈ ಅನಿರುದ್ಧದೇಹ ಜೀವನ ಸೃಷ್ಠಿಕಾಲಕ್ಕೆ, ಬ್ರಹ್ಮಾಂಡ ನಿರ್ವಾಣ ಆದಮೇಲೆ ಅಸೃಜ್ಯರಾಶಿಯಿಂದ ಜೀವರು ಸೃಷ್ಠಿಗೆ ಬಂದಾಗ್ಗೆ, ಜೀವರು ಅನಿರುದ್ಧದೇವರು ವಶವಾದಮ್ಯಾಲೆ, ಆಗ್ಗೆ ಅನಿರುದ್ಧ ದೇಹ, ಎಲ್ಲಾಜೀವರಿಗೂ ಸೃಷ್ಠಿಮಾಡುತ್ತಾನೆ. ಈ ದೇಹದಿಂದಲೇವೆ ಯಾವ ಯಾವ ಯೋನಿಗಳಿಗೆ ದೇವರು ಈ ದೇಹ ಇರುತ್ತದ. ಇದು ತ್ರಿವಿಧ ಜೀವರಿಗು ನಿಯಮ ಮತ್ತು ತೃಣಾರಭ್ಯ ಬ್ರಹಾಂತದವರೆಗೂ ಇದೇನೇಮ. ಇಂಥಾ ಅನಿರುದ್ಧದದೇಹದವಳಗೆ ನವಾವರಣಗಳುಂಟು. ಅನಿರುದ್ಧಕೋಶದಲ್ಲಿ ಎರಡು ಆವರಣ. ಪ್ರದ್ಯುಮ್ನಕೋಶದಲ್ಲಿ ಮೂರುಆವರಣ. ಸಂಕರ್ಷಣ ಕೋಶದಲ್ಲಿ ಎರಡು ಆವರಣ. ವಾಸುದೇವಕೋಶದಲ್ಲಿ ಒಂದು ಆವರಣ, ನಾರಾಯಣಕೋಶ ದಲ್ಲಿ ಒಂದು ಆವರಣ. ಇದಕ್ಕೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ,

ಎಂದು ಹೆಸರು. ಇದು ಬ್ರಹ್ಮಾಂಡಕ್ಕೆ ನವಾವರಣ ಇದ್ದಹಾಗೆ. ಈಅನಿರುದ್ಧದೇಹ ಮನೋ ಮಯವಾದಂಥಾದ್ದು. ಇದು 58 ರೂಪಗಳಿಂದ ಅದೆ. ಅನಿರುದ್ಧಕೋಶದಲ್ಲಿ 2 ಚೀಲ. ಅ)ಇದರಲ್ಲಿ (ಅನ್ನಮಯ ಅನಿರುದ್ಧ ಕೋಶದಲ್ಲಿ) ಪೃಥ್ವಿ, ಗಂಧ, ಪಾಯು, ಪ್ರಾಣ, ಆ) ಅಪ್ಪು, ರಸ, ಉಪಸ್ಥ, ಜಿಂಹ್ವೆ.

2. ಪ್ರಾಣಮಯ ಪ್ರದ್ಯುಮ್ನಕೋಶದಲ್ಲಿ ಮೂರುಚೀಲಗಳು: ಅ)ತೇಜರೂಪ,ಪಾದ, ಚಕ್ಷುಸು, ಆ)ವಾಯು, ಸ್ಪರ್ಶ, ಪಾಣಿ,ತ್ವಕು.ಇ)ಆಕಾಶ, ಶಬ್ದ,ವಾಕ್ಕು,ಶ್ರೋತ್ರ.

3. ಪ್ರಾಣಮಯ ಸಂಕರ್ಷಣಕೋಶದಲ್ಲಿ: ಎರಡು ಚೀಲಗಳು; ಅ) ಅಹಂಕಾರ, ಆ)ಮನಸ್ಸು.

4. ವಿಜ್ಞಾನಮಯ ವಾಸುದೇವಕೋಶದಲ್ಲಿ: ಅ)ಮಹತತ್ವ.

5. ಆನಂದಮಯ ನಾರಾಯಣನಕೋಶದಲ್ಲಿ:ಅ)ಅವ್ಯಕ್ತತ್ವ.

ಅಂತು 24 ತತ್ವಗಳು ಬ್ರಹ್ಮಾಂಡಕ್ಕೆ ನವಾವರಣದಂತೆ– ಅದೇ ನವಾವರಣ, ಸಪ್ತಾವರಣ ಎಂದರೆ ಎರಡು ಒಂದರೊಳಗೆ ಇನ್ನೊಂದುಕೂಡಿ ಇರತ್ತವದೇ. ಇಲ್ಲಿ ದೇವದೈತ್ಯರು ತತ್ವಾಭಿಮಾನಿಗಳು ಉಂಟು. ಆದರೆ ಈತತ್ವಗಳ ಮತ್ತು ತತ್ವೇಶರ ಯಾವತ್ತು ಕಾರ್ಯಸ್ಥೂಲದೇಹ ನಡೆಯುತ್ತದೆ. ಲಿಂಗದೇಹದ 16 ಕಳಗಳು ಲಿಂಗ ಅನಿರುದ್ಧ, ಪ್ರಾಕೃತ, ಭೌತಿಕದೇಹಗಳಿಗೆ ಸಂಭಂಧವಾಗಿದೆ. ದೈತ್ಯರು ಪಾಪಕಾರ್ಯ, ದೇವತೆಗಳು ಪುಣ್ಯಕಾರ್ಯ, ಮಾಡಿಸುತ್ತಾರೆ. ದೈತ್ಯರಿಗೆ ಪಾಪದಫಲ, ದೇವತೆಗಳಿಗೆ ಪುಣ್ಯದಫಲ. ಇದೇಲಿಂಗದೇಹ ಅವ್ಯಕ್ತದೇಹಗಳಿಗೆ ಸಂರಕ್ಷಣ ಆವರ್ಕ ವಾದಂಥಾದ್ದು.

**ಪ್ರಾಕೃತದೇಹ:** ಈದೇಹ 53 ರೂಪಗಳಿಂದ ಪ್ರಾಣಮಯನೆನಿಸಿ ಕೊಳ್ಳುತ್ತದೆ. ಇದು ವೈಕಾರಿಕ ರುದ್ರನಿಂದ ಸೃಷ್ಟಿಸಲ್ಪಟ್ಟು ಪ್ರಾಣಮಯವಾಯು ಆಧಾರದೇಹ.

**ಸ್ಥೂಲದೇಹ:** ಇದಕ್ಕೆ ಅನ್ನಮಯನೆಂತ ಹೆಸರು. 101 ರೂಪಗಳಿಂದ ಇದೆ. ಈಸ್ಥೂಲದೇಹದಲ್ಲಿ ಬ್ರಹ್ಮನಾಡಿ ಸುಷುಮ್ನನಾಡಿಯಲ್ಲಿ ಪ್ರಾಜ್ಞ ಅಥವಾ ಅಗ್ರೇಶ. ಅಥವಾ ಜೀವನಾಂಗುಷ್ಟ ಮೂರ್ತಿ. ಅನ್ನಮಯ ಅಂತ ಹೆಸರಿನಿಂದ ಇದ್ದಾನೆ. ಸುಷುಮ್ನ ಹೃದಯ ಅಷ್ಟದಳ ಕಮಲಕರ್ಣಿಕದಮ್ಯಾಲೆ ಇದ್ದಾನೆ. ಈಸ್ಥೂಲದೇಹ ಸಪ್ತಧಾತುಗಳಿಂದ ಪಂಚಭೂತಗಳಿಂದ 24 ತತ್ವಗಳಿಂದ (ಈತತ್ವಗಳಿಗೆ 24 ಕೇಶವಾದಿ ರೂಪಗಳು) 7200 ನಾಡಿಗಳಿಂದ ನಿರ್ಮಿತವಾದದ್ದು. ಬ್ರಹ್ಮನಾಡಿವಳಗೆ ಸಪ್ತಕಮಲಗಳು ಇವೆ. ಈಸ್ಥೂಲಶರೀರಗರ್ಭದೊಳಗೆ ಸೃಷ್ಟಿ ಆಗಿ ಏಳನೇತಿಂಗಳಿಗೆ

ಪೂರ್ತಿಯಾಗುತ್ತದೆ. ಆಗ್ಗೆ ದೇವರು ಅನಂತಾನಂತ ಗುಂಪುಗಳಿಂದ ಧಾರಣ, ಪೋಷಣ, ಪ್ರೇರಣ, ನಿಯಮನ, ಇತ್ಯಾದಿಕಾರ್ಯಗಳನ್ನು ಮಾಡುವುದಕ್ಕೆ ಅನಂತ ರೂಪಗಳಲ್ಲಿ ಪ್ರವೇಶ ಮಾಡುತ್ತಾನೆ. **ಪ್ರವೇಶಕಾಲಕ್ಕೆ ತತ್ವೇಶರೊಡನೆ ಪ್ರವೇಶ.** ಆಗ್ಗೆ ಗರ್ಭಕ್ಕೆ ಜೀವಬಂದು 9 ತಿಂಗಳಲ್ಲಿ ಗರ್ಭದಿಂದ ಹುಟ್ಟುತ್ತಾನೆ. ಇಂಥಾ ಸ್ಥೂಲದೇಹ ಪ್ರಾಜ್ಞನಲ್ಲಿರೋ ಅನ್ನಮಯನಲ್ಲಿ ವಳಗಿದ್ದ ಅಂಶತ್ವೇನ ತಂದಂತಹ ನಾಲ್ಕು ಪ್ರಾಜ್ಞನನ್ನಾದರೂ ಚಿಂತನೆ ಮಾಡಬೇಕು. ಇಂಥಹ ಸ್ಥೂಲದೇಹಕ್ಕೆ ಸ್ವರೂಪದಿಂದ ಆರಂಭಮಾಡಿ ದೇಹಗಳಿವೆ. ಅದು ಯಾವ್ವದೆಂದರೆ.

| ಸಂಖ್ಯೆ | ಹೆಸರು | ಭಗವದ್ರೂಪ | ಸಂಖ್ಯೆ | ಹೆಸರು | ಭಗವದ್ರೂಪ |
|---|---|---|---|---|---|
| 01 | ಸ್ವರೂಪದೇಹ | 2ಅರ್ಬುದ 109 | 14 | ಅನಿರುದ್ಧಾವರಣ | 01 |
| 02 | ಇಚ್ಛಾವರಣ | 01 | 15 | ಅನಿರುದ್ಧಶರೀರ | 202494 |
| 03 | ಲಿಂಗದೇಹ | 07 | 16 | ವಾಸುದೇವಕವಚ | 01 |
| 04 | ಅವ್ಯಕ್ತ | 129 | 17 | ನಾರಾಯಣಕವಚ | 01 |
| 05 | ಅವಿದ್ಯಾ | 27 | 18 | ಆನಂದಮಯಕೋಶ | 01 |
| 06 | ಕರ್ಮ | 03 | 19 | ವಿಜ್ಞಾನಮಯಕೋಶ | 01 |
| 07 | ಕಾಮ | 08 | 20 | ಮನೋಮಯಕೋಶ | 01 |
| 08 | ಪರಮಾಚ್ಛಾದಿಕ | 09 | 21 | ವಾಙ್ಮಯಕೋಶ | 01 |
| 09 | ಜೀವಾಚ್ಛಾದಿಕ | 09 | 22 | ಶ್ರೋತ್ರ | 01 |
| 10 | ನಾರಾಯಣಾವರಣ | 01 | 23 | ಚಕ್ಷು | 01 |
| 11 | ವಾಸುದೇವಾವರಣ | 01 | 24 | ಪ್ರಾಣಮಯ | 01 |
| 12 | ಸಂಕರ್ಷಣಾವರಣ | 01 | 25 | ಅನ್ನಮಯಕೋಶ | 01 |
| 13 | ಪ್ರದ್ಯುಮ್ನಾವರಣ | 01 | 26 | ಸ್ಥೂಲಶರೀರ | 320793817 |

ಬ್ರಹ್ಮದೇವರು ಮೊದಲು ತೃಣಜೀವರ ವರೆಗೂ 26 ದೇಹಗಳು. 2 ಅರ್ಬುದ 32ಕೋಟಿ 9ಲಕ್ಷ 90ಸಾವಿರ 858 ಭಗವದ್ರೂಪಗಳು ಕೆಲವರ ಪಕ್ಷ 28 ದೇಹಗಳು ಉಂಟು. ನರಜನ್ಮ ಬಂದುದಕ್ಕೆ ಇಷ್ಟುಚಿಂತನ ಮಾಡಬೇಕು.

ಇಂಥಾ ಸ್ಥೂಲದೇಹದವಳಗೆ ಬ್ರಹ್ಮನಾಡಿವಳಗೆ ಇದ್ದ ಕಮಲಗಳ ಚಿಂತನಮಾಡಬೇಕು. ಯಾಕೆಂದರೆ ಇದುವರೆಗೆ ಸ್ಥೂಲದೇಹಸೃಷ್ಟಿ ಗರ್ಭದೊಳಗೆ ಆದಮ್ಯಾಲೆ ದೇವರು ಅನೇಕ ವ್ಯೂಹಗಳಿಂದ,ಧಾರಣ,ಪೋಷಣ,ಪ್ರೇರಣ ಚೇಷ್ಟಾ ಉದ್ದೇಶ ಪ್ರವೇಶಮಾಡುತ್ತಾನಂತ ಹೇಳಿದೆ. ವೃಷಣಾಸನ. ಪಾಯುನಡುಮಧ್ಯ ವಂದು ಗಡ್ಡಿ ಅದು ತುಂದಿಇದೆ. ಅದೇ ಸುಷುಮ್ನನಾಡಿ ಇದು ಬ್ರಹ್ಮರಂಧ್ರದಿಂದ ಗುದಪರಿಯಂತರಕ್ಕು ರೋಮಕೂದುಲಿನಂತೆ ಇದೆ.

ಈಸ್ಥಳದಲ್ಲಿ 4ದಳದ ಕಮಲವಿದೆ. ಒಂದೊಂದು ದಳದಲ್ಲಿ 5 ಪತ್ರಗಳು. ಈಐದು ಪತ್ರ ಕಮಲದಲ್ಲಿ ಅನಿರುದ್ಧ,ಪ್ರದ್ಯುಮ್ನ,ಸಂಕರ್ಷಣ ವಾಸುದೇವ, ನಾರಾಯಣ ರೂಪಗಳು. ಈಎಲ್ಲಾ ದಳಕ್ಕೂ ಅನಿರುದ್ಧ ನಿಯಾಮಕ. ಇಲ್ಲಿ ಅಪಾನವಾಯುದೇವರಸಹಿತ ಸಪ್ತಮಾರುತಗಳು ವಾಸ.ಇಲ್ಲಿ ಸೋಮ, ಬುಧ, ಶನಿ, ಗುರು ಪರಮಾತ್ಮನ ಉಪಾಸನಾ ಮಾಡುತ್ತಾರೆ.ಇಲ್ಲಿ ರ,ಲ,ವಶ ಭಗವದ್ರೂಪಗಳು ವಾಸ. ನಾಲ್ಕು ಅಕ್ಷರಗಳಲ್ಲಿ.

ನಾಭಿಯಲ್ಲಿ 6 ದಳದಕಮಲ ಪ್ರದ್ಯುಮ್ನ ನಿಯಾಮಕ. ಗಣೇಶ ಅಭಿಮಾನಿ ವಿಶ್ವನಾಮಕ ಪರಮಾತ್ಮನನ್ನು ಉಪಾಸನಮಾಡುತ್ತಾರೆ. ಜಾಂಬವತ್ಯಾದಿ ಷಣ್ಮಹಿಷಿಯರು ವಾಸ. ಇಲ್ಲಿ ಷಟ್ಕೋಣಮಂಡಲ ಉಂಟು. ಇಲ್ಲೇ ಪಾಪಪುರುಷನನ್ನ ಶೋಷಣಮಾಡುವ ಸ್ಥಳ. ಇಲ್ಲಿ ಪ, ಫ, ಬ, ಭ, ಮ, ಯ ಆರು ಅಕ್ಷರಇದೆ. ಭುವರ್ಲೋಕವೆನಿಸುತ್ತದೆ. ನಾಭಿಗೆ ಹೃದಯಕ್ಕೆ ಮಧ್ಯ ಅಂತರಿಕ್ಷ ಲೋಕವಿದೆ.ಇಲ್ಲಿ ಸೂರ್ಯಮಂಡಲ 12 ಮೂಲಿ ಉಳ್ಳದ್ದು. ಪೂರ್ವಾದಿ (4) ನಾಕುದಿಕ್ಕುಗಳಲ್ಲಿಂರ್ಥಘೂ ಉರ್ಧ್ವಕ್ಕೆ ಅಂತು 5 ದಿಕ್ಕುಗಳಲ್ಲಿ 72 ರೂಪಗಳಮೇರೆಗೆ 360 ಅನಿರುದ್ಧಾದಿ ರೂಪಗಳು. ಇದಕ್ಕೆ 360 ದಿವಸಗಳು. ಸೂರ್ಯ ಮಂಡಲದಲ್ಲಿ ನಾರಾಯಣ. ಇದರಮ್ಯಾಲೆ ವರ್ತುಲಾಕಾರ ಚಂದ್ರಮಂಡಲವಿದೆ. ಇದಕ್ಕೆ ಪ್ರದ್ಯುಮ್ನ ನಿಯಾಮಕ. ಇಲ್ಲಿ ಹಗಲು ರಾತ್ರಿ ಅಭಿಮನಿದೇವತೆಗಳು ಉಂಟು. ನಾಭಿಯಿಂದ ಹೃದಯಕ್ಕೆ 10 ಅಂಗುಲವಿದೆ. ಹೃದಯದಲ್ಲಿ ಅಷ್ಟದಳಕಮಲವಿದೆ. ಇದಕ್ಕೆ ಸರಸ್ವತಿ,ಭಾರತಿ ಅಭಿಮಾನಿಗಳು. ಇದು ಅರುಣವರ್ಣ. ಇಲ್ಲಿ ಮೂಲೇಶ–ಅಗ್ರೇಶ–ಪ್ರಾದೇಶ ಮೂರುರೂಪಗಳು ಉಂಟು. ಎಂಟು ದಳದಲ್ಲಿ ಡ,ಢ,ಣ,ತ,ಥ,ದ,ಧ,ನ.ಇಲ್ಲಿ ಪ್ರಾಣಸಹಿತ ಸಪ್ತಮಾರುತರು ವಾಸ. ಎಂಟು ದಳದಲ್ಲಿ ಎಂಟು (ಅಷ್ಟಾವಸುಗಳು) ವಸುಗಳು ವಾಸ, ಅಷ್ಟದಿಕ್ಪಾಲಕರು ವಾಸ.

| ಸಂಖ್ಯೆ | ದಿಕ್ಕು | ದಿಕ್ಪಾಲಕರ ಹೆಸರು. | ದಿಕ್ಪಾಲಕರ ಉಪಾಸನಾ ಮೂರ್ತಿ |
|---|---|---|---|
| 01 | ಪೂರ್ವ | ಇಂದ್ರ | ಉಪೇಂದ್ರ |
| 02 | ಆಗ್ನೇಯ | ಅಗ್ನಿ | ಪರಶುರಾಮ |
| 03 | ದಕ್ಷಿಣ | ಯಮ | ಶ್ರೀರಾಮ |
| 04 | ನೈಋತಿ | ನಿಋತಿ | ಜನಾರ್ದನ |
| 05 | ಪಶ್ಚಿಮ | ವರುಣ | ಮತ್ಸ್ಯ |
| 06 | ವಾಯುವ್ಯ | ಪ್ರ.ವಾಯು | ಹಯಗ್ರೀವ |
| 07 | ಉತ್ತರ | ಕುಬೇರ, ಚಂದ್ರ | ಕಪಿಲ, ಕಲ್ಕಿ |
| 08 | ಈಶಾನ್ಯ | ರುದ್ರ | ಶ್ರೀನಾರಸಿಂಹ |

ಎಂಟುದಳದಲ್ಲಿ ವಿಮಲಾದಿ 8 ಭಗವದ್ರೂಪಗಳು. ಇವು ಸ್ತ್ರೀರೂಪಗಳು. ಅ)ಅಣಿಮ; ಆ)ಗಮ; ಇ)ಲಘಮ; ಈ)ಮಹಿಮ; ಉ)ಪ್ರಾಪ್ತಿ; ಊ)ಪ್ರಕಾಮ್ಯ; ಎ)ಈಶತ್ವ; ಏ)ವಶತ್ವ; ಎಂಟು ದಳದಲ್ಲಿ ಚಿಂತನಾ ಮಾಡಬೇಕು. ಎಂಟು ದಳದಲ್ಲಿ ಶಕ್ತ್ಯಾದಿ 12 ಭಗವದ್ರೂಪಗಳು. ದಿಕ್ಕುದಳದಲ್ಲಿ 2 ಭಗವದ್ರೂಪಗಳು. ವಿದಿಕ್ಕು ದಳಗಳಲ್ಲಿ 1 ಅಚಿತೂ 12 ಭಗವದ್ರೂಪಗಳು. ಇವೆಲ್ಲಾ ಸ್ತ್ರೀರೂಪ ಒಚಿದು ಪುರುಷರೂಪ. ಕಮಲಮಧ್ಯ ಕರ್ಣಿಕದ ಮ್ಯಾಲೆ ಅಗ್ರಭಾಗಕ್ಕೆ ಬಿಂಬಮೂರುತಿಯಾದ ಅಗ್ರೇಶ, ಪ್ರಾಜ್ಞನಾಮಕ ಜೀವಾಂಗುಷ್ಟಮೂರುತಿ ಇದ್ದಾನೆ. ಹೃದಯಕಮಲದ ನಾಳಕ್ಕೆಹೊಂದಿ ಮೂಲೇಶ ಅಂಗುಷ್ಟಾಗ್ರಮೂರುತಿ ಇದ್ದಾನೆ. ಈತನಪಾದ ಆಶ್ರಯಿಸಿ ವಾಯುದೇವರು ಇದ್ದಾರೆ. ಈವಾಯು ದೇವರ ಪಾದಾಶ್ರಯನಾಗಿ ಜೀವನಿದ್ದಾನೆ. **ಮೂಲೇಶನಲ್ಲಿ "ಹಂಸಾಯನಮಃ", ಪ್ರಾಣೇಶನಲ್ಲಿ "ಳಂ ಳಾಳೂಕಾಯನಮಃ" ಜೀವನಲ್ಲಿ "ಕ್ಷಂ ಶ್ರೀನರಸಿಂಹಾಯನಮಃ"** ಪ್ರಾತಃಕಾಲ ದಿಂದ ಪ್ರಾತಃಕಾಲದವರೆಗೂ ವಾಯುದೇವರು 21600 ಶ್ವಾಸ ಮಾಡುತ್ತಾರೆ. ಈಮೂಲೇಶ ಅಷ್ಟಭುಜ ಉಳ್ಳವ. ಅಷ್ಟಾಯುಧಗಳನ್ನು ಧರಿಸಿ, ಅಷ್ಟದಳಗಳಲ್ಲಿ ಸಂಚಾರಮಾಡುತ್ತಾನೆ. ಈತಗೆ ಅಷ್ಟಭುಜನಾರಾಯಣ ಎಂತ ಹೆಸರು. ಗರುಡಾರೂಢನಾಗಿ ವಂದೊಂದು ದಳಕ್ಕೆ ಬಂದರೆ, ವಂದೊಂದು ಪ್ರೇರಣಮಾಡಿ ಸಾಧನಮಾಡಿಸುತ್ತಾನೆ. 1.ಪೂರ್ವದಳಕ್ಕೆ ಬಂದರೆ= ಪುಣ್ಯಮತಿ ಐಶ್ವರ್ಯಾಪೇಕ್ಷ

ಕೊಡುವನು. 2.ಆಗ್ನೇಯದಳಕ್ಕೆ ಬಂದರೆ= ಆಲಸ್ಯ ನಿದ್ರಾಲಸ್ಯ ಕೊಡುವನು. 3.ದಕ್ಷಿಣದಳಕ್ಕೆ ಬಂದರೆ = ಕೋಪ ಧರ್ಮದ ಆಕಾಂಕ್ಷೆ. 4.ನೈಋುತಿ ದಳಕ್ಕೆ ಬಂದರೆ= ಪಾಪಕಾರ್ಯ ಮಾಡಿಸುವನು. 5.ಪಶ್ಚಿಮ ದಳಕ್ಕೆ ಬಂದರೆ= ರಸಾಕಾಂಕ್ಷ, ವಿನೋದಬುದ್ಧಿ; 6.ವಾಯುವ್ಯದಳಕ್ಕೆ ಬಂದರೆ= ಗಮನಾಗಮನ ವ್ಯಾಪಾರ.7.ಉತ್ತರದಳಕ್ಕೆಬಂದರೆ= ದ್ರವ್ಯಾಕಾಂಕ್ಷೆ. 8.ಈಶಾನ್ಯದಳಕ್ಕೆ ಬಂದರೆ= ವೈರಾಗ್ಯಬುದ್ಧಿ, ಧನತ್ಯಾಗ. **ಇದಕ್ಕೆ ಸಾವಲೋಕ ಎಂತ ಹೆಸರು.** ಈಕಮಲಕ್ಕೆ 32 ಕೇಸರಗಳಲ್ಲಿ ಓಂಕಾರಾದಿ 8 ವರ್ಣಗಳು;24 ಗಾಯತ್ರಾದಿ ಅಕ್ಷರಗಳು ಉಂಟು. ಈಮಧ್ಯದಲ್ಲಿ ಕರ್ಣಿಕ ಉಂಟು. ಕೇಸರಗಳಲ್ಲಿ ಬಂದರೆ ಜಾಗೃತಾವಸ್ಥ. ನಾಳದಲ್ಲಿ ಸ್ವಪ್ನ, ಮೂಲದಲ್ಲಿ ಗಾಢನಿದ್ರ. ಮೂಲಕ್ಕೆ ದುರ್ಗಾದೇವೇರು. ನಾಳಕ್ಕೆ ಭೂದೇವಿ, ದಳಗಳಿಗೆ ಲಕ್ಷ್ಮೀದೇವೇರು. ಹೂವಿನ ಮೊಗ್ಗಿ ಇದ್ದಹಾಗೆ ಮುಚ್ಚಿಕೊಂಡರೆ ನಿದ್ರಾ, ಸ್ವಲ್ಪ ಅರಳಿದರೆ ಸ್ವಪ್ನ, ಪೂರ್ತಿಅರಳಿ ವಿಕಸಿತವಾದರೆ ಜಾಗ್ರತ. ಇಂಥಾ ಮಧ್ಯಕರ್ಣಿಕಾದಲ್ಲಿ ಪ್ರಾದೇಶನಾಮಕ ಪರಮಾತ್ಮ ದಶಾಂಗುಲಿ ಪರಿಮಿತನಾಗಿಹಾನೆ. ಈತ ಹೃದಯಕಮಲದಿಂದ ನಾಭಿಪರಿಯಂತರ ದಶಾಂಗುಲಿ ಪರಿಮಿತ ಆಕಾಶದಲ್ಲಿ ದಶಾಂಗುಲಿ ಪರಿಮಿತನಾಗಿ ಹಾನೆ. ಈತಗೆ ಸ್ಥಾನೇಶ ಅಂತ ಹೆಸರು. ಪದ್ಮನಾಭನೆಂತಸಹ ಹೆಸರು. ಈತ ಚತುರ್ಭುಜ. ಶಂಖ, ಪದ್ಮ,ಚಕ್ರ,ಗದಾ, ಸ್ಥೂಲದೇಹದಲ್ಲಿ ಮೊದಲು ಪ್ರಾದೇಶನ ಅಪರೋಕ್ಷ. ಮೂಲೇಶಗೆ 8ಭುಜ.ಜಾಗ್ರದ,ವಿಶ್ವ,ಅಗ್ರೇಶ 2 ಭುಜ ಸ್ವಪ್ನ, ಆತ್ಮ, ಪ್ರಾದೇಶ 4 ಭುಜ, ಪ್ರಾಜ್ಞ,ನಿದ್ರಾ, ಅಂತರಾತ್ಮ ಅಂತ ಹೆಸರು. ಮೂರುಮಂದಿಗೆ ಬಿಂಬನೇ ಎಂತ ಸಂದೇಶ. ಕರ್ಣಿಕದಮ್ಯಾಲೆ ಸೂರ್ಯಮಂಡಲ ತ್ರಿಕೋನ ಅಗ್ನಿಮಂಡಲವಿದೆ. ಇದರ ಮ್ಯಾಲೆ 100 ಸ್ತಂಭದ ಭಂಗಾರ ತೇರು ಇದೆ. ಇದು ಮುತ್ತುರತ್ನಗಳಿಂದ ಭಂಗಾರ ಮಯವಾದದ್ದು. ಇಂಥಾ ರಥದಲ್ಲಿ ಕಲ್ಪವೇಕ್ಷವಿದೆ. ಇದರ ನೆರಳಿನಲ್ಲಿ ನಾಲ್ಕುಮೂಲಿಗೆ ವಜ್ರದ ಚೌಕಿ, ಚೌಕಿ ಎಂಟುಮೂಲಿ ರತ್ನದ ಜಗಲಿ ಮತ್ತು ಅಷ್ಟದಳ ಕರ್ಣಿಕೆಯಲ್ಲಿ ವಿಮಲಾದಿ ರೂಪ ಗಳು. ಚಿಂತಿಸಿ, ಸೋಪಾನ ದೇವತೆಗಳನ್ನು ಚಿಂತಿಸಿ ಹಾಸಿಕಿ ಛತ್ರ ರೂಪ ಶೇಷಮ್ಯಾಲೆ ಗುಣತ್ರಯ ಚಿತ್ರಾಸನದಮ್ಯಾಲೆ ಅಗ್ರೇಶನಾಮಕ ಪ್ರಾಜ್ಞರೂಪಿ ಪರಮಾತ್ಮನ ಇಂಥಾ ಪ್ರಾಜ್ಞನ್ನ ಈ ಬಿಂಬನ್ನ ಐಕ್ಯಚಿಂತನಾಮಾಡಿ ಪ್ರಾದೇಶನ ಷೋಡಷೋಪಚಾರ ಪ್ರಜಾಮಾಡಿ ನಾಲ್ಕುಗುಣ ಉಪಾಸನಾ ಮಾಡಬೇಕು. ಇಂಥಾ ಪರಮಾತ್ಮನ ಅರಮನೆಗೆ ವಿವಕ್ಷಾಬೇಧದಿಂದ 13 ದ್ವಾರಗಳು ಉಂಟು. ಒಂದೊಂದು ದಿಕ್ಕಿಗೆ ಮೂರು ಮೂರುಬಾಗಿಲು.

| ದಿಕ್ಕು | ಲಕ್ಷ್ಮೀದೇವಿ | ಪ್ರಾಣದೇವರು | ಭಾರತಿದೇವಿ | ದ್ವಾರಪಾಲಕರು |
|---|---|---|---|---|
| ಪೂರ್ವಕ್ಕೆ | ಶಾಂತಿರಮಾ | ಆದಿತ್ಯನಾಮಕ ಪ್ರಾಣ | ದ್ಯುನಾಮ್ನಿ | ಜಯ,ವಿಜಯ |
| ದಕ್ಷಿಣಕ್ಕೆ | ಜಯಾದೇವಿ | ವ್ಯಾನನಾಮಕ ಚಂದ್ರ | ದಿಗ್‌ನಾಮಕ ಭಾರತಿ | ಬಲ, ಪ್ರಬಲ |
| ಪಶ್ಚಿಮಕ್ಕೆ | ಕೃತೀದೇವಿ | ಅಪಾನನಾಮಕ ಅಗ್ನಿ | ಪೃಥ್ವಿನಾಮಕ ಭಾರತಿ | ಕುಮುದ, ಕುಮುದಾಕ್ಷ |
| ಉತ್ತರಕ್ಕೆ | ಮಾಯಾದೇವಿ | ಸಮಾನನಾಮಕ ಇಂದ್ರ | ವಾಗ್‌ನಾಮ್ನಿ ಭಾರತಿ (ವಿದ್ಯುಮ್ನಾಕ) | ನಂದ, ಸುನಂದ |

ಊರ್ಧ್ವಕ್ಕೆ ಉದಾನನಾಮಾತ್ಮಕ ಮುಖ್ಯವಾಯು; ಆಕಾಶನಾಮಕ ಲಕ್ಷ್ಮಿ ವಿದ್ಯುನ್ನಾಮಕ (ವಾಗ್ ನಾಮಕ) ಭಾರತಿ. ಇಲ್ಲಿ ಜಯಾದಿಗಳೀ ಇಲ್ಲ. ಇಂಥಾ ಪರಮಾತ್ಮ ತನ್ನ ಎದುರಿಗೆ ಊರ್ವಶಿ,ಮೇನಕ, ಇತ್ಯಾದಿ ಅಪ್ಸರ ಸ್ತ್ರೀಯರ ನರ್ತನ. ನದ್ಯಾದಿ ಸ್ತ್ರೀಯರ ಆರತಿಗಳು. ನಾರದ ತುಂಬುರಾದಿ, ಅತ್ರಿಋಷಿಗಳು ಗಂಧರ್ವರ ಎಲ್ಲರ ಸ್ತೋತ್ರಗಳು. ಇಂಥಾ ಬಿಂಬನ ಸ್ತೋತ್ರ ತಿಳಿದು ಉಪಾಸನೆ ಮಾಡಬೇಕು. ಇಂಥಕಮಲದಳ ಕುಸುಮದಂತ ಬಾಗಿರುವದೋ. ಇದನ್ನು **"ಓಂ ಯಂ ಓಂ"** ಎಂಬ ವಾಯುಬೀಜದಿಂದ ಸಮ್ಮುಖಮಾಡಿಕೊಂಡು **"ಓಂ ರಂ ಓಂ"** ಎಂಬ ಅಗ್ನಿಬೀಜದಿಂದ ಅರಳಿಸಿ ಚಿಂತನ ಮಾಡಬೇಕು. ಇಲ್ಲಿ ಇಷ್ಟ ಭಗವದ್ರೂಪಗಳು ಚಿಂತನಮಾಡ ಬೇಕು. ಶುಚಿಶತ್ ನಾಮಕ ವಿಷ್ಣುವೇನಮಃ, "ಓಂ ಳಂ ಳಾಳೂಕಾಯನಮಃ; ಓಂ ಪ್ರಾಣಾಯ ನಮಃ; ಓಂ ಅಪರಾಜಿತಾಯನಮಃ, ಓಂಸೇನಕಾಯನಮಃ, ಓಂಇಂದ್ರಾಯನಮಃ, ಓಂ ವೈಕುಂಠಾಯ ನಮಃ, ಓಂಹಂಸಾಯನಮಃ,ಓಂಲಕ್ಷ್ಮೀನರಸಿಂಹಾಯನಮಃ, ಜೀವಶರೀರವಾಪ್ತಿ ಅನಿರುದ್ಧಾಯ ನಮಃ,ಜೀವಸ್ವರೂಪದೇಹವೇ ತತ್ಶಕ್ತಿಯುಕ್ತ ಮತ್ಸ್ಯಾದಿ ಸಮಸ್ತ ಅವತಾರಧರ ವಿಷ್ಣುವೇನಮಃ, ಹೃತ್‌ಪದ್ಮೇ ವೇದಪ್ರತಿಪಾದ್ಯ ಗಾಯತ್ರಿನಾಮಕ ಭಗವದ್ರೂಪಾಖ್ಯಾಯ ನಮಃ **ಗಾಯತ್ರೀ ನಾಮಾಖ್ಯ ಸಃಪ್ರಾಣಾಯನಮಃ**. ಓಂ ಪಂಚಪ್ರಾಣಾತ್ಮಕ ಯಜ್ಞನಾಮಾಖ್ಯ ವಾಯುವೇನಮಃ, ದೇಹಾಖ್ಯರಥಾಶ್ರಯ ಓಂ ಮುಖ್ಯಪ್ರಾಣಾಂತರ್ಗತ ಜ್ಞಾನಾನಂದಾತ್ಮಕ, ಅಶ್ವಶಬ್ದವಾಚ್ಯಾಯನಮಃ, ಮತ್ತು ಹಂಸಾದಿ 10ರೂಪಗಳ ಸ್ಥಳತಿಳಿದು ಈಅಷ್ಟದಳ ಪದ್ಮದಲ್ಲಿ ಚಿಂತನ ಮಾಡಬೇಕು.

## ಹಂಸನಾಮಕ ಪರಮಾತ್ಮನ ರೂಪಗಳು

1. **ಹಂಸ:** ತಮುಪರಿಹಾರಕ(ಅಜ್ಞಾನಪರಿಹಾರಕ) ದೋಷದೂರ, ಶ್ವಾಸಾಂತರ್ಗತ, ಶ್ವಾಸ ನಿಯಾಮಕ,ಜ್ಞಾನಾನಂದಮಯ, ಸಂಸಾರ ಬಂಧಮೋಚಕ, ಸರ್ವಶರೀರಾಂತರ್ಗತ ಮೂರ್ತಿ ಶ್ರೇಷ್ಠನಾದವ, ಸೂರ್ಯಾಂತರ್ಗತ ಅಂಧ ಪರಿಹಾರಕ.

2. **ಶುಚೇಷತ್:**-ಪಾವನ ಎಂತ ಹೆಸರು. ಶುದ್ಧವಾಗಿಯು, ಶುದ್ಧಮಾಡತಕ್ಕವನಾಗಿಯೂ, ಶುದ್ಧಾಶ್ರಯನಾಗಿಯೂ-ಕಾಲವನ್ನು ಕಳವಳಗೊಳಿಸುವ ನಿರ್ದೋಷ, ಶುಚಿರ್ನಾಮಕ ವಾಯು ದೇವರಲ್ಲಿ, ಇರುವವ, ಏಕಾದಶೇಂದ್ರಿಯಗಳಲ್ಲಿರುವವನು. (ವಿಷ್ಣು ಸುಕರ್ಮಕ್ಕೆ ಶುಚಿ ಎಂತ ಹೆಸರು.

3. **ವಸು:**- ಸರ್ವಭೂತಗಳೊಳಗೆ ತಾನು ಆಶ್ರಯನಾಗಿ ಸರ್ವರಲ್ಲಿ ವಾಸಮಾಡತಕ್ಕವನಾಗಿ ಅಷ್ಟಾ ವಸುಗಳಂತರ್ಗತ ಜ್ಞಾನಧನ, ಜಡಧನಗಳಲ್ಲಿ ಈ ವಸುನಾಮಕ ಅಗ್ನಿ ಅಂತರ್ಗತ ಪಾವಕನಲ್ಲಿ, ಪರಣಗಳಲ್ಲಿ, ರತ್ನಗಳಲ್ಲಿ, ಪಂಚಭೂತಗಳಲ್ಲಿ, ಪಿತೃದೇವತಾ, ಸಸ್ಯಾದಿಗಳಲ್ಲಿ, ಶ್ರೇಷ್ಠನಾದ ಸುಖರೂಪಿ.

4. **ಅಂತರಿಕ್ಷನತ್:**- ತನ್ನುದರದೊಳಗೆ ಸರ್ವಜಗತ್ತು ಇಟ್ಟುಕೊಂಡವನಾದ್ದರಿಂದ ಅಚಿತರಿಕ್ಷ: ಬಾಹ್ಯಾಕಾಶದಲ್ಲಿ, ನಾಭಿಯಲ್ಲಿ, ಆಕಾಶದಲ್ಲಿ, ಇಂದ್ರಿಯದಲ್ಲಿ.

5. **ಹೋತಾ:**- ದಾನ, ದಾನಿಗಳಲ್ಲಿ, ಹೋತನಾಮಕ ಇಂದ್ರಿಯಗಳಲ್ಲಿ, ಶಬ್ದಾದಿವಿಷಯಗಳಲ್ಲಿ, ಅನುಭವಿಸಲು, ಅನುಭವ ಆಹುತಿಕೊಡುವುದರಲ್ಲಿ, ಆಹುತಿ ತೊಗೊಂಬೋದರಲ್ಲಿ, ಹೋತನಾಮಕ ದೇವರ ಕೈಗಳಲ್ಲಿ, ಯಜ್ಞಗಳಲ್ಲಿ, ಯಜ್ಞದ ಅಗ್ನಿಯಲ್ಲಿ,ಯಜ್ಞಸಾಮಗ್ರಿಗಳಲ್ಲಿ, ಇರುವನು.

6. **ವೇದಷತು:**- ಯಜ್ಞದ ಜಗುಲಿಯಲ್ಲಿ, ವಿದ್ಯುಕ್ತವಾದ ಪ್ರಜಾದಿಗಳಿಂದ ಉಪಚಾರ ಹೊಂದಿದ ಯಜ್ಞದ ಹೊರಜಗುಲಿಯಲ್ಲಿ ಇದ್ದಾನೆ.

7. **ಅತಿಥಿ:**- ಪ್ರಳಯದಲ್ಲಿ ಚರಾಚರಗಳನ್ನು ಭಕ್ಷಿಸುತ್ತಾನೆ. ಇದರಿಂದ ಸರ್ವತ್ರ, ಸರ್ವಕಾಲದಲ್ಲಿ, ಇರುವವನಾಗಿದ್ದರಿಂದ ಅತಿಥಿಗಳಲ್ಲಿ, 24 ತತ್ವಾಭಿಮಾನಿಗಳು ಇದ್ದುದರಿಂದ ಅತಿಶಯವಾಗಿ ಉಣ್ಣುತ್ತಾನೆ. ಮಧ್ಯಾಹ್ನಕ್ಕೆ ಬಂದ ಅತಿಥಿಗಳಲ್ಲಿ ಇವನಸಾನ್ನಿಧ್ಯ.

8. **ದ್ರೋಣಸತ್:**- ದ್ರೋಣಕಲಶವೆಂಬ ಅಮೃತಕಲಶದಲ್ಲಿ, ಅಮೃತದಲ್ಲಿ ಇವನ ವ್ಯಾಪ್ತಿ.

9. **ನೃಷಾತ್:**– ಮನುಷ್ಯವತ್ ಅವತಾರಮಾಡಿ, ಮನುಷ್ಯರಲ್ಲಿ ಈಮನುಷ್ಯನಂತೆ, ಸಂಚಾರ ಮಾಡಿದ ಕಾರಣ ಮನುಷ್ಯರಲ್ಲಿದ್ದಾನೆ. (ಸ್ಥೂಲದೇಹದಲ್ಲಿ ಬಿಂಬನಾಗಿದ್ದಾನೆ)

10. **ವರಸತ್:**– ಬ್ರಹ್ಮರುದ್ರಾದಿಗಳಲ್ಲಿ ಇದ್ದು ಸೃಷ್ಟಿ ಲಯ ಕಾರ್ಯಮಾಡುತ್ತಾನೆ.

11. **ದ್ರುತಸತ್:**– ಸತ್ಯವಾಕ್ಯನಾದ್ದರಿಂದ ಸತ್ಯವಾದ ವೇದಗಳಲ್ಲಿ ಇದ್ದು, ಸತ್ಯವಾಕ್ಯದಲ್ಲಿ ಹಾನೆ.

12. **ವ್ಯೋಮಸತ್:**– ಚರಾಚರಪ್ರಪಂಚದಲ್ಲಿ ಸುತ್ತಿಕೊಂಡಿರುವವನಾದ್ದರಿಂದ ವ್ಯೋಮ. ವ್ಯೋಮ ಶಬ್ದವಾಚ್ಯಳಾದ ರಮಾದೇವೇರಲ್ಲಿ ಇದ್ದಾನೆ. (ಸಮಸ್ತ ಜಗತ್ತು ಲಕ್ಷ್ಮೀದೇವೇರಲ್ಲಿ ಇರುತ್ತದೆ. ಆದ ಕಾರಣ ವ್ಯೋಮಶಬ್ದವಾಚ್ಯಳಾಗಿದ್ದಾಳೆ).

13. **ಅಬ್ಜಾ:**– ಜಲದಲ್ಲಿ ಮತ್ಸ್ಯಾವತಾರಮಾಡಿದ್ದರಿಂದ ಜಲಚರಾದಿಗಳಲ್ಲಿ ಹಾನೆ. ಸಪ್ತಧಾತುಗಳಲ್ಲಿ, ಸಪ್ತನಾಡಿಗಳಲ್ಲಿ, ಹೃದಯನಿಯಾಮಕ– ಕಮಲಪತ್ರವಲ್ಲಿ, ನೀರಿನಲ್ಲಿ ಹುಟ್ಟತಕ್ಕಂಥಾ ಶಂಖದಲ್ಲಿ.

14. **ಗೋಜಾ:**– ಭೂಮಿಯೇ ಯೋನಿಯಾದ ವೃಕ್ಷಾದಿಗಳಲ್ಲಿ, ಸ್ವರ್ಗದಲ್ಲಿ, ಕಾಮಧೇನುವಿನಲ್ಲಿ, ರೋಮಗಳಲ್ಲಿ, ಗೋವುಗಳಲ್ಲಿ,ವೀರ್ಯಾದಿ, ಧಾನ್ಯದಲ್ಲಿ.

15. **ಋಷಜ:**– ಮುಕ್ತರಜ್ಞಾನದಲ್ಲಿ, ಸತ್ಯವಾದಿಗಳಾದ ಭಕ್ತರದೆಶಯಿಂದ, ಸರ್ವೋತ್ತಮನೆಂದು ವ್ಯಕ್ತನಾದವ, ಸತ್ಯವಾದಿಗಳಲ್ಲಿ, ವೇದದಲ್ಲಿ.

16. **ಅದ್ರಿಜಾ:**– ಪರ್ವತಗಳಲ್ಲಿ, ಪರ್ವತದಲ್ಲಿ ಜನಿತ ಜಂತುಗಳಲ್ಲಿ, ಪರ್ವತದಿಂದ ಹುಟ್ಟುವ ನದಿಗಳಲ್ಲಿ, ಸ್ಥೂಲದೇಹ, ಅಷ್ಟದಳ ಕರ್ಣಿಕಾದ 32 ಕೇಸರದಲ್ಲಿ.

17. **ರುತಂ:**– ವೇದದಲ್ಲಿ, ವೇದಾರ್ಥಗಳಲ್ಲಿ ಸತ್ಯನೂ–ನಿತ್ಯನೂ–ಸತ್ವದಲ್ಲಿ ಇದ್ದಾನೆ.

18. **ಬೃಹತ್:**– ಸರ್ವರಿಂದ ದೊಡ್ಡವ ನಾದವ. ಮಹದ್ರೂಪದಲ್ಲಿ ಪರಿಪೂರ್ಣಗುಣವುಳ್ಳ ಬ್ರಹ್ಮಾಂಡ ದಲ್ಲಿ ಇದ್ದಾನೆ.

## ಕಮಲಗಳ ವಿಚಾರ

**ಊರುಸ್ಥಳದಲ್ಲಿ ದ್ವಾದಶದಳಕಮಲ:**– ಇಲ್ಲಿದ್ವಾದಶ ಸೂರ್ಯರವಾಸ. ಮುತ್ತಿನ ವರ್ಣದೋ ಪಾದೇಲಿ ಇದೆ. ಇಲ್ಲಿ ಹರಿನಿಯಾಮಕ. ಸಪ್ತಮರುತರವಾಸ. ರುದ್ರದೇವರು ಅಭಿಮಾನಿ. ಶ್ರೀನರಸಿಂಹನ ಉಪಾಸನಮಾಡುತ್ತಾರೆ. ಇಲ್ಲಿ ಟ,ಠ, ಕ,ಖ,ಗ,ಘ,ಙ, ಛ,ಜ,ಝ,ಞ, ಇಲ್ಲಿ ಶಕ್ತ್ಯಾದಿ 12 ಭಗವದ್ರೂಪಗಳು ಇವೆ.

**ಕಂಠದಲ್ಲಿ ಷೋಢಶದಳಕಮಲ:–** 16 ಅಕ್ಷರ ಅ, ಆ, ಇ, ಈ, ಉ, ಊ, ಲು, ಲೂ, ಋ, ಋ, ಎ, ಐ, ಒ, ಔ, ಅಂ, ಅಃ. ಚಂದ್ರಾಭಿಮಾನಿ ದಧಿವಾಮನನ ಪೂಜೆಮಾಡುತ್ತಾರೆ. ಈಕಮಲಗಳಿಗೆ ಶೇಷ ಅಭಿ ಮಾನಿ. ಲಕ್ಷ್ಮೀಪತಿಯನ್ನು ಉಪಾಸನ ಮಾಡುತ್ತಾನೆ. ಇಲ್ಲಿ ಉದಾನಸಹಿತ ಸಪ್ತಮರುತರು ವಾಸ. ಪ್ರದ್ಯುಮ್ನ ನಿಯಾಮಕ. ತೈಜಸ ಈತನ ಮನಸ್ಸು ಇಲ್ಲಿದೆ. ರುದ್ರಾದಿಗಳು ಎಲ್ಲಾ ಇದ್ದಾರೆ.

**ಭ್ರೂಮಧ್ಯದಲ್ಲಿ ದ್ವಿದಳಕಮಲ:–** ಕ್ಷ,ಸ, ಎರಡಕ್ಷರ. ಬ್ರಹ್ಮವಾಯುಗಳವಾಸ. ಗರುಡ ಅಭಿಮಾನಿ. ಶ್ರೀಕೃಷ್ಣನ ಉಪಾಸನೆ ಮಾಡುತ್ತಾನೆ. ಸಪ್ತಮರುತರು ವಾಸ.

**ಶಿರಸ್ಸಿನಲ್ಲಿ ಸಹಸ್ರದಳಕಮಲ:–** ಮಹತತ್ವಕ್ಕೆ ಬ್ರಹ್ಮ ಅಭಿಮಾನಿ. ವಾಯುದೇವರು ಸಹಸ್ರ ರೂಪಗಳಿಂದ ವಿಶ್ವಾದಿ ಸಹಸ್ರ ರೂಪಗಳು ಉಪಾಸನೆ ಮಾಡುತ್ತಾರೆ. ಶ್ವೇತವರ್ಣದೋಪಾದೇಲಿ ಇದೆ. ಬ್ರಹ್ಮದೇವರು ಶ್ರೀರಂಗನಾಥನ ಪೂಜಮಾಡುತ್ತಾರೆ. ಇದರ ಮ್ಯಾಲೆ ದ್ವಾದಶಕಮಲ. ಬ್ರಹ್ಮ ರಂಧ್ರದ್ವಾರ, ಇದಕ್ಕೆ ಶಕ್ತ್ಯಾದಿ 12 ರೂಪಗಳು. ಇದರಲ್ಲಿ ಷಡ್ದಳಕಮಲವಿದೆ. ಶ್ರೀನಾರಾಯಣ ವಾಸ.

## ನಾಡಿಗಳ ಪ್ರಕರಣ

**(ಅಟ್ಟತಾಳ ಪ್ರಾಣ ರೂಪಗಳ ಕಾರ್ಯ)**

| | | |
|---|---|---|
| 01 | ಪ್ರಾಣ | ಹೃದಯಶ್ವಾಸ ಕಾರಣ. |
| 02 | ಅಪಾನ | ಮಲ ಮೂತ್ರ ಬಿಡಿಸುವ ಅಧೋದಿಂದ. |
| 03 | ವ್ಯಾನ | ಕಂಠದಲ್ಲಿ ತೃಷ್ಣೆಯ ಮಾಳ್ಪ. |
| 04 | ಉದಾನ | ತಾಲು ಸ್ಥಾನದಲ್ಲಿ ಆಹಾರವನು ಭುಂಜಿಸುವ, ಆಕಳಿಸುವ. |
| 05 | ಸಮಾನ | ನಾಭಿಯಲ್ಲಿ ಕೃಶಾನುವಿಗೆ ಬೀಸಿ ಉದ್ದೀಪನಮಾಡುವ. |
| 06 | ನಾಗ | ಆಹಾರವ ಕೊಡುತಿಪ್ಪ. |
| 07 | ಕೂರ್ಮ | ರೆಪ್ಪೆ ಹಾಕಿಸುವ,ಮುಚ್ಚಿಸುವ |
| 08 | ಕೃಕಲ | ವಾಯು ನಾಶಿಕಾದಲ್ಲಿ ವಾಸನೆ ತೆಗೆದುಕೊಂಬ |

| | | |
|---|---|---|
| 09 | ಧನುಂಜಯ | ಎಂಟು ದಿಕ್ಕಿನ ಶಬ್ದ ಕರ್ಣದಲಿ ಶೂಭಾಶುಭ ಕೇಳಿಸುವದು. |
| 10 | ದೇವದತ್ತ | ಜಿಂಹ್ವೆಯಲಿ ಚೆನ್ನಾಗಿ ವಾಕ್ಯಗಳ ನುಡಿಸುವ, ಕೊಡಿಸುವ |

"ಬನ್ನಬಡಿಸುವರು ಇವರೆ ದೈತ್ಯರೊಳಿದ್ದು। ಗುಡಿಸೆ ದಶವಾಯು ಪ್ರವರ್ತಿಸುವರಯ್ಯ। ಅನಂತ ಬಗೆಯಲ್ಲಿ ಸಾಧನೆಮಾಡುತ್ತ। ಅನಚಿತ ಜೀವರಾಶಿಯೊಳಗೆ ವಾಸವಾಗಿ।"

"ಈ ದಾಸ ಪ್ರಾಣರು ಶ್ರೀಶನ ಸೇವೆಗೋಸುಗ ಅಧಿಷ್ಠಾನರಾಗಿದ್ದಾರೆ ।" ॥ಜತೆ ॥ "ತಿಳಿದು ಈಬಗೆಯಿಂದ ಧ್ಯಾನವ ಮಾಡಿರೋ । ವಲಿವನು ವಿಜಯವಿಠ್ಠಲ ನಾಡಿಯೊಳು ಪೊಳೆವ ॥"

ಎಲ್ಲಾ ನಾಡಿಗೆ ಮೂಲಾಧಾರ ತುಂದಿ. ಮೂಲಾಧಾರವಿಡಿದು ಶಿರಃ ಪರಿಯಂತ ಬಹು ಸೂಕ್ಷ್ಮ ದಿಂದ ಋಜುವಾಗಿ (ನೆಟ್ಟಗೆ) ಒಂದೇನಾಡಿಹೋಗಿದೆ.

**ಸುಷುಮ್ನ ನಾಡಿ ಪ್ರಬೇಧಗಳು:**

1. ಇದೇ ಸುಷುಮ್ನನಾಡಿ ಬ್ರಹ್ಮನಾಡಿಯು ಐದು ಪ್ರಬೇಧವಾಗಿದೆ.

| | | | | |
|---|---|---|---|---|
| 1. | ಪಶ್ಚಿಮಕ್ಕೆ | ವಜ್ರಿಕಾ | ಹರಿದ್ವರ್ಣ | ಪ್ರದ್ಯುಮ್ನ |
| 2 | ಉತ್ತರಕ್ಕೆ | ಆರ್ಯ | ನೀಲವರ್ಣ | ಅನಿರುದ್ಧ |
| 3 | ಪೂರ್ವಕ್ಕೆ | ಪ್ರಕಾಶಿನಿ | ಧವಳವರ್ಣ | ವಾಸುದೇವ |
| 4 | ದಕ್ಷಿಣಕ್ಕೆ | ವೈದ್ಯುತಾ | ಪಿಂಗಳವರ್ಣ | ಸಂಕರ್ಷಣ |
| 5 | ಮಧ್ಯೇ | ಬ್ರಹ್ಮನಾಡಿ | ಲೋಹಿತವರ್ಣ | ನಾರಾಯಣ |

ಈ ಐದು ವಿಭಾಗಗಳಾದರೂ ಸುಷುಮ್ನಾ ಎಂದು ಒಂದೆನಾಡಿ ಎನಿಸುತ್ತದೆ. ಈ ಸುಷುಮ್ನಾ ನಾಡಿಯಲ್ಲಿಯೇ 32 ಕಮಲಗಳು, ಹೃದಯಾಷ್ಟ ದಳಕಮಲದಲ್ಲಿಯೇ ಬಿಂಬದರ್ಶನ. ಸುಷುಮ್ನಾ ನಾಡಿಯೇ ಪ್ರಧಾನ, ತಂತ್ರಸಾರದಲ್ಲೂ ಹೇಳಿದ್ದಾರೆ.

2. ಸುಷುಮ್ನಾ ನಾಡಿಗೆ ಮುಖ್ಯನಾಲ್ಕು ಬೇರೆ ಪ್ರಧಾನ ನಾಡಿಗಳು:

| | | | | |
|---|---|---|---|---|
| 01 | ಪೂರ್ವಕ್ಕೆ | ಧರಣಿ | ಶುಭ್ರವರ್ಣ | ವಾಸುದೇವ |
| 02 | ಪಶ್ಚಿಮಕ್ಕೆ | ವಜ್ರಿಕಾ | ಹರಿದ್ವರ್ಣ | ಪ್ರದ್ಯುಮ್ನ |
| 03 | ದಕ್ಷಿಣಕ್ಕೆ (ಬಲ) | ಪಿಂಗಳ | ಪಿಂಗಳ | ಸಂಕರ್ಷಣ |
| 04 | ಉತ್ತರಕ್ಕೆ (ಎಡ) | ಇಡಾನಾಡಿ | ನೀಲವರ್ಣ | ಅನಿರುದ್ಧ |

3. ಇಡಾನಾಡಿಯು, ತುಂದಿಯಿಂದ ಎಡಭಾಗದಲ್ಲಿದ್ದು ಹೊಕ್ಕಳಿಂದ ನಾಕು ಅಂಕಿಯಂತೆ ಬಲ ಭಾಗಕ್ಕೆ ಬೆಳದು ಬಲಕಿವಿಗೆ ಹೋಗಿದೆ (ಇಡಾನಾಡಿ) ಗಂಗಾನದಿ.

4. ಪಿಂಗಳಾನಾಡಿಯು ತುಂದಿ ಬಲಭಾಗದಲಿಂದಾ ಹೊಕ್ಕಳಾರಂಭಿಸಿ ನಾಲ್ಕು ಅಂಕಿ ಯಂತೆ ಎಡಭಾಗಕ್ಕೆ ಬೆಳೆದು ಎಡ ಕಿವಿಗೆ ಹೋಗಿದೆ. ಇದು ಪಿಂಗಳಾ ನಾಡಿಯಲಿ ಯಮುನಾನದಿ.

ಇಡಾಂಶಗಳು ಬಲಭಾಗಕ್ಕೆ = 50 ಶಾಖಾಗಳು.
ಪಿಂಗಳಾಂಶಗಳು ಎಡ ಪಾರ್ಶ್ವಕ್ಕೆ = 50 ಶಾಖಾಗಳು.
ಮೂಲ ಸುಷುಮ್ನ ನಾಡಿ = 01

ಹೀಗೆ 101 ಪ್ರಧಾನ ನಾಡಿಗಳು. 101 ನಾಡಿ ಇವು ದೇಹದಲ್ಲಿ ಇರತಕ್ಕ ವಿವರ.

| | | | | | |
|---|---|---|---|---|---|
| 01 | ಹೃದಯದಲ್ಲಿ | 32 | 06 | ಲಿಂಗದಲ್ಲಿ | 01 |
| 02 | ಶಿರಸ್ಸಿನಲ್ಲಿ | 39 | 07 | ಗುದದಲ್ಲಿ | 01 |
| 03 | ಕಣ್ಣಿನಲ್ಲಿ | 02 | 08 | ಕೈಭುಜತೋಳು | 10 |
| 04 | ಕಿವಿಯಲ್ಲಿ | 02 | 09 | ಕಾಲುತೊಡೆ | 10 |
| 05 | ಬೆನ್ನಿನಲ್ಲಿ | 02 | 10 | ಜಿಂಹ್ವೆಯಲ್ಲಿ | 01 |
| | ಒಟ್ಟು | | | | 100 |

ಹೀಗೆ 100+01 ಸುಷುಮ್ನ ನಾಡಿ =101. ಹೀಗೆ 101 ನಾಡಿಗಳು ಇರುವ ಕ್ರಮ. ಇವು ಪ್ರಧಾನ ನಾಡಿಗಳು. ಇದಕ್ಕೆ ಪುರಂದರ ದಾಸರ ಸುಳಾದಿ:–**"ಮನವೆ ಲಾಲಿಸುವದು ಪಂಚೌಶದ್ದಳ ವುಳ್ಳ । ಘನವಾದ ಪಿಂಗಳವು ಬಲನಾಶಿಕದಿ ಉಂಟು।**

ಅನುದಾನ ಇಡಾನಾಡಿ ಪಂಚೌದಂಶದಿಂದ ವಾಮನಾಶಿಕಾದ್ಯಂಟು। ಅಣುನಾಲಿಗಿಯಿಂದ ಎಡದವಡಿಯಲ್ಲಿ ವಜ್ರ। ಅನುಮೇಯಿಸುವದು ನಂದಿನಿ ನರವನ್ನು ಬಲದದವಡಿಯಲ್ಲೀ। ವಿನಯದಿ ತಿಳಿಕಂಡ್ಯಾ ಸುಷುಮ್ನನಾಡಿ ವಿವರ। ಎಣಿಸು ತೊಡೆಯಲ್ಲಿ ದಶಭುಜದೊಳು ದಶ। ಬೆನ್ನು ಕ್ವರ್ಣಾ ಕಣ್ಣುಗಳೊಳು ಎರಡೆರಡು। ಮಣಿದಿಪ್ಪದಯಾ ಜಿಂಹಾ ಗುದ ಲಿಂಗ ದೊಂದೊಂದು। ನೆನಿ ಮೂರ್ಧ್ನಾದಲ್ಲಿ ನರ–ಮೂವತ್ತರೊಂಭತ್ತು ಹೃದಯದಿ ಮೂವತ್ತೆರಡು। ನಿತ್ಯದಿ ತಿಳಿಕಂಡ್ಯಾ। ಇನಿತು ಸುಷುಮ್ನಾ ಸೇರಿ ನೂರೊಂದೆನಿಪದಯ್ಯಾ। ದಿನದಿನ ತಿಳಿಯುತ್ತ ಸ್ನಾನಮಾಳ್ಪುವಂಗೆ। ಜನನ ಮರಣ ದೂರಮಾಳ್ಪಾ ಪುರಂದರ ವಿಠ್ಠಲನು ॥ ಮತ್ತು ಆಧ್ಯಾತ್ಮ ಮಾಲಾ ಪ್ರಮಾಣ:

5. ಈ 101ಕ್ಕೆ ಒಂದೊಂದಕ್ಕೆ 100 ರಂತೆ ಶಾಖಾ ಬೆಳೆದು ಗುಣಿಸಿದರೆ = 10100 ಹತ್ತುಸಾವಿರ ನೂರುನಾಡಿಗಳು. ಇದರಲ್ಲಿ : 100 ಶಾಖಾನಾಡಿಗಳು.

5000 ಶಾಖಾನಾಡಿ ಪಿಂಗನಾಡಿವು. 5000 ಶಾಖಾನಾಡಿ ಇಡಾಂಶದವು. 10100 ಒಟ್ಟು ನಾಡಿಗಳು. 6. ಈ 10100 ಹತ್ತುಸಾವಿರ ನೂರುನಾಡಿಗೆ ನಾಲ್ಕು ಭಾಗದ ವಿವರ:

| | | |
|---|---|---|
| 1 | 100 ನಾಡಿಗಳಿಗೆ 10 ಶಾಖೆಯಂತೆ | 1000 |
| 2 | 100 ನಾಡಿಗಳಿಗೆ 9 ಶಾಖೆಯಂತೆ | 900 |
| 3 | 300 ನಾಡಿಗಳಿಗೆ 8 ಶಾಖೆಯಂತೆ | 2400 |
| 4 | 6600 ನಾಡಿಗಳಿಗೆ 6 ಶಾಖೆಯಂತೆ | 97600 |
| | 10100 ಇವಕ್ಕೆ | 61900 |
| | ಮುಖ್ಯನಾಡಿಗಳು | 100 |
| | ಹೀಗೆ ಮಿಳಿತವಾದರೆ ಒಟ್ಟಿಗೆ ನಾಡಿಗಳು | 72000 |
| | ಮೊದಲಿಗೆ ಹೇಳಿದ ಪ್ರಧಾನ ನಾಡಿಗಳು | 101 |
| | | 72101 |

ಇವಕ್ಕೆ ನಾಡಿಕಲ್ಪಲತಾ ಪ್ರಮಾಣ:– "ತಂತ್ರ ನಾಡೀಸುಶಾಖಾನಾಂ ಪ್ರತಿ ಶಾಖಾ ದಶಾಂತಿ ಮಾ । ನವಶಾಖಾಚ ತಿಸ್ರೇಣ ಅಷ್ಟೌಶಾಖಾ ಷಡ್ಯೈವತು ॥

ಶಿಷ್ಟಷಣ್ಣಾವತೀ ನಾಂತು ದ್ವಾಸಪ್ತತಿ ಇಮೇಮತಾ । "ಇತಿ ನಾಡೀಕಲ್ಪಲತಾ ಯಾಮಪಿ ಉಕ್ತಂ ॥

| | |
|---|---|
| 7.ಚರಣದಲ್ಲಿ | 12000 ನಾಡಿಗಳು |
| ಮಧ್ಯದೇಹದಲ್ಲಿ | 14000 ನಾಡಿಗಳು |
| ಬಾಹುವಿನಲ್ಲಿ | 4000 ನಾಡಿಗಳು |
| ಶಿರಸ್ಸಿನಲ್ಲಿ | 6000 ನಾಡಿಗಳು |
| | 36000 ಈನಾಡಿಗಳು ಬಲಭಾಗಕ್ಕೆ ಪುರುಷರೂಪಿ ಹರಿ ಮಹತ್ತತ್ವಾತ್ಮಕ. |
| | 36000 ಈನಾಡಿಗಳು ಎಡಭಾಗಕ್ಕೆ ಸ್ತ್ರೀರೂಪಿ ಹರಿ (ಅಹಂಕಾರ ತತ್ವಾತ್ಮಕ) |

ಇಂತು 72000 ಎಪ್ಪತ್ತೆರಡು ಸಹಸ್ರ ನಾಡಿಗಳಿವೆ. ಬೃಹತೀಸಹಸ್ರ ಛಂಧಸ್ಸು 36+36= 72ಸಾವಿರ ವ್ಯಂಜನ ಬೇಧಗಳುಂಟು. ನೂರುವರುಷ ಪುರುಷಾಯುಷ್ಯ = 100 ಫ 360ದಿನಗಳಿಂದ ಹೆಚ್ಚಿಸಲು =36000 ದಿವಸಗಳಾಗುತ್ತವೆ, ಹಗಲು ರಾತ್ರಿ ದ್ವಿಗುಣಿತವಾದರೆ 72000 ಸಾವಿರ. + 100 ಹಿಂದೆ ಹೇಳಿದ ಸುಷುಮ್ನಾಂಶ ನಾಡಿಗಳು + 1 ಸುಷುಮ್ನ ನಾಡಿ = 72101 ನಾಡಿವಿಭಾಗವೆಂದು ಹೇಳಿದ್ದಾರೆ. ಇದಕ್ಕೆ ಪ್ರಮಾಣಗಳು ಮೇಲೆ ಉದಹರಿಸಿದ ಸುಳಾದಿಗೂ, ಉಪನಿಷತ್ತಿನಲ್ಲಿ ಪೇಳಿದ ನಾಡೀ ಪ್ರಭೇದ ಮಾಡಿದ್ದಕ್ಕೂ ಸ್ವಲ್ಪ ವ್ಯತ್ಯಾಸ ಶಾಖಾ ಪ್ರಭೇಧ ಕಂಡು ಬರುತ್ತದೆ. ಈ 10,9,8,6–100 ಶಾಖಾ ಪ್ರಭೇಧಗಳು ಏನುಕಾರಣ ಆಗಿವೆ ಎಂಬುದು ಮತ್ತು ಉಪನಿಷತ್ತಿನಲ್ಲಿ 7ಶಾಖಾ, 20ಶಾಖಾ ವಿಚಾರ ಪ್ರಭೇಧ ವಾದರೂ ಬೇರೆ ವಿಧಾನವಿಧೆ. ಈ ಎರಡೂ ವಿಧಾನ ಜ್ಞಾನಿಗಳಿಂದ ತಿಳಿಯುವುದು.

## ನಾಡಿಗಳಲ್ಲಿ ಇರುವ ನದಿಗಳ ವಿವರ:–

| ಕ್ರ.ಸಂ. | ಸ್ಥಾನ | ನಾಡಿಗಳು | ನದಿಗಳು | ಭಗವದ್ರೂಪ |
|---|---|---|---|---|
| 1 | ವಾಮ ನಾಸ | ಇಡಾ | ಭಾಗೀರಥಿ | ಮಾಧವ |
| 2 | ದ.ನಾಸ | ಪಿಂಗಳ | ಯಮುನಾ | ಚಾಪಧರಕೃಷ್ಣ |

| | | | | |
|---|---|---|---|---|
| 3 | ವಾಮ ಶ್ರೋತ್ರ | ಹಸ್ತಿನಿ | ಸಿಂಧು | ಕ್ಷೀರಾಬ್ಧಿಶಾಯಿ |
| 4 | ದ.ಶ್ರೋತ್ರ | ಗಾಂಧಾರಿ | ಕಾವೇರಿ | ಶ್ರೀರಂಗ |
| 5 | ವಾಮನೇತ್ರ | ಪುಂಸ | ಗೋಮತಿ | ಮಧುಸಾದನ |
| 6 | ದ.ನೇತ್ರ | ಲಂಬೂಸಾ | ತಾಮ್ರಪರ್ಣಿ | ಅನಂತಶಯನ |
| 7 | ಜಿಂಹ್ವೆ | ಸರಸ್ವತಿ | ಗಂಡಕಿ | ತ್ರಿವಿಕ್ರಮ |
| 8 | ವಕ್ಷ | ನಂದ | ಕೃಷ್ಣವೇಣಿ | ಶ್ರೀರಂಗಧರ |
| 9 | ವಾಮಕುಕ್ಷಿ | ಪೂರ್ಣಾ | ಪಯಸ್ವಿನಿ | ಹೃಷೀಕೇಶ |
| 10 | ದ.ಕುಕ್ಷಿ | ವಾರುಣಿ | ಗೋದಾವರಿ | ನಾರಾಯಣ |
| 11 | ಗುದ | ಕುಹ | ಸೋಮನಂದಿನಿ | |
| 12 | ಲಿಂಗ | ಶಂಕಿನಿ | ತಪತಿ | |

ಗುದದಿಂದ ಶಿರಪರಿಯಂತರ ಬ್ರಹ್ಮನಾಡಿ, ಸುಷುಮ್ನ ಎಂತ ಋಜುವಾಗಿ ಊದುಕೊಳಿವಿ ಯಂತೆಇದೆ. ಇದಕ್ಕೆ ಬ್ರಹ್ಮ ದೇವರು ಅಭಿಮಾನಿ. ವೃಷಣಾಸನ ಮಧ್ಯ ತುಂದಿ ಅಂತವಂದು ಗಡ್ಡಿಇದೆ. ಈಗಡ್ಡಿಯು ನಾಲ್ಕುದಿಕ್ಕುಗಳಿಗೆ ನಾಲ್ಕುನಾಡಿಗಳಿವೆ. ವಜ್ರಿಕಾನಾಡಿ ಇದಕ್ಕೆಶಾಖೆಗಳು 25 ನಾಡಿ. ಆರ್ಯಕ 25 ಶಾಖೆಗಳು. ಪ್ರಕಾಶಿನಿ 25 ಶಾಖೆಗಳು. ವೈಧೃತಿ 25 ಶಾಖೆಗಳು. ಅಂತು 101 ಪ್ರಧಾನನಾಡಿಗಳು. ಸುಷುಮ್ನಕ್ಕೆ ಮತ್ತು ನಾಭಿಯಿಂದ ನಾಲ್ಕು ನಾಡಿಗಳಿವೆ. ವಜ್ರಕಾ ನಾಡಿಗೆ 25 ಶಾಖಾನಾಡಿಗಳು. ಆರ್ಯಕನಾಡಿಗೆ 25 ನಾಡಿ, ಇಡಾಕ್ಕೆ 25 ನಾಡಿ, ಪಿಂಗಳಾಕ್ಕೆ 25ನಾಡಿ, ಅಂತು 100 ಇವು ನೂರರಂತೆ ಬೆಳೆದು 10100 ನಾಡಿಗಳಾದವು. 100 ನಾಡಿಗಳು 2 ರಂತೆ ಬೆಳೆದು 200 ನಾಡಿಗಳಾದವು. 300 ನಾಡಿಗಳು 8ರಂತೆ ಬೆಳೆದು 2400ಆದವು. 9600 ನಾಡಿಗಳು 6ರಂತೆ ಬೆಳೆದು 57600 ಆದವು. 100 ನಾಡಿ 10ರಂತೆ ಬೆಳೆದು 1000 ಆದವು. ವಟ್ಟಿಗೆ 72101 ನಾಡಿಗಳು ಇವು ದೇಹಕ್ಕೆ ವ್ಯಾಪಿಸಿವೆ ಎಂದರೆ ಕಾಲಿಗೆ ಬಲಕ್ಕೆ ಎಡಕ್ಕೆ ಕೂಡಿಸಿ 24000 ನಾಡಿಗಳು;(ಅಂದರೆ ಬಲಕಾಲಿಗೆ 12000+ 12000 ಎಡಕಾಲಿಗೆ) ಮಧ್ಯ ದೇಹಕ್ಕೆ 20000 ಎಡ ಬಲಭಾಗ ಕೂಡಿಸಿ. 8000 ಬಾಹುಗಳಿಗೆ; 4000 ಶಿರಸ್ಸಿಗೆ. ಅಂತೂ 72000 ನಾಡಿಗಳು.36000 ಬಲಭಾಗಕ್ಕೆ ಪರಮಾತ್ಮನ ಮರುಷರೂಪಗಲು.ಇದರಲ್ಲಿ ಸ್ವರ ಅಕ್ಷರಗಳು=16. ಇಲ್ಲಿ ಮಹತತ್ವವಿದೆ. ಇದಕ್ಕೆ

ಬ್ರಹ್ಮಾ, ವಾಯು, ವಾಣಿ,ಭಾರತಿ ಋಷಿಗಳಂತೆ ತಪಸ್ಸುಮಾಡುತ್ತಾರೆ. ಇಲ್ಲಿ ವ್ಯಂಜನಾಕ್ಷರಗಳಿವೆ. ಬಲಭಾಗದ ನಾಡಿ ಮತ್ತು ಎಡಭಾಗದ ನಾಡಿಗಳಲ್ಲಿ ಬೃಹತೀ ನಾಮಕ ವಾಯುದೇವರು ಇದ್ದಾರೆ. ಅಂತರ್ಗತದ ಬೃಹತೀನಾಮಕ ಪರಮಾತ್ಮನಿದ್ದಾನೆ. ಬಲಕ್ಕೆ ಪುರುಷನಾಡಿಗಳು, ಎಡಕ್ಕೆ ಸ್ತ್ರೀನಾಡಿಗಳು. ಇದು ಪುರುಷರಿಗೆ ನೀತ ಸ್ತ್ರೀಯರಿಗೆ ವಿಪರೀತ ತಿಳಿಯಬೇಕು. ಪುರುಷನಾಡಿಯೊಳಗೆ ಅಜಾನುಜರು ಯಾವಾಗಲು ಅಭಿಮಾನಿಗಲು. ಸ್ತ್ರೀನಾಡಿ ಗಳಲ್ಲಿ ಅಜಾನುಜರ ಹೆಂಡಂದಿರು ರಾತ್ರಿ ಅಭಿಮಾನಿ ದೇವತೆಗಳು. ವಂದೊಂದು ನಾಡಿ ಗಳೊಳಗೆ 24 ತತ್ವಗಳಿವೆ. ತತ್ವೇಶರು ಹೆಂಡಂದಿರಸಹ ಇದ್ದಾರೆ. ಅಂತು ವಬ್ಬ ತತ್ವೇಶನಲ್ಲಿ ಹೆಂಡತಿಯಲ್ಲಿ ಕೂಡಿಸಿ ತುರ್ಯನಾಮಕ ವಾಸುದೇವ ಇವರ ಹೆಂಡತಿ ಚಿತ್‌ಪ್ರಕೃತಿ ಮಾಯಾ ದೇವಿ ಯಿದ್ದಾರೆ. ಅಂತು 24X48=72000s ಸೇರಿ 3,45,60,000. ಮಾಯಾಪತಿ ವಾಸುದೇವ ರೂಪಗಳು. ಮನುಷತ್ವೇನ ಆಯುಷ್ಯ 100. ವರ್ಷಕ್ಕೆ 360 ದಿನಗಳು. 100 ವರ್ಷಕ್ಕೆ 36000 ದಿವಸಗಳು. ಹಗಲು ರಾತ್ರಿಗಳು ಸೇರಿ 72000 ದಿವಸಗಳ ರೂಪುಗಳಾದವು. ಆದಕಾರಣ ಈ ಭರತಖಂಡದಲ್ಲಿ ವಬ್ಬ ಮನುಷ್ಯ ಸಾಧನಕ್ಕೆ ಬಂದಾಗ ವಬ್ಬ ಸದ್ಬ್ರಾಹ್ಮಣನು ವಪ್ಪತ್ತು 100 ವರುಷದೊಳಗೆ ವಂದುದಿವಸ, ಈ ಅನುಸಂಧಾನದಿಂದ ಉಣಿಸಿದರೆ, 100 ವರುಷ ದಿವಸ ವಬ್ಬ ದಂಪತಿಗೆ ಉಣಿಸಿದಹಾಗೆ ಬ್ರಹ್ಮದೇವರು ಲೆಖ್ಖ ಬರೆಸುತ್ತಾರೆ. ನಿತ್ಯ ಇಂಥಾ ಅನುಸಂಧಾನ ಪುಣ್ಯಮಾಡಿದವರಿಗೆ ಲೆಖ್ಖವೇ ಅಸಾಧ್ಯ. ಮತ್ತೆ ಸುಷುಮ್ನಶಾಖಾ 10 ನಾಡಿಗಳು ಇವುಬೇರೆ. ಈನಾಡಿಗಳಲ್ಲಿ ಏಕಾದಶೇಂದ್ರಿಯಗಳಿಗೆ ಸೇರಿವೆ. ಇದರಲ್ಲಿ ವಾಯು ದೇವರು ನಾಗ, ಕೂರ್ಮ, ಕೃಕಲ, ದೇವದತ್ತ, ಧನುಂಜಯ, ಮತ್ತು ಪಂಚಪ್ರಾಣಗಳು ಹಾಗೂ ಪ್ರಾಣ ಅಚಿತು ಹತ್ತು ರೂಪದಿಂದ ಸುಷುಮ್ನ ನಾಡಿಯ 10 ದಿಕ್ಕಿನಲ್ಲಿ ಇದ್ದಾರೆ. ಶಬ್ದಕೃತ್ ಸುಷುಮ್ನ ನಾಡಿಯಲ್ಲಿ, ಮನಸ್ಸು ಅಭಿಮಾನಿ ಗರುಡ, ಶೇಷ, ರುದ್ರ ಷಣ್ಮಹಿಷೆಯರು, ಇಂದ್ರ ಕಾಮರು. ಗೋವಿಂದ ನಿಯಾಮಕ. ಶಬ್ದಗ್ರಹಣ- ಶ್ರೋತ್ರೇಂದ್ರಿಯ-ಚಂದ್ರ, ವಿಷ್ಣುರೂಪ ಗ್ರಹ ನೇತ್ರೇಂದ್ರಿಯ-ಸೂರ್ಯ, ಮಧುಸೂಧನ ನಿಯಾಮಕ. ಸ್ಪರ್ಶಗ್ರಹಣ-ತ್ವಗೇಂದ್ರಿಯ- ಅಹಂಕಾರಿಕ ಪ್ರಾಣ- ನಿಯಾಮಕ ತ್ರಿವಿಕ್ರಮ. ರಸೇಂದ್ರಿಯ- ನಾಡಿ ಜಿಂಹ್ವ- ವರುಣ, ನಿಯಾಮಕ ವಾಮನ. ಗಂಧಗ್ರಹಣ-ನಾಶಿಕ- ಶ್ರೀಧರ-ಹಸ್ತ- ಜಿಹ್ವೆ-ಆಲಂಬುಸನಾಡಿ. ಪಾಣಿದ್ವಯ-ದಕ್ಷ-ಪದ್ಮನಾಭ.ಯಶಾಭಿಮಾನಿ-ವದನ-ಅಗ್ನಿ-ಹೃಷೀಕೇಶ- ಗಾಂಧಾರಿ-ಪುಷ.ಪಾದ ದ್ವಯ-ಜಯಂತ-ದಾಮೋದರ. ಶಂಖಿನಿ-ಗುದ- ಮಿತ್ರನಾಮಕ ಸೂರ್ಯ-ಕುಹ-ಉಪಸ್ಥ- ಸ್ವಾಯಂಭೂ ಮನು-ವಾಸುದೇವ.

## ದ್ವಾದಶದ್ವಾರದಲ್ಲಿ

11.ಪೂಶಾನಾಡಿ–ಚಕ್ಷು, ಇಚ್ಛಾ–ನಾಶಿ, 12.ನಾರಿ–ಉಪಸ್ಥನಸು ಉಂಟುವಾಡಿ ಸಂಭೋಗೇಚ್ಛಾ, ಉಪವಾಸ,13.ಶಿಕಾನಾಡಿ–ಮನಸ್ಸು, ಸಂಭೋಗಕ್ರಿಯು, 14.ಅಸುರನಾಡಿ–ಅಹಂಕಾರವೃತ್ತಿ, ಸುರಾ ಪಾನೇಚ್ಛ, 15.ಸೂರ್ಯ ನಾಡೀಬುದ್ಧಿ,ತಿಳುವಿಕಿ, ಇಚ್ಛಾ–ಭಾಸ್ವತಿನಾಡಿ ಈಪೂರ್ವಾದಿ ನಾಡಿಗಳಲ್ಲಿ, ಆಯಾ ಇಂದ್ರಿಯಗಳಲ್ಲಿಮನಸ್ಸು ಪ್ರವೇಶಮಾಡಿಸುತ್ತಾನೋ ಅದರಂತೆ ಇಚ್ಛಾ ಹುಟ್ಟುತ್ತದೆ.

1.ಪ್ರಾಣನಲ್ಲಿ–ನಾರಾಯಣ. 2.ಅಪಾನನಲ್ಲಿ–ವಾಸುದೇವ–ನಾಭಿ; 3.ಸಮಾನ–ಸಂಕರ್ಷಣ–72000 ನಾಡಿಗಳು. 4.ವ್ಯಾನ–ಅನಿರುದ್ಧ, ಈಪ್ರಾಣೋಪಾನ ಋಉಪಗಳು ವ್ಯಾನವಾಯು ಸಂಚಾರ ಇಲ್ಲದಿದ್ದರೆ–ದೇಹ ನಾಶವಾದೀತೆಂದು, ಪ್ರಾಣೋಪಾನರಿಗೆ ಸಂಧಿಮಾಡಿಸುತ್ತಾನೆ. ಆಗ್ಗೆ ಪ್ರಾಣೋ ಪಾನರು–ನಾರಾಯಣ–ವಾಸುದೇವರು ಲೀಲೆಯಿಂದ ವ್ಯಾನ–ಅನಿರುದ್ಧನಂತೆ ಆಗುತ್ತದೆ. ಪಂಚಕ ಚತುಷ್ಟಯದಲ್ಲಿ ಅನಿರುದ್ಧನಂತೆ ಆಗುತ್ತಾನೆ. ವ್ಯಾನನಿಂದ ಮುಖ್ಯವಾಯುದೇವರಿಂದ ಮಾಡತಕ್ಕ ವ್ಯಾಪಾರ ಪ್ರಾಣೋಪಾನರು ಭಗವಂತರುಮುಖ್ಯಾಮುಖ್ಯ ವಾಯುವಿನಲೀಲೆ ಯಿಂದ ಮಾಡುತ್ತಾರೆ. ಪ್ರಾಣೋಪಾನರು ಐದುವಿಧ ಪರಮಾತ್ಮನ ರೂಪಗಳು. 1.ಮುಖ್ಯವಾಯುರೂಪಗಳು. 2.ಪ್ರಾಣಪುತ್ರ ರೂಪಗಳು. 3.ಶಿವಪುತ್ರರೂಪಗಳು. 4.ದಾಸಪ್ರಾಣ ರೂಪಗಳು. ಅಂತು ಐದುವಿಧ. ಇಷ್ಟುಪ್ರಾಣೋ ಪಾನ ವ್ಯಾನೋದಾನ ಎಂತ ಹೆಸರು. ಆದರೆ ಅವರ ಅಂತರಂಗ ಹೆಸರುಗಳು ಬ್ಯಾರೆ: ಹ್ಯಾಗೆಂದರೆ 1.ಪ್ರಾಣ–ಶೇಷ; 2.ಅಪಾನ–ಗರುಡ; 3.ವ್ಯಾನ–ಮುಖ್ಯವಾಯು. 4.ಉದಾನ–ರುದ್ರ; ಸಮಾನ–ಇಂದ್ರ; ಇಷ್ಟು ಪೋಷಕ ಧಾರಣ ಚೇಷ್ಟಕ ಕಾರ್ಯಗಳಿಗಾಗಿ ರೂಪಗಳು.

| ಸಂಖ್ಯೆ | ನಾಡಿಹೆಸರು | ಅಭಿಮಾನಿ | ಗುಣಕಾರ್ಯ | ನಿಯಾಮಕ |
|---|---|---|---|---|
| 01 | ಸುಷುಮ್ನ | ಬ್ರಹ್ಮ | ಸತ್ವಗುಣದಕಾರ್ಯ | ವಿಶ್ವನಿಯಾಮಕ |
| 02 | ಇಡಾ | ವಾಯು | ರಜೋಗುಣಕಾರ್ಯ | ತೈಜಸನಿಯಾಮಕ |
| 03 | ಪಿಂಗಳ | ಸರಸ್ವತಿ | ತಮೋಗುಣಕಾರ್ಯ | ಪ್ರಾಜ್ಞನಿಯಾಮಕ |

ಈಪ್ರಕಾರ ಗುಣಕಾರ್ಯಗಳು ಜರುಗುತ್ತವೆ. ಈದೇಹಕ್ಕೆ 9 ಕೋಟಿ ರೋಮಗಳು. ಇದಕ್ಕೆ ಹಿಂಕಾರ ನಾಮಕ ಪ್ರದ್ಯುಮ್ನ ನಿಯಾಮಕ.

ರೋಮಾಭಿಮಾನಿದೇವತೆಗಳು– ಇವರು ತಾರತಮ್ಯದಲ್ಲಿ ಪಂಚ ಪ್ರಾಣರ ತರುವಾಯ ಬರುತ್ತಾರೆ. ಇಷ್ಟರಲ್ಲಿ ನರಸಿಂಹ ರೂಪಗಳು –ರೋಮಕೂಪಗಳು. ಇನ್ನೂ

## ಸಪ್ತಧಾತುಗಳ ವಿಚಾರ

1. ಅನಿರುದ್ಧ **ತ್ವಕಿಗೆ** ನಿಯಾಮಕನಾಗಿ **ಪ್ರಸ್ಥಾನ** ಎಂತ ಇದ್ದಾನೆ. ಇಲ್ಲಿ ಅತಿ ಸೌಂದರ್ಯ ಕೊಡುವುದಕ್ಕಾಗಿ ಶ್ರೀರಾಮಚಂದ್ರನಿದ್ದಾನೆ.

2. **ಚರ್ಮಕ್ಕೆ** ಪ್ರದ್ಯುಮ್ನ **"ಉದ್ಗೀತ"** ಎಂತ ಹೆಸರಿಂದ ಇದ್ದಾನೆ. ಇಲ್ಲಿ ಲಕ್ಷ್ಮೀಪತಿಬಂದು ವ್ರಣಾದಿಗಳನ್ನು ಪರಿಹಾರಮಾಡುತ್ತಾನೆ.

3. **ಮಾಂಸದಲ್ಲಿ** ಸಂಕರ್ಷಣ **"ಪ್ರತಿಹಾರ"** ನೆಂದು ಕರೆಸಿ ಪುಷ್ಟಿವಂತನ್ನ ಮಾಡುತ್ತಿದ್ದಾನೆ. ವಿಷ್ಣುವೇ ಆದಿವರಾಹ ಅಂತ ನಾಮದಿಂದಿದ್ದಾನೆ.

4. **ರಕ್ತದಲ್ಲಿ** ವಾಸುದೇವ **"ಉಪದ್ರವ"** ಎಂತ ಹೆಸರಿಲಿ ಇದ್ದಾನೆ. ಶ್ರೀಹರಿ ಶಾಂತಿ ಸಂಪಿ ಎಂದು ಇದ್ದು ಶರೀರಕ್ಕೆ ಬಲಪ್ರದನಾಗಿದ್ದಾನೆ.

5. **ಮೇಧಸ್ಸು** ಮೇಧಸ್ಸಿನಲ್ಲಿ ನಾರಾಯಣ **ನಿಧನ** ಎಂತ ನಿಯಾಮಕನಾಗಿದ್ದಾನೆ. ಇಲ್ಲಿ ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಜೀವನ ಯೋಗ್ಯತಪ್ರಕಾರ ಐಶ್ವರ್ಯಪ್ರದನಾಗಿದ್ದಾನೆ.

6. **ಮಜ್ಜದಲ್ಲಿ:** ಮಜ್ಜದಲ್ಲಿ **"ವಷಟ್ಕಾರ"** ನಾಮಕ ಪರಮಾತ್ಮ **"ಸ್ವಾರಾತ್ಮ"** ಎಂತ ಇದ್ದಾನೆ. ಅಲ್ಲಿ ಇದ್ದು ದೇಹಕ್ಕೆ ಮದ ಹುಟ್ಟಿಸುತ್ತಾನೆ. ಕಾರನ ಮಜ್ಜಾಎಂತ ದೇವರಿಗೆ ಹೆಸರು. ಮಜ್ಜಾದಿಂದ ರೇತಸ್ಸು ಆಗುತ್ತದೆ. ಈರೇತಸ್ಸಿನಲ್ಲಿ ನಾರಾಯಣ– ಸಂಕರ್ಷಣರು ಉಂಟು. ಇಲ್ಲಿ ವಾಯುದೇವರು ಇರುತ್ತಾರೆ.

7. ಶರೀರದಲ್ಲಿ 360 ಅಸ್ತಿಗಳು ಉಂಟು. ವಂದೊಂದು ಅಸ್ತಿಯುಲ್ಲಿ ವಂದೊಂದು ಭಗವದ್ರೂಪ. ಅಸ್ತಿಯಲ್ಲಿ **ಹಂಸ** ಅದಿಹಸ್ತಿ ಉಪೇಂದ್ರ ರೂಪಗಳು. 360 ಸಂಧಿಗಳು 360 ಪರ್ವಗಳು ಉಂಟು. 360 ಅಸ್ತಿಗಳಲ್ಲಿ ಸಂಧ್ಯಾಕಾಲನಿಯಾಮಕ ರೂಪಗಳು–360 ಹಸ್ತಾಂಗುಲಿ ಸಂಧಿಗಳಲ್ಲಿ ರಾತ್ರಿ ನಿಯಾಮಕ ರೂಪಗಳು 360. ಪರ್ವಗಳಳಲ್ಲಿ (ಗೆಣಿಕೆಗಳಲ್ಲಿ) 360 ಹಗಲು ನಿಯಾಮಕ ರೂಪಗಳು. ಈ ರೂಪಗಳ ಚಿಂತನೆಯಿಂದ ಆಯುಷ್ಯವೃದ್ಧಿ. ಅಂತು ಅಸ್ತಿಗಳು 1080 ರೂಪಗಳು. ಇಂಥಾಹ ಸಪ್ತಧಾತುಗಳಲ್ಲಿ ಸಪ್ತಮರುತರು ವಾಸ. ಆ ಅಭಿಮಾನಿಗಳು ಅವರ ಹೆಂಡಂದಿರಿಂದ ಇದ್ದಾರೆ. 49 ಮಂದಿ ಮರುತ್ತರೆ

ಹೆಂಡಂದಿರು ಇವರಲ್ಲಿ 98 ಪರಮಾತ್ಮನ ರೂಪಗಳು. **ಪಂಚಕೋಶಗಳ ವಿಚಾರ:–** ಈ ಸಪ್ತಧಾತುಗಳಲ್ಲಿ ತ್ವಕು+ಚರ್ಮ ಕಲಿಸಿ ವಂದೇ ಅಂತ ವ್ಯವಹಾರ. ವಟ್ಟಿಗೆ ಆರು ಆದವು. ಆರಕ್ಕೆ ಐದು ಸಂಧಿಗಳಾದವು. ವಂದೊಂದು ಸಂಧಿಯಲಿ ವಂದೊಂದು ಕೋಶವಿದೆ.

1. **ಅನ್ನಮಯಕೋಶ:–** ತ್ವಕು+ಚರ್ಮ ಸಂಧಿ ಮಾಂಸ. ಅನಿರುದ್ಧ–8251 ರೂಪಗಳು.
2. **ಪ್ರಾಣಮಯಕೋಶ:–** ಮಾಂಸ +ರಕ್ತ =ಪ್ರಾಣಮಯಕೋಶ ಪ್ರದ್ಯುಮ್ನ 5543 ರೂಪಗಳು.
3. **ಮನೋಮಯಕೋಶ:–** ರಕ್ತ +ಮೇಧಸ್ಸು=ಮನೋಮಯ ಸಂಕರ್ಷಣ 562107 ರೂಪಗಳು.
4. **ವಿಜ್ಞಾನಮಯಕೋಶ:–** ಮೇಧಸ್ಸು +ಮಜ್ಜ=ವಿಜ್ಞಾನಮಯ ವಾಸುದೇವ 4374 ರೂಪಗಳು.
5. **ಆನಂದಮಯಕೋಶ:–** ಮಜ್ಜ +ಅಸ್ತಿ = ಆನಚಿದಮಯ ನಾರಾಯಣ 5125 ರೂಪಗಳು. ಅಂತು ಪರಮಾತ್ಮನ 585400 ಖಂಡರೂಪಗಳು. ಸಂಪುಟಾಕಾರ ರೂಪಗಳು.

| ಸಂಖ್ಯೆ | ಕೋಶಗಳು | ಭಗವದ್ರೂಪದಹೆಸರು. | ಕೋಶಗತ ಭಗವದ್ರೂಪಗಳ ಸಂಖ್ಯೆ. |
|---|---|---|---|
| 01 | ಅನ್ನಮಯ | ಅನಿರುದ್ಧ | 101 |
| 02 | ಪ್ರಾಣಮಯ | ಪ್ರದ್ಯುಮ್ನ | 513 |
| 03 | ಮನೋಮಯ | ಸಂಕರ್ಷಣ | 055 |
| 04 | ವಿಜ್ಞಾನಮಯ | ವಾಸುದೇವ | 584 |
| 05 | ಆನಂದಮಯ | ನಾರಾಯಣ | 3052 |
| | | ಒಟ್ಟುರೂಪಗಳು | 4305 |

ಅಂತು 4305ಸಂಪುಟಾಕಾರ ಅಖಂಡ ರೂಪಗಳು. ಪ್ರಾಣಾದಿರೂಪಗಳು ಅಧಿಭೂತ ಆತ್ಮ, ಅಗ್ರೇಶ, ಅಚ್ಯುತ, ಪದ್ಮನಾಭಿ ಪರಮಾತ್ಮ. ಅಧಿದೈವ ದಶೇಂದ್ರಯಗಳಲ್ಲಿ ಗೋವಿಂದ. ಆಧ್ಯಾತ್ಮ ಮನದಲ್ಲಿ ಅನಂತ. ಹೃದಯಕಮಲಕ್ಕೆ ದಶದಿಕ್ಕಿನಲ್ಲಿ ದಶಪ್ರಾಣರು. ಇವರಂತರ್ಗತ ಆತ್ಮರೂಪಿ ಪರಮಾತ್ಮ. 1.ಅಧೀಭೂತವಾದ ದೇಹಗತ ದಶ ಪ್ರಾಣರಲ್ಲಿ ಅಚ್ಯುತ. 2.ಅಧೀ ದೈವಗಳಾದ ದಶೇಂದ್ರಿಯಗಳಲಲಿ ಗೋವಿಂದ.3.ಆಧ್ಯಾತ್ಮ ವಾದ ಮನೋವೃತ್ತಿ ಇಂದ್ರಿಯ ದಶವಿಧಗಳಲ್ಲಿ ದಶಪ್ರಾಣರೂಪಗಳು. ತದಂತರ್ಗತ ಅನಂತರೂಪಿ ಪರಮಾತ್ಮ.

| ಸಂಖ್ಯೆ | ಇಂದ್ರಿಯಗಳು | ಪ್ರಾಣರೂಪ | ಕಾರ್ಯರೂಪ |
|---|---|---|---|
| 01 | ಮನಸ್ಸು | ಪ್ರಾಣ | ಸಂಕಲ್ಪ,ವಿಕಲ್ಪ |
| 02 | ಬುದ್ಧಿ | ಅಪಾನ | ನಿಶ್ಚಯ |
| 03 | ಚಿತ್ತ | ವ್ಯಾನ | ಸ್ವರಣ |
| 04 | ಅಹಂಕಾರ | ಉದಾನ | ವಿಷಯವೃತ್ತಿ |
| 05 | ಅಂತಃಕರಣ | ಸಮಾನ | ಭೋಗವೃತ್ತಿ |

**ದಶಪ್ರಮತಿಯರೂಪಗಳು.**

| ಸಂಖ್ಯೆ | ಪ್ರಾಣ | ರೂಪಗಳು | ಸಂಖ್ಯೆ | ಪ್ರಾಣ | ರೂಪಗಳು |
|---|---|---|---|---|---|
| 01 | ಪ್ರಾಣ | 35 | 01 | ನಾಗ | 35 |
| 02 | ಅಪಾನ | 511 | 02 | ಕೃಕಲ | 313 |
| 03 | ವ್ಯಾನ | 55 | 03 | ಕೂರ್ಮ | 71 |
| 04 | ಉದಾನ | 535 | 04 | ದೇವದತ್ತ | 2343 |
| 05 | ಸಮಾನ | 557 | 05 | ಧನಂಜಯ | 13054 |
| | ಒಟ್ಟು | **1693** | | ಒಟ್ಟು | **15816** |

ಅಂತು ಪ್ರಾಣಾದಿರೂಪಗಳು 5 ಪ್ರಾಣಗಳು ಅವಿದ್ಯಾಪಂಚಕದಲ್ಲಿ =158160

ವಟ್ಟಿಗೆ 15816+1711=17527 ದಶಪ್ರಾಣ ರೂಪಗಳು.

| | | |
|---|---|---|
| ದಶಪ್ರಾಣಗಳು + ಪಂಚಭೂತಗಳು | = | 50 |
| ದಶಪ್ರಾಣಗಳು + ಪಂಚತನ್ಮಾತ್ರ | = | 50 |
| ದಶಪ್ರಾಣಗಳು + ದಶೇಂದ್ರಿಯಗಳು | = | 100 |
| ದಶಪ್ರಾಣಗಳು + ಪಂಚ ಮನೋವೃತ್ತಿಗಳು | = | 100 |

| | | |
|---|---|---|
| 01 | ಅನಿರುದ್ಧ ಕೃದ್ಧೋಲ್ಕಾದಿ ರೂಪಗಳು ಅಂತು = | 600 |
| | ಪ್ರಾಣರೂಪಗಳು ವಟ್ಟಿಗೆ 17517+600=18127 | |
| 02 | ಅಧಿಭೂತ ಅಚ್ಯುತ ರೂಪಗಳು = | 131 |
| 03 | ಅಧಿದೇವತ ಗೋವಿಂದ ರೂಪಗಳು = | 3043 |
| 04 | ಆಧ್ಯಾತ್ಮ ಅನಂತ ರೂಪಗಳು = | 1052 |
| 05 | ಹೃದಯಸ್ಥಾನಗತ ಆತ್ಮಾದಿರೂಪಗಳು = | 62 |
| 06 | ದೇಹಗತ ಅಹವನೀಚುಾದಿ ಪಂಚಾಗ್ನಿರೂಪಗಳು = | 30 |
| 07 | ಗುಣತ್ರಯದಲ್ಲಿ ವಿಶ್ವಾದಿರೂಪಗಳು = | 03 |
| 08 | ದೇಹಗತ ಪಂಚಭೂತ ರೂಪಗಳು = | 05 |
| 09 | ಬ್ರಹ್ಮಾದಿ ತ್ರಿವಿಧರಲ್ಲಿ ದೇವರ ರೂಪಗಳು = | 4326 |
| 10 | ಪಂಚಾಗ್ನಿಯಲ್ಲಿ ರೂಪಗಳು = | 600 |

## ಪಂಚಾಗ್ನಿಯಲ್ಲಿನ 600 ರೂಪಗಳ ವಿವರ

1.ಅಗ್ನಿ, 2.ಕಾಷ್ಟ; 3.ಧೂಮ; 4.ಜ್ವಾಲೆ; 5.ಕೆಂಡ; 6.ಕಿಡಿ; ಅಂತು 6 ಗೋಲಕಗಳು, ಸ್ಥಾನಗಳು. ಈಪ್ರಕಾರ ದಶೇಂದ್ರಿಯಗಳಲ್ಲಿ ವಂದು ಮರುತ್ತುನಲ್ಲಿ 10X6=60 ರೂಪಗಳು. ದಶಪ್ರಾಣರಲ್ಲಿ 60X10=600. ಪಂಚಭೂತಗಳು 5, ಪಂಚತನ್ಮಾತ್ರಗಳು 5, ದಶೇಂದ್ರಿಯಗಳು 10, ಮನಸ್ಸು–1, ಮನೋವೃತ್ತಿಗಳು 5.

| ಸಂಖ್ಯೆ | ಪಂಚೇಂದ್ರಿಯ | ರೂಪಗಳಸಂಖ್ಯೆ | ಪಂಚತನ್ಮಾತ್ರ | ರೂಪಗಳಸಂಖ್ಯೆ |
|---|---|---|---|---|
| 01 | ಮನಸು | 755 | ಶಬ್ದ | 65 |
| 02 | ತ್ವಕು | 15 | ಸ್ಪರ್ಶ | 528 |
| 03 | ಚಕ್ಷು | 102 | ರೂಪ | 12 |
| 04 | ಶ್ರೋತ್ರ | 37 | ರಸ | 72 |
| 05 | ಜಿಂಹ್ವೆ | 1203 | ಗಂಧ | 403 |
| | ವಟ್ಟು | 2112 | ವಟ್ಟು | 1080 |

| ಸಂಖ್ಯೆ | ಪಂಚಭೂತ | ರೂಪಗಳಸಂಖ್ಯೆ | ಪಂಚತನ್ಮಾತ್ರ | ರೂಪಗಳಸಂಖ್ಯೆ |
|---|---|---|---|---|
| 01 | ಪೃಥ್ವಿ | 423 | ವಾಕ್ಕು | 2465 |
| 02 | ಅಪ್ಪು | 21 | ಪಾಣಿ | 51 |
| 03 | ತೇಜ | 31 | ಪಾದ | 31 |
| 04 | ವಾಯು | 14 | ಪಾಯು | 11 |
| 05 | ಆಕಾಶ | 511 | ಉಪಸ್ಥ | 814 |
| | ವಟ್ಟು | 1000 | ವಟ್ಟು ಮನ ರೂಪಗಳು | 931 |
| 1 | ಹೃದಯ | 310 | ಅಧ್ಯಾತ್ಮ | 755 |
| 2 | ಆಕಾಶ | 511 | ಅಧಿದೈವಿಕ ದಶೇಂದ್ರಿಯಗಳು | 344 |
| 3 | | | ಅಧಿಭೂತ ಪಂಚ ತನ್ಮಾತ್ರ | 2080 |
| | ವಟ್ಟು | 821 | ವಟ್ಟು | 5179+821 = 6000 |

6000 ರೂಪಗಳು ಪಂಚಪರ್ವ ಅವಿದ್ಯಾಕ್ಕೆ ತಮ,ಮೋಹ,ಮಹಾಮೋಹ, ತಾಮಿಶ್ರ, ಅಂಧ ತಾಮಿಶ್ರ, ಇದಕ್ಕೆ ನಿಯಾಮಕ ರೂಪಗಳು: 1.ಕೃದ್ಧೋಲ್ಕ–ದುರ್ಗಾ; 2.ಮಹೋಲ್ಕ–ಅಂಭ್ರಣಿ; 3.ವೀರೋಲ್ಕ–ಲಕ್ಷ್ಮಿ; 4.ದ್ಯುಲ್ಕ–ದಕ್ಷಿಣ; 5.ಸಹಸ್ರೋಲ್ಕ–ಜಯಂತಿ; ಮುಖ್ಯಾಭಿಮಾನಿಗಳು ಪಂಚ ಪ್ರಾಣಗಳು. ಅಂತು ಆತ್ಮಾದಿರೂಪಗಳು 4326 ಪ್ರಾಣಾದಿರೂಪಗಳು 18127=ವಟ್ಟು 22453 ದೇಹಗತರೂಪಗಳು. ನಿತ್ಯಪೂಜೆಮಾಡ ತಕ್ಕದ್ದು. ನಿತ್ಯದಲ್ಲಿ ಬಿಂಬನ ಇಷ್ಟಮೂರ್ತಿಗಳನ್ನು ಚಿಂತನಮಾಡಬೇಕು. ಇನ್ನು ಬ್ರಹ್ಮಾಂಡ ಆಧಾರ ಅಧೇಯರೂಪಗಳನ್ನ ಚಿಂತನಮಾಡಬೇಕು. ಕೂರ್ಮರೂಪದಿಂದ ಬ್ರಹ್ಮಾಂಡ ಭಾರಹೊತ್ತಿದ್ದಾನೆ. ಇದಕ್ಕೆ **ಭಾರಭೃತ್** ಎಂದು ಹೆಸರು. 1624 ಆಧಾರರೂಪ 242 ಅಧೇಯರೂಪಗಳು 142 ವಟ್ಟು 2008 ರೂಪಗಳು. ಸ್ಥಾನತ್ರಯದಲ್ಲಿ ಸೂರ್ಯಾಂತರ್ಗತ ಪರಮಾತ್ಮನ ಚಿಂತನಾ ಮಾಡಬೇಕು. ಸ್ಥೂಲದೇಹದಲ್ಲಿ ಮತ್ತು ಸೂರ್ಯಾಂತರ್ಗತ ನಾರಾಯಣನಲ್ಲಿ 5126 ರೂಪಗಳು.

1. ಸೂರ್ಯಾಂತರ್ಗತ ಸೂರ್ಯಮಂಡಲದಲ್ಲಿ **ಘೃಣೀವಾಚ್ಯ** ನಾರಾಯಣನ 8126 ರೂಪಗಳು.

2. ಸೂರ್ಯಕಿರಣಗಳಲ್ಲಿ ತದಂತರ್ಗತ ಸೂರ್ಯ ಆದಿತ್ಯ ಎಂತ ಹೆಸರು =232.

3. ದೇಹಾಂತರ್ಗತ ಅಷ್ಟದಳ ಕಮಲ ಕರ್ಣಿಕದ ಮ್ಯಾಲೆ ಅಗ್ರೇಶನಿಗೆ ಪೀಠನಾಗಿರತಕ್ಕ ಸೂರ್ಯಾಂತರ್ಗತ ನಾರಾಯಣ ಅಂತು ಆಧ್ಯಾತ್ಮ ಸಂಕೇಥ ಆದಿತಿತ್ಯನಿಗೆ ಅರ್ಕ=121 + ಅಧೀದೈವ ಘೃಣೀವಾಕ್ಯ ಆದಿತ್ಯ =231; ಅಧಿಭೌತಿಕ ಸೂರ್ಯ=574; ವಟ್ಟು = 926 ರೂಪಗಳ ಚಿಂತನ ಮತ್ತು ಈತತ್ವಗಳಲ್ಲಿ ಜೀವನಲ್ಲಿ ಸೇರಿ 14400 ರೂಪಗಳು. ಇಷ್ಟು ರೂಪಗಳನ್ನು ತಿಳಿದು ಬಿಂಬನಲ್ಲಿ ಕೊನೆಗೆ ಐಕ್ಯ ಚಿಂತನಮಾಡಿ ಪೂಜೆ ಮಾಡತಕ್ಕದ್ದು.

## ಅರಿಷಡ್ವರ್ಗಗಳ ವಿಚಾರ

ಚಕ್ಷು,ವಾಕ್ಕೂ,ಪ್ರಾಣ, ಶ್ರೋತ್ರ–ಹೃದಯ ಮನಸ್ಸು ಇಷ್ಟರಲ್ಲಿ ಆಕಾಶ ರೂಪಳಾಗಿಇರುತ್ತಾಳೆ. ವಾಕ್ಕಿನಲ್ಲಿರುವ ಮದ ಪ್ರಾಜ್ಞನಾಮಕ ಪರಮಾತ್ಮ. ಪ್ರಾಣನಲ್ಲಿ ಮುಕ್ತರ ಪ್ರಿಯನಾಮಕ ಪರಮಾತ್ಮ ಚಕ್ಷುನಲ್ಲಿ. ಮೋಹಸತ್ಯನಾಮಕ ಪರಮಾತ್ಮ ಶ್ರೋತ್ರನಲ್ಲಿ ಕ್ರೋಧ, ಅನಂತ ಮನಸ್ತತ್ವನಲ್ಲಿ ಆನಂದ ಹೃದಯ. ರೋಮ ಸ್ಥಿತನಾಮಕ ಪರಮಾತ್ಮ ಇವು ಶತೃ ರೂಪಗಳು. ಇನ್ನು ಮಿತ್ರರೂಪಗಳು

ಪರಮಾತ್ಮನವು ಯಾವುದೆಂದರೆ ಪ್ರಣಾತ್ಮ, ಜ್ಞಾನಾತ್ಮ, ಇತ್ಯಾದಿ 6 ರೂಪಗಳು ಚಿಂತನದಿಂದ ಅರಿಷಡ್ವರ್ಗಗಳ ಬಾಧಾ ಕಡಿಮೆ ಯಾಗುತ್ತದೆ.

## ಸ್ಥೂಲದೇಹದಲ್ಲಿ ಭೋಗರೂಪಗಳು

ದಶೇಂದ್ರಿಯಗಳಲ್ಲಿ ಪರಮಾತ್ಮನೇ ದಶಾವತಾರದಿಂದ ಭೋಗಮಾಡುತ್ತಾನೆ. 1. ಮನಸ್ಸಿನಲ್ಲಿ– ನಾರಾಯಣ; 2.ಕಿವಿಯಲ್ಲಿ–ಮತ್ಸ್ಯ; 3.ಕಣ್ಣು–ಕೂರ್ಮ; 4.ತ್ವಕು–ವರಾಹ; 5.ಬಾಯಿ– ನಾರಸಿಂಹ; 6.ಮೂಗು–ವಾಮನ; 7.ವದನ–ಪರಶುರಾಮ; 8.ಕೈಗಳು–ರಾಮ; 9.ಪಾದ– ಶ್ರೀಕೃಷ್ಣ; 10.ಪಾಯು–ಬುದ್ಧ; ಉಪಸ್ಥ–ಕಲ್ಕಿ; ಅನಿರುದ್ಧನೇ ಮತ್ತು ಪುರುಷವಾಚ್ಯನಾಗಿ ಹೃದಯದಲ್ಲಿ ವಾಸ. ಪ್ರದ್ಯುಮ್ನ ಕಂಠದಲ್ಲಿದ್ದಾನೆ. ಸಂಕರ್ಷಣ ಕೇಶಮೂಲದಲ್ಲಿ, ಶಿರಸ್ಸಿನಲ್ಲಿ ವಾಸುದೇವ. ಶಿರಸ್ಸಿನಲ್ಲಿ ನಾರಾಯಣ ಬ್ರಹ್ಮರಂಧ್ರದ ಪೂರ್ವದ್ವಾರದೆಶೆ, ಈತನೇ ಓಂಕಾರ ರೂಪಿ ಪರಮಾತ್ಮ. **ಓಂಕಾರದಿಂದ "ಅ"ಕಾರ, "ಉ"ಕಾರ, "ಮ:ಕಾರ, ನಾದ, ಬಿಂದು,ಘೋಷ, ಶಾಂತ, ಅತಿಶಾಂತ,** ಹುಟ್ಟಿದವು. ಇದಕ್ಕೆ **ವಿಶ್ವ,ತೈಜಸ,ಪ್ರಾಜ್ಞ, ತುರಿಯ, ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ ನಿಯಾಮಕ ರೂಪಗಳು.**

| ಸಂಖ್ಯೆ | ಓಂಕಾರ | ಕ್ಷರಗಳು ರೂಪದಿಂದ | ಸಂಖ್ಯೆ | ಅಭಿಮಾನಿಗಳು | ಕೋಶಗಳು ನಿಯಾಮಕ ರೂಪ |
|---|---|---|---|---|---|
| 1 | ಅಕಾರದಿಂದ | ಅ,ಆ,ಇ,ಈ,ಉ,ಊ, ಋ,ೠ,ಎ,ಐ,ಒ,ಓ, ಔ,ಅಂ,ಅಃ, 16 | 16 | ಸ್ವರಾಭಿಮಾನಿ | |
| 2 | ಉಕಾರದಿಂದ | ಕ,ಖ,ಗ,ಘ,ಙ,ಕವರ್ಗ | 05 | ಪಂಚಭೂತಗಳು | ಅನ್ನಮಯ ಕೃದ್ಧೋಲ್ಕ |
| 3 | ಮಕಾರದಿಂದ | ಚ,ಛ,ಜ,ಝ,ಞ. ಚವರ್ಗ | 05 | ಪಂಚಜ್ಞಾನೆಂದ್ರಿಯ | |
| 4 | ನಾದದಿಂದ | ಟ,ಠ,ಡ,ಢ,ಣ. ಟ ವರ್ಗ | 05 | ಪಂಚಕರ್ಮೇಂದ್ರಿಯ | |
| 5 | ಬಿಂದುದಿಂದ | ತ,ಥ,ದ,ಧ,ನ. ತವರ್ಗ | 05 | ಪಂಚ ತನ್ಮಾತ್ರ | |

| | | | | |
|---|---|---|---|---|
| 6 | ಘೋಷದಿಂದ | ಪ,ಫ,ಬ,ಭ,ಮ, ಪವರ್ಗ | 05 | ಅಂತಃಕರಣ |
| 7 | ಶಾಂತದಿಂದ | ಯ,ರ,ಲ,ವ, ಅಕ್ಷರ | 04 | ಪಂಚವೃತ್ಯಾತ್ಮಕ |
| 8 | ಅತೀಶಾಂತ | ಶ,ಷ,ಸ,ಹ,ಳ,ಕ+ಷ=ಕ್ಷ | 06 | ಸಪ್ತಧಾತುಗಳು |
| | | ಒಟ್ಟು | 51 | |

ಅಕಾರಾದಿ 16 ಅಕ್ಷರದಲ್ಲಿ ಸ್ವರಾಭಿಮಾನಿಗಳು, ಕ ವರ್ಗದಿ 5 ಅಕ್ಷರಗಳಲ್ಲಿ ಪಂಚಭೂತಗಳು, ಅನ್ನ ಮಯಕೋಶಗಳು, ಕೃದ್ಧೋಲ್ಕಾದಿ ನಿಯಾಮಕರೂಪಗಲು. ಚ ವರ್ಗಕ್ಕೆ ಪಂಚಜ್ಞಾನೇಂದ್ರಯಗಳು, ಟ ವರ್ಗಕ್ಕೆ ಪಂಚ ಕರ್ಮೇಂದ್ರಿಯಗಳು. ತ ವರ್ಗಕ್ಕೆ ಪಂಚತನ್ಮಾತ್ರಗಳು, ಪ ವರ್ಗಕ್ಕೆ ಅಂತಃಕರಣ ಮನಾದಿ ಪಂಚ ವೃತ್ಯಾತ್ಮಕ, ಯ,ರ,ಲ,ವ, ಅಸ್ತಧಾತುಗಳಾತ್ಮಕ, ಹ,ಳ,ಕ್ಷ= ಜ್ಞಾನ,ಯಿಚ್ಛಾ, ಕ್ರಿಯಾಶಕ್ತಿ. ಶ,ಷ,ಸ,ಹ,ಕ್ಕೆ ಸತ್ವ,ರಜ, ತಮ,ಗುಣಾತ್ಮಕ, ಶಿರಸ್ಸಿನಲ್ಲಿ ಅಂ ಅಜಾಯನಮಃ, ಮುಖದ ಸುತ್ತ ಆನಂದ.

1. ಶ್ರೋತೃಗೆ ಅಭಿಮಾನಿಗಳು ಚಂದ್ರ,ಕುಬೇರ,ವರುಣ,ಯಮ,ಮಿತ್ರ, ವೇದಶ್ರವ, 2.ವರುಣ–ಷಡಂಗಗಳಿಗೆ ಅಭಿಮಾನಿ. 3.ಯಮ: ಶೃತಿ,ಮಂತ್ರ,ಶ್ರವಣ. 4.ಮಿತ್ರ,ಕಾಮರು–ಕಾಮಶಾಸ್ತ್ರ. 5.ಕುಬೇರ–ನೀತಿಶಾಸ್ತ್ರ.

**ಶ್ರೋತೃ:** ಇಲ್ಲಿ ಸೋಮರಾಜ ಭಗವದ್ರೂಪ ಅತಿಸ್ವಚ್ಛವಾಗಿದೆ. ಈತನೇ ನಿಯಾಮಕ. ಇಲ್ಲಿ ಧನ್ವಂತರಿ–ಹಯಗ್ರೀವ,ಚಿಂತಾಮಣಿ. ಹಂಸ–ವಾಮನ; ಉ,ಊ–ಉಂ ಉಗ್ರಾಯನಮಃ, ಊರ್ಜಾಯನಮಃ, ಹಯಗ್ರೀವರೂಪವೇ ದಿಗ್‌ನಿಯಾಮಕ ರೂಪ, ಪ್ರದ್ಯುಮ್ನ ವಿದಿಕ್ಕನಿಯಾಮಕ. ಬ್ರಾಹ್ಮಣರ ದಕ್ಷಿಣ ಕರ್ಣದಲ್ಲಿ ಭಾಗೀರಥ್ಯಾದಿ ನದಿಗಳು ಇವೆ. ಕರ್ಣಸ್ಪರ್ಶದಿಂದ ಶುದ್ಧನಾಗುತ್ತಾನೆ.

**ಚಕ್ಷು:**– ಕಣ್ಣಿನಲ್ಲಿ ಓಂ ಇಂದ್ರಾಯನಮಃ ಓಮ, ಈಂ ಈಶಾನಾಯನಮಃ, ಚಕ್ಷುವಿಗೆ ಅಭಿ ಮಾನಿ ಸೂರ್ಯ. ಸೂರ್ಯನಲ್ಲಿ ನಾರಾಯಣುತ್ತಿಷ್ಟಮೂರ್ತಿ. ರಾಜರಾಜನೇ ವಸು,ಕಪಿಲ, ದಶಕ್ರತು, ಇಂದ್ರ, ಈಶ, ಇಷ್ಟುರೂಪಗಳಿವೆ. **ದಕ್ಷಿಣಚಕ್ಷು** ಪ್ರದ್ಯುಮ್ನ ಈತಗೆ **ಭಾಮನಿ** ಎಂತ ಹೆಸರು. **ಎಡಗಣ್ಣು** ಅನಿರುದ್ಧ **ವಾಮನಿ** ಎಂತ ಹೆಸರು. ಚಂದ್ರಅಭಿಮಾನಿ. ಬಲಗಣ್ಣಿನಲ್ಲಿ ಪ್ರದ್ಯುಮ್ನ **ನೇಸ್ತಂಭ** ರೂಪನಾಗಿದ್ದಾನೆ. ರಮ ಹಗ್ಗವಾಗಿದ್ದಾಳೆ. (ಕಣ್ಣಿನಲಿ) ವಾಯುದೇವರು ಗೋವತ್ಸರೂಪದಿಂದ ಹಗ್ಗದಿಂದ ಕಟ್ಟಿಸಿಕೊಂಡು ಇದ್ದಾರೆ.

ಕಣ್ಣಿನಕೆಂಪು ರೇಖೆಯಲ್ಲಿ ರುದ್ರದೇವರು **ಗೌತಮನೆಂಬೋ** ಹೆಸರಿಲಿ ಇದ್ದಾರೆ. ಇಂದ್ರ ಬಿಳಿಗುಡ್ಡಿನಲ್ಲಿ **ವಶಿಷ್ಠ** ಎಂಬೋ ಹೆಸರಿನಿಂದ ಇದ್ದಾರೆ. ಕರೆಗುಡ್ಡು ಕೇವಲ ಅಗ್ರಭಾಗಕ್ಕೆ **ರಸನೀಕ** ಎಂತ ಹೆಸರು. ವಿಶ್ವನಾಮಕ ಸೂರ್ಯ **ವಿಶ್ವಾಮಿತ್ರ** ಎಂಬೋ ಹೆಸರಿಲಿ ಇದ್ದಾನೆ. ಕಣ್ಣೀರಿನಲ್ಲಿ ವರುಣ **ಭಾರದ್ವಾಜ** ನೆಂಬೋ ಹೆಸರಿನಲಿ ಇದ್ದಾನೆ. ಕಣ್ಣು ಕೆಳಗಿನ ರೆಪ್ಪೆಗಳಲ್ಲಿ ದ್ಯುಲೋಕಾಭಿಮಾನಿ ಭಾರತಿ,ಉಮ, **ಅತ್ರಿ** ಹೆಸರಿನಿಂದ ಇದ್ದಾರೆ. ಇಷ್ಟುಮಂದಿ ಉಪಾಸನ ಮಾಡುತ್ತಾರೆ. ದಕ್ಷಿಣಾಕ್ಷಿಯಲ್ಲಿ ವಿಶ್ವನಾಮಕ ಪರಮಾತ್ಮ 19 ಮುಖದಿಂದ ಇದ್ದಾನೆ. ಮಧ್ಯ ಆನೆಸೊಂಡಿಲಿ, ಎಡಕ್ಕೆ 9 ಮುಖ, ಬಲಕ್ಕೆ 9 ಮುಖ. **ಈತ ಜಾಗ್ರದಾವಸ್ಥ ಪ್ರೇರಕ**. ಶಂಖ, ಚಕ್ರ, ಗದಾ,ಪದ್ಮ ಆಯುಧಪಾಣಿಯಾಗಿ ಅಷ್ಟ ದಿಕ್ಪಾಲಕರ ಸಹಿತನಾಗಿ ಜೀವರ ಸಂರಕ್ಷಣ ಮಾಡುತ್ತಿದ್ದಾನೆ. ಇಂಥಾ ವಿಶ್ವನನ್ನು ಅಕಾರ ಶಬ್ದ ವಾಚ್ಯನೆಂದು ಷೋಢಶಿ ಗ್ರಂಥದಲ್ಲಿ ಇಂದ್ರಿಯ ಪ್ರಕರಣ ಪ್ರಕಾರ ವಿಶ್ವನ್ನ ಉಪಾಸನ ಮಾಡಬೇಕು.

**ನಾಶಿಕಾ:–** ಮೂಗಿನಲ್ಲಿ, ಗಲ್ಲಗಳಲ್ಲಿ ಇನ್ನು ಇತರ ಅಂಗಗಳಲ್ಲಿ ಮಾತೃಕಾನ್ಯಾಸರೀತ್ಯಾ ಅಜಾದಿ 50 ಭಗವದ್‌ರೂಪಗಳನ್ನು ಚಿಂತನಮಾಡಿ **ಓಂ ಕ್ಷಂ** ಅಕ್ಷರ ಬೀಜ ಜೀವನಲ್ಲಿ ಚಿಂತಿಸಬೇಕು. ಕಂಠದಲ್ಲಿ ಉದಾನನಾಮಕ ವಾಯು ಸಹಿತ ಪ್ರದ್ಯುಮ್ನ ತೈಜಸನೆಂಬ ಹೆಸರಿನಿಂದ ವಿಶ್ವನಂತೆ, ಮುಖ ಹಸ್ತದಿಂದ ಇದ್ದಾನೆ. ಈತ ಸ್ವಪ್ನಪದಾರ್ಥಗಳು ಆಕ್ಷಣದಲ್ಲಿ ಮನಸ್ಸಿನ ಸಂಸ್ಕಾರ ಉಪಾದಾನ ಮಾಡಿಕೊಂಡು ಸೃಷ್ಠಿಮಾಡಿ ತೋರಿಸುತ್ತಾನೆ. ಇಲ್ಲಿ ದೇವತೆಗಳು ರುದ್ರನ ಅಧೀನವಾಗಿ ಸ್ವಪ್ನವ್ಯಾಳದಲ್ಲಿ ತಮ್ಮ ಕ್ರಿಯಗಳು ಮಾಡದೆ ಸುಮ್ಮನಿರುತ್ತಾರೆ. ರುದ್ರದೇವರು ಮಾತ್ರ ಎಲ್ಲ ಕಾರ್ಯವನ್ನು ಮಾಡುತ್ತಾರೆ. ಮನಸ್ಸಿನಲ್ಲಿ ಬ್ರಹ್ಮ, ವಾಯು, ಗರುಡ,ಶೇಷ, ರುದ್ರ, ಇಂದ್ರ,ಚಂದ್ರ, ವರುಣ,ಆವಾಸ. ಬ್ರಹ್ಮ ವಾಯುಗಳು ಸೂಕ್ಷ್ಮ ವಿಷಯಪ್ರೇರಕರು. ರುದ್ರಾದಿಗಳು ನಾನು,ನನ್ನದು ಅಹಂಕಾರ ಪ್ರೇರಕರು. ಇಂದ್ರ,ಚಂದ್ರ, ವರುಣ ಸೂಕ್ಷ್ಮಾತಿ ವಿಷಯ ಪ್ರೇರಕರು. (ಯಜ್ಞಾದಿ ವಿಷಯಗಳಲ್ಲಿ ಪ್ರೇರಕರು). ವರುಣ ವಾಪಿ, ಕೂಪ, ತಟಾಕಾದಿ ನಿರ್ಮಾಣ ಪ್ರೇರಕರು. ಶೇಷ ವ್ಯಾಖ್ಯಾನದಲ್ಲಿ, ಶಿವ ಮನನದಲ್ಲಿ, ಅಖಂಡ ಧ್ಯಾನದಲ್ಲಿ ಗರುಡ, ವೇದಶ್ರವಣ ಶೇಷ. ಸ್ವಪ್ನದಲ್ಲಿ ಕಾಂಕ, ಬಕ, ಕತ್ತಿ, ನಾಯಿ, ನರಿ, ಗೂಗಿ ದುಷ್ಟ ಜಂತುಗಲರೂಪ ದೈತ್ಯರು ಧರಿಸುತ್ತಾರೆ. ಶೋಕ ಬೇಧಗಳು ಇವರಿಗಾಗುವವು.

ಹೃದಯಕಮಲ ಕರ್ಣಿಕಾಗ್ರಸ್ತ ನಾದಂಥ ಸಂಕರ್ಷಣ ನಾಮಕ ಪರಮಾತ್ಮನು ಪ್ರಾಜ್ಞನೆಂದು ಹೆಸರುಳ್ಳವನಾಗಿ ಜೀವಿಗೆ ನಿದ್ರಾದ್ವಾರ ಸುಖಕೊಡುತ್ತಾನೆ. ಆವ್ಯಾಳೆ ಜೀವ ಮುಖ್ಯಪ್ರಾಣನೊಳಗೆ ಇದ್ದು, ಆಜೀವನಿಂದ

ಸಹಿತ ಪ್ರಾಣನನ್ನು ಪ್ರಾಜ್ಞನಾಮಕ ಪರಮಾತ್ಮನು ನುಂಗಿ ರಮಾಲಿಂಗನ ಮಾಡುತ್ತಾನೆ. ಆವ್ಯಾಳದಲ್ಲಿ ಜೀವಗೆ ಎಚ್ಚರಿಕೆ ಇರೋದಿಲ್ಲ. ಪ್ರಾಣಮಾತ್ರ ಎಚ್ಚರಿಕಡಯಲ್ಲಿದ್ದು "ಭೂ" ಶ್ವಾಸದಿಂದ ಪರಮಾತ್ಮನ ಉಪಾಸನೆ ಮಾಡುತ್ತಾರೆ. ಮತ್ತು ಪ್ರಾಜ್ಞ ತೈಜಸ ಬೇರೆಯಾಗಿ ಕಂಠಕ್ಕೆ ಬಂದು ಸ್ವಪ್ನತೋರಿಸಿ. ವಿಶ್ವ ತೈಜಸನಿಂದ ವಿಭಜಿತನಾಗಿ ಜೀವನ ಪ್ರಕಾಶ ತೆಗೆದುಕೊಂಡು ದಕ್ಷಿಣಾಕ್ಷಿಗೆ ಬಂದರೆ ಎಚ್ಚರವಾಗುತ್ತದೆ. ಇಂಥಾ ಸ್ಥೂಲದೇಹಕ್ಕೆ ನಾರಾಯಣ, ವಾಸುದೇವ ರೂಪ ಕವಚಾಕಾರ ಚಿಂತನೆಮಾಡಿಕೊಂಡು ಪ್ರಾಜ್ಞನಲ್ಲಿ ಐಕ್ಯಚಿಂತನೆ ಮಾಡಿಕೊಂಡು ಅಂಥಾ ವಿಮಾನ ದೊಳಗೆ ಕೂಡಿಸಿಕೊಂಡು.

## ನವಖಂಡಗಳು : 1.ಭರತಖಂಡ

ಈ ಭರತಖಂಡದಲ್ಲಿದ್ದ ಗಂಗಾದಿ ಸರ್ವನದಿಗಳಲ್ಲಿ ಅಭೀಷೇಕಮಾಡಿಸಿ ಪುಣ್ಯಪರ್ವತಗಳ ಚಿಂತನೆಮಾಡಿ ಪುಣ್ಯಕ್ಷೇತ್ರಗಳು ತಿರುಪತಿ,ಅಹೋಬಲ, ಉಡುಪಿ,ಗೋಕರ್ಣ, ಪಂಢರಪುರ, ರಾಮೇಶ್ವರ,ಕಾಶಿ, ಪ್ರಯಾಗ, ಗೋಕುಲ, ವೃಂದಾವನ, ದ್ವಾರಕ, ಶ್ರೀಮುಷ್ಣ, ಕೊಪ್ಪರನಾರಸಿಂಹ, ಬದರಿಕಾಶ್ರಮ. ಇಷ್ಟು ಭಗವದ್ರೂಪಗಳಲ್ಲಿ, ಪ್ರಾಜ್ಞನ ಅಂಶದಿಂದ ತೆಗೆದು ಈರೂಪಗಳಲ್ಲಿ ಚಿಂತಿಸಿ, ಪ್ರಾರ್ಥಿಸಿ, ಚತುರ್ಗುಣೋಪಾಸನೆಮಡಿ ಮತ್ತೆ ವಿಮಾನದಲ್ಲಿದ್ದು ಪ್ರಾಜ್ಞನಲ್ಲಿ ಐಕ್ಯಚಿಂತಿಸಿ, ಬದಿರಿಕಾಶ್ರಮದಲ್ಲಿ ನಾರಾದರು ಮೊದಲು ಋಷಿಗಳುನಾರಾಯಣನ ಪ್ರಜಾ ಅದ್ಯಾಪಿ ಮಾಡುತ್ತಿದ್ದಾರೆ. ಶ್ರೀಮದಾನಂದ ತೀರ್ಥರು ವೇದವ್ಯಾಸರಲ್ಲಿ ಓದುತ್ತಾ ಇದ್ದಾರೆ. ಇವರಲ್ಲಿ ಪ್ರಜಾಮಾಡಿಕೊಂಡು ಆಮ್ಯಾಲೆ ಹೇಳಿದ ಪ್ರಕಾರ ಹಿಮವತ್‌ಪರ್ವತ ದಾಟಬೇಕು. ಹಿಮಪರ್ವತ 80ಸಾವಿರ ಗಾವುದ, ಉದ್ದ 10 ಸಾವಿರ ಗಾವುದ, ಎತ್ತರ 2ಸಾವಿರ ಗಾವುದ ಅಗಲ. ಇಂಥಾ ಭರತಖಂಡ ಸಾಧನಭೂಮಿ. ಮೋಕ್ಷಬೇಕಾದರೆ ಸಂಸಾರದಲ್ಲಿದ್ದು ಸಾಧನ ಮಾಡಬೇಕು. 100 ವರುಷ ಆಯುಷ್ಯ. ಪ್ರಾಣಾಂತರ್ಗತ ಪರಮಾತ್ಮನಲ್ಲಿ ಸರ್ವಸಮರ್ಪಣ ಮಾಡಬೇಕು. ನಾರಾಯಣನ ಉಪಾಸನ ನಾರದರು ಬದರಿಯಲ್ಲಿ ಮಾಡುತ್ತಾರೆ. ಭರತಖಂಡ 9000 ಸಾವಿರ ಗಾವುದಲಿಂದ, ಭರತರಾಜ–ಅಲ್ಲಿಂದ.

## 2. ಕಿಂಪುರುಷಖಂಡ

ಕಿಂಪುರಷಖಂಡಕ್ಕೆ ಹೋಗಬೇಕು. ಇದು 9000 ಗಾವುದ ವಿಸ್ತೀರ್ಣ. ಇಲ್ಲಿ ಒಬ್ಬೊಬ್ಬರಿಗೆ 10000 ವರುಷ ಆಯುಸ್ಸು. ಮತ್ತು ಇಲ್ಲಿ ಒಬ್ಬೊಬ್ಬರು 100 ಆನಿಗಳಬಲವುಳ್ಳವರು.ಇಲ್ಲಿ ಪ್ಲಕ್ಷಗಿಡಗಳು ವಿಶೇಷ ಜೇನುತುಪ್ಪದಿಂದ ಕೂಡಿವೆ.

ಇಲ್ಲಿಯ ಜನರಿಗೆ ಈಜೇನುತುಪ್ಪ ಆಹಾರ. ಜನರು ಭಂಗಾರದವಸ್ತ್ರದಿಂದ ಇರುತ್ತಾರೆ. ಹನುಮಂತದೇವರು ಇಲ್ಲಿ ಶ್ರೀರಾಮಚಂದ್ರನ ಉಪಾಸನಮಾಡುತ್ತಾರೆ. **ಅರ್ಜಿಸೇನ** ಮಿಕ್ಕಾದ ಗಂಧರ್ವರು ಶ್ರೀಮೂಲರಾಮಾಯಣವನ್ನು ಹಗಲು ರಾತ್ರಿ ಗಾಯನಮಾಡುತ್ತಾರೆ. (ಹನುಮಂತ ದೇವರ ಬದಿಯಲ್ಲೇ) ಉತ್ತರಕ್ಕೆ ಹೇಮಕೂಟ ಪರ್ವತವಿದೆ. ಇದು 90 ಸಾವಿರಯೋಜನ ಉದ್ದ, 10000 ಗಾವುದ ಎತ್ತರ 2 ಸಾವಿರ ಗಾವುದ ಅಗಲ. ಇದನ್ನು ದಾಟಿ:-

## 3. ಹರಿವರ್ಷಖಂಡ

ಈಕಿಂಪುರುಷಖಂಡವನ್ನು ದಾಟಿ ಹರಿವರ್ಷ ಖಂಡಕ್ಕೆ ಹೋಗಬೇಕು. ಈಕಿಂಪುರುಷ ಖಂಡದಲ್ಲಿ ಹನುಮಂತರ್ಗತ ಶ್ರೀರಾಮಚಂದ್ರಮೂರ್ತಿಯನ್ನು, ವಿಮಾನದೊಳಗಿನ ಬಿಂಬನ್ನ ವಂದು ಅಂಶದಿಂದ ಐಕ್ಯಚಿಂತನವಮಾಡಿ, ಪೂಜಾಮಾಡಿ, (ಪಂಚಭೂತಗಳಿಂದ ಚತುರ್ಗುಣೋ ಪಾಸನ) ತಿರುಗಿ ಬಿಂಬನ್ನ ಉಪಸಂಹಾರವಮಾಡಿ ಹೇಮಕೂಟ ಪರ್ವತದಾಟಿ ಹರಿವರ್ಷಖಂಡಕ್ಕೆ ಹೋಗಬೇಕು. ಈಹರಿವರ್ಷಖಂಡ 9000 ವಿಸ್ತೀರ್ಣ. ಇಲ್ಲಿ **ಪಾರಿಜಾತವನ ವಿದೆ.** ಆವನದೊಳಗೆ ಪರಮಾತ್ಮನ ಶೃಂಗಾರ ವಿಮಾನವಿದೆ. ದೇವತೆಗಳಿಂದ ರಕ್ಷಿಸಲ್ಪಟ್ಟಿದೆ. ರಾಜ ಹರಿವರ್ಷ. ಇಲ್ಲಿ ಪ್ರಲ್ಹಾದರಾಜರು ಶ್ರೀನರಸಿಂಹದೇವರ ಉಪಾಸನ ಮಾಡುತ್ತಾರೆ. ಇಲ್ಲಿ ಜನರಿಗೆ 10000 ವರುಷ ಆಯುಸ್ಸು. ಇಲ್ಲಿ ಆಹಾರ ಇಕ್ಷುರಸ. ಜನರು ಗಿಡದ ಬಳ್ಳಿಗಳಂತೆ ವರ್ಣ. ಇದರ ಉತ್ತರಕ್ಕೆ ನಿಷದ ಪರ್ವತ. ಇದು 90000 ಉದ್ದ ಅಗಲ 10000 ಗಾವುದ ಎತ್ತರ. ಇದು ದಾಟಿ:

## 4. ಇಳಾವರ್ತಖಂಡ

ಹರಿವರ್ಷಖಂಡ ದಾಟಿ ಇಳಾವರ್ತಖಂಡ ಅದೆ. ಇಲ್ಲಿಯರಾಜ ಇಳಾವರ್ತ. ಇದರ ನಡು ಮಧ್ಯ ಮೇರುಪರ್ವತವಿದೆ. ವಂದುಲಕ್ಷ ಗಾವುದಎತ್ತರವಿದೆ. ಕೆಳಗೆ 16 ಸಾವಿರಗಾವುದ ಪರ್ವತದಮೇಲೆ 32 ಸಾವಿರಗಾವುದ ಅಗವಾದ ವಿಶಾಲವಾದ ಪ್ರದೇಶವಿದೆ. **ಈಪರ್ವತ ಭೂಮಿಯ ವಳಗೆ 16000 ವಳಗೆ ಹೋಗಿ ಅತಳಲೋಕದಲ್ಲಿ ಕಾಣಿಸುತ್ತದೆ.** ಈಮೇರುವಿಗೆ ನಾಲ್ಕುದಿಕ್ಕಿಗೆ ನಾಲ್ಕುಪರ್ವತಗಳಿವೆ. **ಉತ್ತರಕ್ಕೆ ಕುಮುದ 10000 ಗಾವುದ ಎತ್ತರ ಉದ್ದ. ಪಶ್ಚಿಮಕ್ಕೆ ಸುಪಾರ್ಶ್ವ 10000 ಎತ್ತರ ಉದ್ದ. ಪೂರ್ವಕ್ಕೆ ಮಂದರ 10000 ಗಾವುದ ಎತ್ತರ ಉದ್ದ. ದಕ್ಷಿಣಕ್ಕೆ ಮೇರು ಮಂದರ 10000 ಗಾವುದ ಎತ್ತರ ಉದ್ದ. ಈ ಪರ್ವತದಮ್ಯಾಲೆ 1100 ಯೋಜನ ಮಾವಿನಗಿಡ ಇದೆ. ಇದರ ಶಾಖೆಗಳು**

**100 ಗಾವುದವಿದೆ. ಇದರ ಹಣ್ಣುಗಳು ಒಂದೊಂದು ಆನಿಗಾತರವಿದೆ.** ಈಹಣ್ಣುಗಳು ನೆಲಕ್ಕೆ ಬಿದ್ದು ಮಾವಿನಹಣ್ಣಿನ ಸೀಕರ್ಣಿ ನದಿರೂಪವಾಗಿ ಇಳಾವರ್ತಖಂಡದಲ್ಲಿ ಹರಿಯುತ್ತದೆ. ಮಂದರ ಪರ್ವತದಮ್ಯಾಲೆ ನಂದನವನವಿದೆ. ಈವನದೊಳಗೆ ಹಾಲಿನಸರೋವರ ಅರುಣೋಗದೆ ಎಂಬ ಹೆಸರಿನಿಂದ ಇದೆ. ಮೇರು ಮಂದರದ ಮ್ಯಾಲೆ ಚೈತ್ರರಥ ವನವಿದೆ. ಮೇಲೆ ಹೇಳಿದ ಎತ್ತರ ಉದ್ದ ಉಳ್ಳ **ಜಾಂಬೂವೃಕ್ಷ ವಿದೆ.** ಈವೃಕ್ಷದಿಂದ ಆನಿಗಾತರ ಹಣ್ಣುಗಳು ಬಿದ್ದು **ಜಂಬೂನದಿಯಾಗಿ ಹರಿಯುತ್ತಿದೆ.** ಇದು ಇಳಾವರ್ತದಲ್ಲಿ ಹರಿಯುತ್ತದೆ. ಈನದಿಗಡ್ಡಿಕೆಸರು, ಮಣ್ಣು ವಣಗಿ ಭಂಗಾರ ವಾಗುತ್ತದೆ. ಇದನ್ನು ದೇವತೆಗಳು ಆಭರಣಕ್ಕೆ ಉಪಯೋಗಿಸುತ್ತಾರೆ. ಇಲ್ಲಿ ಜೇನುತುಪ್ಪದ ಸರೋವರ **ಮಹಾಭದ್ರ ಎಂತಿದೆ. ಪಶ್ಚಿಮಕ್ಕೆ ಸುಪಾರ್ಶ್ವ ಪರ್ವತ.** ಇಲ್ಲಿ ವೈಬ್ರಾಜಿಕ ವನವಿದೆ. ಇಲ್ಲಿ ದೇವಕದಂಬ ವೃಕ್ಷ ಮಾವಿನ ಗಿಡದಂತೆ ಇದೆ. ಇದರಹಣ್ಣುಗಲು ಬಿದ್ದು 5 ಪ್ರವಾಹಗಳಂತೆ 40 ಅಡಿ ಅಗಲವಾಗಿ ಇಳಾವರ್ತಖಂಡದಲ್ಲಿ ಹರಿಯುತ್ತದೆ. ಉತ್ತರಕ್ಕೆ ಕುಮುದ ಪರ್ವತ. ಇಲ್ಲಿ ಸರ್ವತೋಭದ್ರ ಎಂಬ ವನವಿದೆ. ಇಲ್ಲಿ ಮಾವಿನತಿಡದಂತೆ ವಟವೃಕ್ಷವಿದೆ. ಈವೃಕ್ಷ ಕೇಳಿದ ವರಿಗೆ ಹಾಲು,ತುಪ್ಪ, ಬಯಿಸಿದಂತೆ ಊಟ, ಬೇಡಿದಂತೆ ಬಟ್ಟೆಗಳು ಕೊಡುತ್ತದೆ. ಇಲ್ಲಿ 100 ಯೋಜನ ಅಗಲವಿದೆ. ಈವನಕ್ಕೆ ದೇವತೆಗಳು ಕ್ರೀಡೆಮಾಡಲು ಬರುತ್ತಾರೆ. ಇಲ್ಲಿ ಅಲಸಿಕೆ, ಬ್ಯಾಸರಿಕೆ ರೋಗಗಳು, ಜ್ವರ,ಛಳಿ ಗಾಳಿ ಬಿಸಿಲು, ಮರಣದ ಬಾಧೆ ಇಲ್ಲಿ ಇಲ್ಲ. ಈವನಗಳು ದೇವತೆಗಳಿಗೆ ಕ್ರೀಡಾಜಾಗಕ್ಕೆ ಕೇಸರಿ,ಪರ್ವತಗಳು ಪೂರ್ವಕ್ಕೆ ಮೇರುವಿಗೆ, ಕುರಂಗ,ಕುರಗ, ವೈಕಂಕ, ಕುಸುಂಬ, ಚಿತ್ರಕೂಟ, ದಕ್ಷಿಣಕ್ಕೆ ಪತಂಗ, ಯತ್ಸಂಗ,ಶಿಶಿರ, ನಿಷಿಧ, ಸಿತಿವಾಸ. ಪಶ್ಚಿಮಕ್ಕೆ ಕಪಿಲ,ಶಂಖ, ವೈಢೂರ್ಯ,ಜಾರುಧಿ, ಹಂಸ, ಉತ್ತರಕ್ಕೆ ಋಷಭ,ನೀಲ, ನಾಗ, ಕಾಲಂಧರ, ನಾರದ, ಈಪರ್ವತಗಳಮ್ಯಾಲೆ ಬಹಳ ಪಟ್ಟಣಗಳಿವೆ. ಇಲ್ಲಿ ಶ್ರೀಲಕ್ಷ್ಮೀ, ವಿಷ್ಣು, ಅಗ್ನಿ,ಸೂರ್ಯ, ಇತ್ಯಾದಿ ರೂಪಗಳಿಂದ ಪೂಜೆ ತೆಗೆದುಕೊಳ್ಳುತ್ತಾರೆ. ಪರಿಸ್ತರಣ ಪರ್ವಗಳು ಪೂರ್ವಕ್ಕೆ ದೇವಕೂಟ,ಚಿತ್ರಪದ ದಕ್ಷಿಣಕ್ಕೆ ಕೈಲಾಸ, ಕರವೀರ, ಪಶ್ಚಿಮಕ್ಕೆ ಪವನ ಪಾದಿಯಾತ್ರ, ಉತ್ತರಕ್ಕೆ ಶ್ವೇತಮಕರ, ಕೈಲಾಸದಲ್ಲಿ ರುದ್ರ ನಾರಸಿಂಹನ ಉಪಾಸನ ಮಾಡುತ್ತಾನೆ. ಇಂಥಾ ಮೇರು ಪರ್ವತ ನಾಲ್ಕು ದಿಕ್ಕಿಗೆ ಇಳಾವರ್ತ (ನಾಲ್ಕು ದಿಕ್ಕಿಗೆ 9000) ಗಾವುದ ವಿಸ್ತೀರ್ಣ. ಚೌಕು ಆಗಿಇದೆ. ಇಳಾವರ್ತಖಂಡದಲ್ಲಿ "ಉಪಷ್ಟಂಬ" ಎಂತ ವನವಿದೆ. ಇದರೊಳಗೆ ಸುಕುಮಾರ ಎಂತ ವನವಿದೆ. ಇಲ್ಲಿ ಹೋದ ಪುರುಷರು ಸ್ತ್ರೀಯರಾಗುವಹಾಗೆ ಪಾರ್ವತಿ ದೇವಿಯರ ಶಾಪವಿದೆ. ಈವನದೊಳಗೆ ರುದ್ರಾಂತರ್ಗತ ಸಂಕರ್ಷಣನಲ್ಲಿ ವಂದು ವಿಮಾನದ ಬಿಂಬನ ಐಕ್ಯಚಿಂತಿಸಿ

ಪೂಜಿಸಿ, ಪ್ರಾರ್ಥಿಸಿ ಉಪಸಂಹಾರ ಮಾಡಕೊಂಡು ಮೇಲಕ್ಕೆ ಹೋಗಬೇಕು. ಅಂದರೆ ಮೇರುವಿಗೆ ಪ್ರದಕ್ಷಿಣಾ ರೂಪದಿಂದ ಪಶ್ಚಿಮಕ್ಕೆ ಕೇತುಮಾಲಾಖಂಡಕ್ಕೆ ಹೋಗಬೇಕು.

## 5. ಕೇತುಮಾಲಾಖಂಡ

ಇಳಾವರ್ತಖಂಡದಿಂದ ಪ್ರದಕ್ಷಿಣಾರೂಪದಿಂದ ಪಶ್ಚಿಮಕ್ಕೆ ಕೇತುಮಾಲಾಖಂಡಕ್ಕೆ ಹೋಗಬೇಕು. ಈಖಂಡದಲ್ಲಿರುವವರ ಆಯುಸ್ಸು 13000 ವರುಷ. ಈಖಂಡದಲ್ಲಿ ಮೇರುಪರ್ವತದ ಮ್ಯಾಲೆ 32000 ಗಾವುದ ಅಗಲ ವಾಗಿದೆ. ಇಲ್ಲಿ **"ಶತಕೋಟಿ"** ಎನ್ನತಕ್ಕ ಬ್ರಹ್ಮದೇವರ ಮನಿಇದೆ. ಈಮಂದಿರ 10000 ಗಾವುದವಿದೆ. ಅಂಗಳ 8000 ಗಾವುದ. ಈಅಂಗಳದಲ್ಲಿ ಸ್ವರ್ಗದಭೂಮಿ ವಡಕೊಂಡು ಭಾಗೀರಥಿನದಿ ಬೀಳುತ್ತದೆ. ಬಿದ್ದು ನಾಲ್ಕುಭಾಗವಾಗುತ್ತದೆ. ಪೂರ್ವಕ್ಕೆ ಭದ್ರಾಶ್ವಕ್ಕೆ **"ಶಿತಾ"** ಎಂಬ ಹೆಸರಿನಿನಥ ಪ್ರವಹಿಸಿ ಲವಣ ಸಮುದ್ರ ಸೇರುತ್ತಾಳೆ. ಉತ್ತರಕ್ಕೆ ಭದ್ರಾನದಿ ರಮ್ಯಕ, ಹಿರಣ್ಮಯಿ, ಕುರುಖಂಡದೊಳಗೆ ಹೋಗಿ ಲವಣಸಮುದ್ರ ಸೇರುತ್ತಾಳೆ. ಇದಕ್ಕೆ ಪೂರ್ವಕ್ಕೆ ಮಾಲ್ಯವಚಿತ ಪರ್ವತ 20 ಸಾವಿರ ಉದ್ದ 2000 ಗಾವುದ ಅಗಲ, 10000 ಗಾವುದ ಎತ್ತರ ದಕ್ಷಿಣಕ್ಕೆ 34000 ಗಾವುದ ಇಲ್ಲಿ 10000 ವರ್ಷ ಆಯುಸ್ಸು. ಇಲ್ಲಿ ಮಾವಿನ ಗಿಡದಂತೆ ಹಲಸಿನ ಗಿಡಗಳು ಇವೆ. ಇಲ್ಲಿ ಆಹಾರಹಳಸಿನಹಣ್ಣಿನರಸ. ಇಲ್ಲಿ ರತಿಪತಿ ಮನ್ಮಥ ಅಂತರ್ಗತ ಪ್ರದ್ಯುಮ್ನ ದೇವರನ್ನು ಪೂಜಿಸುತ್ತಾರೆ. ರತೀದೇವರಲ್ಲಿ, ಕೃತೀದೇವೇರ ಸನ್ನಿಧಾನ. ಇಂಥಾ ಪ್ರದ್ಯುಮ್ನ ದೇವರಲ್ಲಿ ನಮ್ಮ ವಿಮಾನದ ಬಿಂಬನನ್ನು ಐಕ್ಯಮಾಡಿ ಚಿಂತಿಸಿ–ಪೂಜಿಸಿ ಉಪಸಂಹಾರಮಾಡಿಕೊಂಡು, ಮುಂದೆ ಉತ್ತರಕ್ಕೆ.

## 6. ರಮ್ಯಕಖಂಡ

ಈಕೇತುಮಾಲಾಖಂಡದಿಂದ ಉತ್ತರಕ್ಕೆ ರಮ್ಯಕಖಂಡಕ್ಕೆ ಹೋಗಬೇಕು. ಇಳಾವರ್ತಖಂಡಕ್ಕೆ ರಮ್ಯಕಖಂಡಕ್ಕೂ ಮಧ್ಯ ನೀಲಪರ್ವತವಿದೆ. ಇದು 90000 ಯೋಜನ ಉದ್ದ 2000 ಯೋಜನ ಅಗಲ, 10000 ಯೋಜನ ಎತ್ತರ. ಈಪರ್ವತದಲ್ಲಿ ಇಂದ್ರನೀಲಾ ಮಾಣಿಕ್ಯಗಳು ವಿಶೇಷವಾಗಿ ಉಂಟು. ಇವು ಬೆಕ್ಕಿನಕಣ್ಣುಗಳಂತೆ ಹೊಳೆಯುತ್ತಿರುತ್ತವೆ. ರಮ್ಯಕಖಂಡ 9000 ಗಾವುದ ವಿಸ್ತೀರ್ಣ. ಇಲ್ಲಿ ವೈವಸ್ವತಮನು ಮತ್ಸ್ಯಮೂರ್ತಿಯನ್ನು ಉಪಾಸನಮಾಡುತ್ತಾನೆ. ಇಲ್ಲಿನವರಿಗೆ ಆಯುಸ್ಸು 10000ವರುಷ. ಇಲ್ಲಿಯ ಆಹಾರ ಅಂಜೂರು ಹಣ್ಣುಗಳು ಇದರ ರಸ. ರಾಚಕ, ರಮ್ಯಕ. ಈರಮ್ಯಕಖಂಡಕ್ಕೂ ಮಧ್ಯ ಶ್ವೇತಪರ್ವತವಿದೆ. ಇದು 20000 ಉದ್ದ–10000 ಗಾವುದ ಎತ್ತರ, 2000ಗಾವುದ ಅಗಲ.

## 7. ಹಿರಣ್ಮಯಖಂಡ

ಇದು 9000 ಗಾವುದ ವಿಸ್ತೀರ್ಣ. ಇಲ್ಲಿನವರಿಗೆ 12000 ವರುಷ ಆಯುಸು. ಇಲ್ಲಿ ಆಹಾರ ಬಿಲ್ವಹಣ್ಣು. ಇಲ್ಲಿ ಪಿತೃದೇವತೆಗಳ ಆರ್ಯಮನು ಕೂರ್ಮರೂಪಿಪರಮಾತ್ಮನನ್ನು ಉಪಾಸನ ಮಾಡುತ್ತಾನೆ. ಇದಕ್ಕೆ ಉತ್ತರಕ್ಕೆ ಶೃಂಗಪರ್ವತವಿದೆ. ಇದು 90000 ಉದ್ದ2000 ಗಾವುದ ಅಗಲ. 10000 ಗಾವುದ ಎತ್ತರ. ಈಪರ್ವತಕ್ಕೆ ಮೂರುಗೋಪುರಗಳಂತೆ ವಿಶಾಲವಾದ ಪ್ರದೇಶ. ವಂದು ನವರತ್ನ ಮಾಣಿಕ್ಯರಡರಮಧ್ಯ, ಭಂಗಾರದ್ದು ಮೂರನೇಯದು. ಇದರಮ್ಯಾಲೆ ದೊಡ್ಡದಾದ ಮನೆಗಳು ಇವೆ. ಇಲ್ಲಿಗೆ ದೇವತೆಗಳು ಬಂದು ವಿಹಾರಮಾಡುತ್ತಾರೆ.

## 8. ಕುರುಖಂಡ

ಇಲ್ಲಿ ಭೂದೇವಿಯುವರು ವರಾಹಮೂರ್ತಿಯನ್ನು ಉಪಾಸನ ಮಾಡುತ್ತಾರೆ. ಇಲ್ಲಿನವರಿಗೆ 14500 ವರುಷಗಳು ಆಯುಷ್ಯ. ಇಲ್ಲಿಕೆಲವು ಕಲ್ಪವೃಕ್ಷದಂತೆ ಬೇಡಿದ ಪದಾರ್ಥಗಳನ್ನು ಕೊಡುತ್ತವೆ. ಇಲ್ಲಿ ಅದೇಪ್ರಕಾರ ಉಪಾಸನಮಾಡಿ ನಾವು ತಿರುಗಿ ಹಿಂದಕ್ಕೆ ಬಂದು ಪೂರ್ವಕ್ಕೆ ಭದ್ರಾಶ್ವಖಂಡ.

## 9. ಭದ್ರಾಶ್ವಖಂಡ

ಇಳಾವರ್ತಖಂಡಕ್ಕೆ ಭದ್ರಾಶ್ವಖಂಡಕ್ಕೂ ನಡುವೆ ಗಂಧಮಾದನ ಪರ್ವತವಿದೆ. ಇದು 10000 ಗಾವುದ ಎತ್ತರ. 90000 ಗಾವುದ ಉದ್ದ. 2000ಗಾವುದ ಅಗಲವಿದೆ. ಭದ್ರಾಶ್ವಖಂಡ ಪೂರ್ವ,ಪಶ್ಚಿಮ 31000 ಗಾವುದ , ಉತ್ತರ ದಕ್ಷಿಣ 34000ಗಾವುದ. ಇಲ್ಲಿಯ ರಾಜಾಭದ್ರಾಶ್ವ, ಇಲ್ಲಿ ಶ್ರೀವಾದಿರಾಜ ಸ್ವಾಮಿಗಳು ಸಹ ಇದ್ದಾರೆ. ಇಲ್ಲಿ ಹಯಗ್ರೀವಮೂರ್ತಿಯನ್ನು ಉಪಾಸನೆ ಮಾಡುತ್ತಾರೆ. ಇಲ್ಲಿ ಭದ್ರಾ ಎಂಬವನವಿದೆ. ಅಲ್ಲಿ ಮಾವಿನವೃಕ್ಷಗಳಿವೆ. ಇಲ್ಲಿನವರಿಗೆ 10000 ವರುಷ ಆಯುಷ್ಯ. ಇಲ್ಲಿ ಹಯಗ್ರೀವನನ್ನು ಉಪಾಸನೆಮಾಡಿಕೊಂಡು ಮತ್ತು ಮೇರುವಿಗೆ ಪ್ರದಕ್ಷಿಣವಾಗಿ ಕುರುಖಂಡಕ್ಕೆ ಹೋಗಬೇಕು. **ಈ ಓಂಭತ್ತುಖಂಡ ಉಳ್ಳದ್ವೀಪಕ್ಕೆ "ಜಂಬೂದ್ವೀಪ" ಎಂದು ಹೆಸರು.**

## ನವದ್ವೀಪಗಳು 1. ಜಂಬೂದ್ವೀಪ

ಇದು ವಟ್ಟುಕೂಡಿ ವಂದುಲಕ್ಷಗಾವುದ ಹ್ಯಾಗೆ ಎಣಿಸಿದರು ಆಗುತ್ತದೆ. ಭರತಖಂಡ ವಂದು ಬಿಟ್ಟು ಮಿಕ್ಕ ಎಂಟು ಖಂಡದಲ್ಲಿ 10000 ಆನೆಬಲವುಳ್ಳ

ಜನರು. ಈಜಂಬೂದ್ವೀಪಕ್ಕೆ ಉಪದ್ವೀಪಗಳಿವೆ. ಅವು ಯಾವ್ಯದೆಂದರೆ, ಸಗರರಾಜನ ಮಕ್ಕಳು ಯಜ್ಞಾಶ್ವವನ್ನು ಹುಡುಕುಲಿಕ್ಕೆ ಹೋದಾಗ್ಗೆ,ಸಮುದ್ರದೊಳಗೆ ಮಣ್ಣುಕಿತ್ತಿ ಹಾಕಿದಾಗ ಈದ್ವೀಪಗಳು ಆಗಿವೆ. ಅವುಯಾವುದೆಂದರೆ, **ಸ್ವರ್ಣ,ಪ್ರಸ್ತ,ಚಂದ್ರ,ಶುಕ್ರ, ಅವರ್ತನಾ, ರಮಣಕ, ಮುದಾಹರಣ, ಪಂಚಜನ್ಯ, ಸಿಂಹಳಾ, ಲಂಕಾ,** ಇನ್ನೂ ಇತರ ಚಿಲ್ಲರ ದ್ವೀಪಗಳು ಸಹ ಇವೆ. **ಅಂಗದ್ವೀಪ, ಯಮದ್ವೀಪ, ಮಲಯದ್ವೀಪ, ಶಂಖದ್ವೀಪ, ಕುಶದ್ವೀಪ, ವರಹದ್ವೀಪ,** ಇತ್ಯಾದಿಗಳು. ಈ ಜಂಬೂದ್ವೀಪದ ಸುತ್ತಲು ಲವಣ ಸಮುದ್ರ ವಂದುಲಕ್ಷಗಾವುದ ಇದರ ತರುವಾಯ,

2. **ಪಕ್ಷದ್ವೀಪ:–** ಇದು ಎರಡು ಲಕ್ಷಗಾವುದ ಲವಣಸಮುದ್ರಸುತ್ತಲು ಇದೆ. ಇಂದಃಜಿಹ್ವ. 7ಮಂದಿ ಮಕ್ಕಳು, ಇವರ ಹೆಸರು. 1.ಶಿವ, 2ಯಶಸ, 3.ಶಾಂತ, 4.ಕ್ಷೇಮ, 5.ಸುಭದ್ರ, 6.ಅಮೃತ, 7.ಅಭಯ, ಏಳುಖಂಡಕ್ಕೂ ವಿಭಾಗ ಏಳು ಪರ್ವತಗಳು. 1.ಮಣೀಕೂಟ, 2.ವಜ್ರಕೂಟ, 3.ಇಂದ್ರಸೇನಾ, 4.ಜ್ಯೋತಿರ್ಭಾನು, 5.ಧೂಮ್ರವರ್ಣ, 6.ಹಿರಣ್ಯಗ್ರೀವ, 7.ಮೇಘಮಾಲಾ. ಏಳುನದಿಗಳು 1.ಅರುಣ, 2.ಅನುಗುಣ, 3.ಅಂಗೀರಸ, 4.ಸಾವಿತ್ರಿ, 5.ಸುಪ್ರಭಾ, 6.ರುತುಂಬರಾ, 7.ಸತ್ಯಂಬರಾ. ಇಲ್ಲಿಪ್ಲಕ್ಷವೃಕ್ಷ 100ಯೋಜನ ಎತ್ತರ, ಇದರ ಮ್ಯಾಲೆ ಅಗ್ನಿ ಸಪ್ತಜಿಂಹ್ವದಿಂದ, ಇದ್ದಾನೆ. ಇಲ್ಲಿ ಜನರ ವರ್ಣಗಳು ಹಂಸ, ಪಾತಂಗ, ಗೋದ್ವಾಯ, ಸತ್ಸಂಗ, ಈನದಿಗಳಲ್ಲಿ ಸ್ನಾನಮಾಡಿದರೆ ಪಾಪದಿಂದ ನಿವೃತ್ತರಾಗಿ ಒಂದುಸಾವಿರ ವರುಷ ಸುಖದಿಂದ ಇರುತ್ತಾರೆ. ಈದ್ವೀಪದಲ್ಲಿ ಸೂರ್ಯಾಂತರ್ಗತ ನಾರಾಯಣನ ಉಪಾಸನೆ ಮಾಡುತ್ತಾರೆ. ಈ ರೂಪವನ್ನು ಉಪಾಸನೆ ಮಾಡಿಕೊಂಡು ನಾವು ಮುಂದಕ್ಕೆ ಹೋಗಬೇಕು. ಮುಂದೆ ಇಕ್ಷ್ವಾಕು ಸಮುದ್ರ 200000 ಗಾವುದ ಇದರ ಸುತ್ತಲೂ:–

3. **ಶಾಲ್ಮಲೀದ್ವೀಪ:–** ಶಾಲ್ಮಲೀದ್ವೀಪ 400000 ಗಾವುದ. ರಾಜಾ ಯಜ್ಞಬಾಹು. ಇಲ್ಲಿ ಶಾಲ್ಮಲೀ ವೃಕ್ಷ 1650ಯೋಜನೆ. ಇದರ ಮ್ಯಾಲೆ ಗರುಡನವಾಸ. ಈರಾಜಗೆ ಏಳು ಜನ ಮಕ್ಕಳು. ಇವರ ಹೆಸರೆ ಖಂಡಗಳಾಗಿವೆ. 1.ಸುಲೋಚನ, 2.ಸೋಮ,3.ನಶ್ವರ, 4.ರಮಣಕ, 5.ದೇವಬರ್ಹ. 6.ವಾರಿಭದ್ರ, 7.ಅಪ್ಯಾಯನ. ಅದರ ಪರ್ವತಗಳು. 1.ಸುರಸ,2.ಶತಶೃಂಗ,3.ವಾಮದೇವ, 4.ಕುಂದ,5.ಮುಕುಂದ, 6.ಪುಷ್ಕರವೃಕ್ಷ, 7.ಸಹಸ್ರುತಿ. 7ನದಿಗಳು. 1.ಅನುಮತಿ, 2.ಶನಿವಾಲಿ, 3.ಕುಹಾಸರಸ್ವತಿ, 4.ರಜನಿ,5.ನಂದ, 6.ರಾಕಾ,7.ಚಾಕ್ಷರು. ವರ್ಣಗಳು 1.ಸೂತ್ರಾಧಾರ, 2.ವೀರ್ಯಾಧಾರ, 3.ವಸುಧಾರ, 4.ಊರ್ಧ್ವಧಾರ. ಇಲ್ಲಿ ಜನರು

ಚಂದ್ರಾಂತರ್ಗತ ಪ್ರದ್ಯುಮ್ನ ದೇವರನ್ನು ಉಪಾಸನವಾಡುತ್ತಾರೆ. ಈ ಉಪಾಸನೆಮಾಡಿ ಮುಂದೆಹೋಗಬೇಕು. ಇದರ ಸುತ್ತಲು ಸುರಾಸಮುದ್ರ 400000 ಗಾವುದ ಇದರ ಸುತ್ತಾ:-

**4. ಕುಶದ್ವೀಪ:-** ಕುಶದ್ವೀಪದ ವಿಸ್ತೀರ್ಣ 400000 ಗಾವುದ. 1100 ಯೋಜನಉಳ್ಳ ಕುಶದ ಹುಲ್ಲುಕಡ್ಡಿ ಅಂತ ವೃಕ್ಷವಿದೆ. ಇದು ಬಹು ಕಾಂತಿಉಳ್ಳದ್ದಾಗಿ ಈ ದ್ವೀಪದಲ್ಲಿ ಬೆಳಕು ಮಡುತ್ತದೆ. ಇಲ್ಲಿ ರಾಜ- ಹಿರಣ್ಯರೇತ, 7ಮಕ್ಕಳು. ಇವರಹೆಸರೆ ಖಂಡಗಳು. 1.ವಸುಧಾನ, 2.ಧೃಡ, 3.ರುಚಿ, 4.ನಾಭಿಗುಪ್ತ, 5.ಸತ್ಯವ್ರತ, 6.ವಿಪ್ರ,7.ವಾಮದೇವ. 7ಖಂಡಗಳಿಗೆ 7ಪರ್ವತಗಳು ಭಾಗವಾಗಿದೆ. 1.ಚಕ್ರ,2.ಚಾರುಶೃಂಗ, 3.ಕಪಿಲ, 4.ನಿಮ್ನಕೂಟ, 5.ದೇವಾನಿಕ, 6.ಊರ್ಧ್ವ ರೋಮ, 7.ದ್ರವೀಣ. 7 ನದಿಗಳು. 1.ರಸತುಲ್ಯ, 2.ಮಧುತುಲ್ಯ, 3.ಸ್ರುತವಿಂದ, 4.ಮಿತ್ರವಿಂದ, 5.ಸೇನಗರ್ಭ, 6.ಘೃತಾಚ್ಯುತ, 7.ಮಂತ್ರಮಾಲಾ. ಚಾರುವರ್ಣಗಳು. 1.ಕುಶಲ, 2.ಕೋವಿದ, 3.ಅಭೀಯುಕ್ತ, 4.ಕುಲಕ. ಆಯುಸ್ಸು 1000 ವರ್ಷ. ಅಗ್ನಿ ಅಂತರ್ಗತ ಪರಶುರಾಮನನ್ನ ಉಪಾಸನಮಾಡಿಕೊಂಡು ಮುಂದೆಹೋಗಬೇಕು. ಈದ್ವೀಪಕ್ಕೆ ಸುತ್ತಲು ಘೃತಸಮುದ್ರವಿದೆ 800000 ಗಾವುದ ವಿದೆ. ಮುಂದೆ ಇದರ ಸುತ್ತಲು.

**5. ಕ್ರೌಂಚದ್ವೀಪ:-** ಕ್ರೌಂಚದ್ವೀಪ ವಿಸ್ತೀರ್ಣ 1600000 ಗಾವುದ. ಇಲ್ಲಿ ಕ್ರೌಂಚಪರ್ವತವಿದೆ. ಸ್ಕಂಧ ಈಪರ್ವತದೊಳಗೆ ಬಾಣದಿಂದ ಹೊಡೆದು ದೊಡ್ಡ ಬಿಲಮಾಡಿದ್ದಾನೆ. ಇದನ್ನು ವರುಣ ಸಂರಕ್ಷಣ ಮಾಡುತ್ತಿದ್ದಾನೆ. ರಾಜಾ ಧೃತಪು. ಇವನಿಗೆ 7ಜನ ಮಕ್ಕಳು. ಇವರು 1.ಚಾರು,2.ಮೇಘಪುಷ್ಪ, 3.ಸುಧಾಮ,4.ಋಷಿ,5.ಜ್ವಾಲಾ, 6.ಲೋಹಿತವರ್ಣ, 7.ವದಸ್ಪತಿ. ಪರ್ವತಗಳು 1.ಶುಕ್ಲ, 2.ವರ್ಧಮಾನ,3.ಉಪಬರ್ಹಣ,4.ಉಪಭೋಜನ, 5ನಂದ,6.ನಂದನ, 7.ಸರ್ವತೋಭದ್ರ. ನದಿಗಳು 1ಅಭಯ, 2.ಅಮೃತೋಪ, 3.ಆರ್ಯಕ, 4.ತೀರ್ಥವತಿ, 5.ರೂಪವತಿ, 6.ಪವಿತ್ರ, 7.ಶುಕ್ಲಪದಿ. ಚಾತುರ್ವರ್ಣ-1ಗುರು, 2.ವೃಷಭ, 3.ಪ್ರವೀಣ, 4.ದೇವ. ವರುಣಾಂತರ್ಗತ ಮತ್ಸ್ಯರೂಪಿಯನ್ನು ಉಪಾಸನಮಾಡುತ್ತಾರೆ. ನಾವು ಮತ್ಸ್ಯಮೂರ್ತಿ ಉಪಾಸನಮುಗಿಸಿಕೊಂಡು ಮುಂದಕ್ಕೆ ಹೋಗಬೆಕು. ಇದರ ಸುತ್ತಲು 1600000 ಗಾವುದ ಸುತ್ತಲು ಇದೆ. ಇದರಸುತ್ತಾ:

**6. ಶಾಖಾದ್ವೀಪ:-** ಶಾಖಾದ್ವೀಪ 32 ಲಕ್ಷ ಗಾವುದ. ರಾಜ-ಮೇಧಾತಿಥಿ ಇಲ್ಲಿ ಶಾಖಾವೃಕ್ಷ. ಇದು ದ್ವೀಪಕೆಲ್ಲಾ ಸುವಸನೆ ಕೊಡುತ್ತದೆ. ಇಲ್ಲಿಯರಾಜನಿಗೆ

7 ಜನ ಮಕ್ಕಳು. 1.ಪುರೋಜವ, 2.ಮನೋಜವ,3.ವೇಪಮಾನ, 4.ದೂಮ್ರಾನಿಕ, 5.ವಿಚಿತ್ರರೇಥ,6.ಬಹುರೂಪ. 7.ವಿಶ್ವಧಾರ. 7ಪರ್ವತಗಳು 1.ಈಶಾನ, 2.ಉರುಶೃಂಗ, 3.ಬಲಭದ್ರ, 4.ಶತಕೇಸರ, 5.ಸಹಸ್ರಶ್ರೋತ, 6.ದೇವಪಾಲ. 7.ಮಹಾನಶ. 7ನದಿಗಳು. 1.ಅನರ್ಘ,2.ಆಯುರ್ದನ,3.ಉಭಯುಸ್ಪೃಷ್ಠಿ, 4.ಅಪರಾಜಿತ, 5.ಪಂಚಪದಿ, 6.ಸಹಸ್ರಶ್ವೇತ,7.ನಿಜಧೃತಿ. ಚಾತುರ್ವರ್ಣಗಳು. 1.ದ್ರೋತವ್ರತ, 2.ಸತ್ಯವ್ರತ, 3.ದಾನವ್ರತ, 4.ಅನುವ್ರತ. ಇಲ್ಲಿ ಪ್ರಾಣಾಯಾಮ ಪೂರ್ವಕವಾಗಿ ವಾಯು ಅಂತರ್ಗತ ವಾಸುದೇವನನ್ನು ಉಪಾಸನೆ ಮಾಡುತ್ತಾರೆ. ಇಂಥಾ ವಾಯು ಅಂತರ್ಗತ ವಾಸುದೇವನನ್ನು ಪೂಜಿಸಿ ಮುಂದೆಹೋಗಬೇಕು. ಈದ್ವೀಪದ ಸುತ್ತಲು ಕ್ಷೀರರಸವಿದೆ. 32 ಲಕ್ಷಗಾವುದ ಈಕ್ಷೀರಸಮುದ್ರದಲ್ಲಿ **ಶ್ವೇತದ್ವೀಪವಿದೆ.**

## 7. ಶ್ವೇತದ್ವೀಪ

ಈದ್ವೀಪಕ್ಕೆ ಹೋಗಲಿಕ್ಕೆ 12ಬಿಲಗಳುಇವೆ. ವಂದೊಂದು ಮಾರ್ಗ 10000 ಗಾವುದವಿದೆ. ಈಮಾರ್ಗವು ವಜ್ರ ಸ್ಫಟಿಕ,ಹಲಿಗೆಗಳಿಂದ ನಿರ್ಮಿತವಾದದ್ದು. ಇದರಬೆಳಕಿನಿಂದ ಕತ್ತಲೆಯೇಇಲ್ಲ. **ಈಶ್ವೇತದ್ವೀಪ ವಿರಾಡ್ರೂಪಿ ಪರಮಾತ್ಮನಿಗೆ ಕೆಳಹ್ರೆಟ್ಟೆಯಲ್ಲಿ ಇದೆ. ಶ್ವೇತದ್ವೀಪ 20 ಲಕ್ಷಗಾವುದ. ಶ್ರೀಭಾಗ 8ಲಕ್ಷ ಗಾವುದ. ಭೂಭಾಗ 6ಲಕ್ಷಗಾವುದ, ದುರ್ಗಾಭಾಗ 6ಲಕ್ಷ ಗಾವುದ.** ಪರಮಾತ್ಮನ ಮನಿಗೆ ದಕ್ಕುಗಳಿಗೆ 2 ಬಾಗಿಲು. ವಿದಿಕ್ಕಿನಲ್ಲಿ 4 ಬಾಗಿಲು. ಅಂತು 24 ಬಾಗಿಲು. ಇಲ್ಲಿ ಪರಮಾತ್ಮನ ವಿಮಾನವಿದೆ. ಇದು ಲಕ್ಷಗಾವುದ ಉನ್ನತ. ವಂದುಲಕ್ಷ 5ಸಾವಿರ ಅಗಲ. ಇಲ್ಲಿ ಪರಮಾತ್ಮನ ಹಾಸಿಕಿ. ಶೇಷನ ಉದ್ದ 3ಲಕ್ಷ ಗಾವುದ. ಎತ್ತರ ಎರಡುವರೆಲಕ್ಷ ಗಾವುದ. ಇಂಥಾ ಶೇಷನ ಹಾಸಿಕೆಯಲ್ಲಿ ವಾಸುದೇವ ಮೂರ್ತಿ. ಎರಡುವರೆಲಕ್ಷಗಾವುದ ಉದ್ದನಾಗಿ 16 ವರುಷದ ಮದಲಿಂಗನಾಗಿ ಮಲಗಿದ್ದಾನೆ. ಈವಾಸುದೇವನ ಅಳಿತಿ: 1.ಪಾದಗಳು= 36000 ಗಾವುದ; 2.ಪಾದದಿಂದ ಟೊಂಕದ ಪರಿಯಂತ= 100000ಗಾವುದ; 3.ಟೊಂಕದಿಂದ ನಾಭಿವರೆಗೆ= 18000ಗಾವುದ; 4.ನಾಭಿಯಿಚಿದ ವಕ್ಷ–ಉದರ–ಊರು–ಮುಖ ಕೂಡಿಸಿ= 182000 ಗಾವುದ; 5.ಲಲಾಟ=300 ಯೋಜನ; 6.ಕ್ರ್ಣಗಳು (ವಂದೊಂದು)=1000ಗಾವುದ; 7.ಕರ್ಣದ್ವಯಗಳು (ವಂದೊಂದು)=1000 ಗಾವುದ; 8.ಹುಬ್ಬುಗಳು=2000ಗಾವುದ; 9.ನಾಶಿಕ= 300 ಗಾವುದ; 10.ಬಾಹುಗಳು (ವಂದೊಂದು)=ಎರಡುಲಕ್ಷಗಾವುದ. ಬೆರಳೂ=1000ಗಾವುದ; 11.ಇಂಥಾವಾಸು ದೇವನನ್ನ ಸಕಲ ದೇವತೆಗಳು, ಮುಕ್ತಾಮುಕತ್ರು ಉಪಾಸನೆ

ಮಾಡುತ್ತಾರೆ. **ಪ್ರಳಯದಲ್ಲಿ ಈಶ್ವೇತದ್ವೀಪದ ನಿತ್ಯಾಭಾಗಕ್ಕೆ ನಾಶವಿಲ್ಲ.** ಈವಾಸುದೇವಮೂರ್ತಿಯನ್ನು ಗೃಹಸ್ಥಾಶ್ರಮಿಗಳು ಚಿಂತನೆಮಾಡಿ ಸತ್ಯಲೋಕ,ಅಗ್ನಿ ಸೂರ್ಯನದ್ವಾರ ಎಮ್ಮಗುರು, ಸ್ವಗುರುಬಿಂಬನಲ್ಲಿ ಐಕ್ಯಚಿಂತನೆಮಾಡಿ ಲಯಹೊಂದುವರು. **ಅನಿತ್ಯಭಾಗಕ್ಕೆನಾಶ ಉಚಿಟು. ಸೃಷ್ಠಿಕಾಲಕ್ಕೆ ಬ್ರಹಮಾಂಡ ಸೃಷ್ಠಿ ಆದನಂತರ ಅವರನ್ನು ಮತ್ತೆ ಸೃಷ್ಠಿಗೆ ತರುತ್ತಾನೆ. ಲಿಂಗಭಂಗ ಆದವರು ಸೃಷ್ಠಿಕಾಲಕ್ಕೆ ಪರಮಾತ್ಮನ ಉದರದಿಂದ ಹೊರಗೆಬಂದು ಈಶ್ವೇತದ್ವೀಪಕ್ಕೆ ಬಂದು ಈವಾಸುಧೇವನ ದರ್ಶನ ತೆಗೆದುಕೊಂಡು ಇಚ್ಚಾವರಣ ಅಪಸರಣವಾಗಿ ಇವರಿಂದ ಆಜ್ಞಪ್ತರಾಗಿ ಶ್ರೀಭಾಗಕ್ಕೆ ಹೋಗಬೇಕು.**

## ಶ್ರೀಭಾಗ

ಈ ಭಾಗಕ್ಕೆ ಮುಕ್ತರನ್ನು ಕಳಿಸಬೇಕು. ಈಂಥಾವಾಸುದೇವಮೂರ್ತಿಯ ಉಪಾಸನ ಮುಗಿಸಿ, ಈಮೂರ್ತಿಯು ಅನುಗ್ರಹದಿಂದ ಭರತಖಂಡದಿ ಸಾಧನವನ್ನು ಮುಗಿಸಿ ಅಪರೋಕ್ಷಿತನಾಗಿ, ಬ್ರಹ್ಮದೇವರ ತಾರಕೋಪದೇಶ ತೆಗೆದುಕೊಂಡು ವಿರಜಾನದಿ ಸ್ನಾನಮಾಡಿ ಪ್ರಳಯದಕಾಲಕ್ಕೆ ಪರಮಾತ್ಮನ ಉದರದಲ್ಲಿ ಬ್ರಹ್ಮದೇವರ ಸಹಿತನಾಗಿ ಪ್ರವೇಶಮಾಡುತ್ತಾನೆ. ಇಂಥಾಮೂರ್ತಿಯಲ್ಲಿ ನಮ್ಮಬಿಂಬನನ್ನು ವಂದು ಅಂಶದಿಂದ ವಿಮಾನದ ಅಗ್ರೇಶನಿಂದ ತೆಗೆದು ಈಮೂರ್ತಿಯಲ್ಲಿ ಐಕ್ಯಚಿಂತನೆಮಾಡಿ ಉಪಸಂಹಾರಮಾಡಿಕೊಂಡು ಮುಂದಕ್ಕೆ ಹೋಗಬೇಕು. ಈಕ್ಷೀರಸಮುದ್ರ ಸುತ್ತಲು ಪುಷ್ಕರದ್ವೀಪವಿದೆ 64ಲಕ್ಷ ಗಾವುದ ವಿಸ್ತೀರ್ಣ ಸುತ್ತಲುಇಹೆ. ಇಲ್ಲಿ 1100ಯೋಜನ ಅಗಲದ ಒಂದು ಸರೋವರ, ಪುಷ್ಪರಣಿಇದೆ. ಇಲ್ಲಿ ಒಂದು ಸಹಸ್ರದಳದ ಕಮಲ ವಿದೆ. ಇದು ಭಂಗಾರ ಮಯವಾಗಿದೆ. ಇದರಲ್ಲಿ ಬ್ರಹ್ಮದೇವರು ಇದ್ದಾರೆ. ಇಂಥಾ ಬ್ರಹ್ಮಾಂತರ್ಯಾಮಿ ವಾಸುದೇವನನ್ನು ಇಲ್ಲಿ ಜನರು ಉಪಾಸನೆಮಾಡುತ್ತಾರೆ. ರಾಜಾ–ವೀತಿಹೋತ್ರ ಇವನ ಮಕ್ಕಳು ಇಬ್ಬರು. 1ರಮಣಕ, 2.ಧಾತಕ, ಇವು ಖಂಡಗಳೂ ಹೌದು. ಇವೆರಡು ಖಂಡಗಳ ನಡುವೆ **ಮಾನಸೋತ್ತರ ಪರ್ವತವಿದೆ.** ಇದು 10000 ಸಾವಿರ ಗಾವುದ ಅಗಲ, 10000 ಗಾವುದ ಎತ್ತರ, ಈ ಪರ್ವತದಮ್ಯಾಲೆ 4ದಿಕ್ಕಿಗೆ 4 ಪಟ್ಟಣಗಳು ಇವೆ. 1.ದೇವದಾನಿ; 2.ಸಂಯಮಿನಿ, 3.ನಿಮ್ಲೋಚನಿ; 4.ವೈಭಾವರಿ. ಇಲ್ಲಿ ಇಂದ್ರ, ಯಮ, ವರುನ,ಕುಬೇರ,ಇರುತ್ತಾರೆ. ಈಪರ್ವತದ ಮ್ಯಾಲೆ ನವವೀಧಿಗಳು ಇವೆ. ಇಲ್ಲಿ ಸೂರ್ಯನರಥ ತಿರುಗುತ್ತದೆ. ನವವೀಧಿಗಳ ಒಳಗೆ 12 ರಾಶಿಗಳು, 27 ನಕ್ಷತ್ರಗಳು ಇವೆ. ಇದರ ಸುತ್ತಲು ಶುದ್ಧೋದಕ ಸಮುದ್ರವಿದೆ. ಶುದ್ಧೋದಕ ಸಮುದ್ರ 64ಲಕ್ಷಗಾವುದ ವಿದೆ. ಇದರಲ್ಲಿ **ಮಣಿದ್ವೀಪ** ಎಂತ ಒಂದು

ದ್ವೀಪವಿದೆ. ಇಲ್ಲಿ ಹಂಸ, ರಾಜರಾಜೇಶ್ವರಿ ಎನ್ನತಕ್ಕ ಆ ಪರಮಾತ್ಮನ ಸ್ತ್ರೀರೂಪವಿದೆ. ಇಲ್ಲಿ ಸಕಲ ದೇವತೆಗಳು ಬಂದು ಪೂಜೆ ಮಾಡುತ್ತಾರೆ. ಈಭಗವದ್ರೂಪ **ಪೃಥುಚಕ್ರವರ್ತಿಯಲ್ಲಿ** ಆವೇಶ ಉಂಟು. ಈ ಶುದ್ಧೋದಕ ಸಮುದ್ರದ ತರುವಾಯಿ ಸುವರ್ಣಭೂಮಿಯಿದೆ. ಇದು 96ಲಕ್ಷಗಾವುದ ಇದಕ್ಕೆ ಅಂಚು ಎರಡು ಕಡೆಗೆ 5ಲಕ್ಷ ಗಾವುದ ಪ್ರಾಕಾರ ನವರತ್ನ ಖಚಿತವಾದದ್ದು. ಇಂಥಾ ಸ್ವರ್ಣಭೂಮಿ ಪೀತಾಂಬರ ಎಂತ ಅನಿಸಿಕೊಳ್ಳುತ್ತದೆ. **ಇಲ್ಲಿ ಪುಣ್ಯಜೀವರು ಸುಖಬಡುತ್ತಾರೆ.** ಇದರ ತರುವಾಯಿ ಲೋಕಾಲೋಕಪರ್ವತವಿದೆ. ಇದು 50ಲಕ್ಷಗಾವುದ 50ಸಾವಿರ ಗಾವುದ ಅಗಲವಿದೆ.ಇಲ್ಲಿ ಅರ್ಧಭಾಗದ ವರೆಗೆ ಸೂರ್ಯನಬೆಳಕು. ಮಿಕ್ಕ ಅರ್ಧಭಾಗಕ್ಕೆ ಸೂರ್ಯನಬೆಳಕು ಇಲ್ಲ. ಇಲ್ಲಿ ಕತ್ತಲು, ಬೆಳಕಿದ್ದಸ್ಥಳದಲ್ಲಿ ಸ್ವಲ್ಪಪುಣ್ಯಮಾಡಿದವರಿಗೆ ವಾಸ. ಕತ್ತಲು ಸ್ಥಳದಲ್ಲಿ ಪಾಪಿಗಳಿಗೆ ವಾಸ. 2ಲಕ್ಷ ಗಾವುದ ಎತ್ತರವಿದೆ. ಇದರ ತರುವಾಯಿ ಅಂಧಃತಮಸ್ಸುಇದೆ. ಇದು 7ಕೋಟಿ ಗಾವುದಅಗಲವಿದೆ. 2ಲಕ್ಷಗಾವುದ ಎತ್ತರವಿದೆ. ಇಲ್ಲಿ ನಿತ್ಯನರಕಗಳು ಉಂಟು. ಇದು ನಿತ್ಯವಾದ ಪ್ರದೇಸ. ಪ್ರಳಯದಲ್ಲಿ ನಾಶವಿಲ್ಲ. **ಇಲ್ಲಿ ಕಲಿ ಮೊದಲಾದ ಪಾಪಿಗಳಿಗೆ ಇಲ್ಲಿಯೇ ಮೋಕ್ಷ. ವೈಕುಂಠದಲ್ಲಿ ಶ್ರೀಭಾಗಕ್ಕೆ ಲಿಂಗಭಂಗ ಆದಮ್ಯಾಲೆ ಹ್ಯಾಗೆ ನಿತ್ಯಲೋಕಕ್ಕೆ ಮುಕ್ತರು ಹೋಗುತ್ತಾರೋ, ಹಾಗೆಯೇ ಇಲ್ಲಿ ಪಾಪಿಗಳು ಲಿಂಗಭಂಗ ವಾದಕೂಡಲೇ ನಿತ್ಯನರಕ ಪ್ರವೇಶ.** ಇಲ್ಲಿಗೆಹೋದಮ್ಯಾಲೆ ಮತ್ತೆ ಸೃಷ್ಟಿಗೆ ಬರೋದಿಲ್ಲ. ಇದರತರುವಾಯ ಘನೋದಕ. ಇದು 14ಕೋಟಿಗಾವುದ ಅಗಲ ಸುತ್ತಲುಜದೆ. 10ಲಕ್ಷ ಗಾವುದ ಈಸಮುದ್ರದೊಳಗೆ ಇದೆ. ಇಲ್ಲಿ ಸಾವಿರಾರುಭಂಗಾರ ಮಾಣಿಕ್ಯ ರತ್ನಖಚಿತವಾದ ಪಟ್ಟಣಗಳುಇವೆ. **ಇಲ್ಲಿವಿಶೇಷ ಪುಣ್ಯವಂತರು ಇರುತ್ತಾರೆ. ಇದರ ತರುವಾಯಿ:-**

## ಅನಂತಾಸನ

ಇದು ಮೂರುಲಕ್ಷಗಾವುದ **ಶ್ರೀ, ಭೂ,ದುರ್ಗಾಭಾಗ** ಮೂರು ವಂದುಲಕ್ಷ ಪ್ರಾಕಾರವಿದೆ. ಇಲ್ಲಿ **ದೇವರು ಪದ್ಮನಾಭಿರೂಪದಿಂದ ಹಾನೆ.** ಈಅನಂತಾಸನ ವಿರಾಡ್ರೂಪಿ ಪರಮಾತ್ಮನಿಗೆ ವಡ್ಯಾಣ ಇದ್ದಹಾಗೆ ಇದೆ. ಈ ಅನಂತಾಸನ ಬ್ರಹ್ಮಾಂಡದ ಖರ್ಪರದಲ್ಲಿದೆ. ಇಂಥಾ ಪದ್ಮನಾಭದೇವರಲ್ಲಿ ಬಿಂಬನ್ನ ಐಕ್ಯಚಿಂತಿಸಿ, ಪ್ರಾರ್ಥಿಸಿ, ಪೂಜಿಸಿ, ಗುಣೋಪಾಸನೆಮಾಡಿ ಉಪಸಂಹಾರಮಾಡಿ, ಇಲ್ಲಿಂದ ಸೀದಾ ಮೇರುಪರ್ವತದ ಮ್ಯಾಲೆ ಬ್ರಹ್ಮಸದನಕ್ಕೆ ಬರಬೇಕು. ಅನಂತಾಸನಕ್ಕೂ ಶತಕೋಟಿಗೂ ವಂದೇ ರುಜುಮಾರ್ಗವಿದೆ. ನೇರವಾಗಿಇದೆ. ಅನಂತಾಸನ ಭೂಮಿಗೂ ಬ್ರಹ್ಮಸದನದಭೂಮಿಗೂ ವಂದೇ ಉನ್ನತವಿದೆ. ಈಬ್ರಹ್ಮಸದನದಲ್ಲೇ

ವೈಕುಂಠಪತಿ ನಾರಾಯಣ ಮೀಟಿಂಗು ಮಾಡಿ ಭೂಭಾರಹರಣ ನಾಶನವಾಗೋ ಏರ್ಪಾಟು ಆಗುವುದು. ನಂತರ ದೇವರು ಇಲ್ಲಿಂದ ಅವತಾರಮಾಡಿದ ದೇವತೆಗಳು ಆತಗೆ ಸಹಾಯಕ್ಕೆ ಇಲ್ಲಿಂದಲೇ ಅವತಾರವುಡಿದರು. ಆದಕಾರಣ ಇಲ್ಲಿಹರಿಕಥಾಮೃತಸಾರ ಬೃಹತ್ತಾರತಮ್ಯಸಂಧಿಯಂತ ಚಿಂತಿಸಬೇಕು. ಅನಂತಾಸನ ದಲ್ಲಿದ್ದಹರಿಮೂರ್ತಿಯನ್ನು ಬ್ರಹ್ಮಚಾರಿಗಳು, ವಾನಪ್ರಸ್ಥರು, ಹೃದಯದಲ್ಲಿ ಚಿಂತನಮಾಡಬೇಕು. ಸತ್ಯಲೋಕ ಅಗ್ನಿ ಸೂರ್ಯದ್ವಾರಸಂಧಿ, ದೇವಗಂಧರ್ವರು ಆರಂಭಮಾಡಿ ಬ್ರಹ್ಮದೇವರ ಪರಿಯಂತರ ಆವೇಶ-ಅವತಾರ, ಆವಿಷ್ಟ ಅಂಶಗಳನ್ನು ಸ್ಮರಿಸಿ, ಮುಖ್ಯತಾತ್ವಿಕರ ವಿಭೂತಿ ಅವತಾರಗಳನ್ನು ಚಿಂತಿಸಿ, ಈಎಲ್ಲಾ ಸಕಲದೇವತೆಗಳ ಸೇವೆಯನ್ನು ಕೈಗೊಳ್ಳುವ ಬಿಂಬ ಮೂರ್ತಿ ವಿಮಾನವನ್ನು, ಸೂರ್ಯಾದಿ ನವಗ್ರಹ ಮಂಡಲಗಳನ್ನು ದಾಟಿ ಉಪಾಸನ ಮಾಡಿ ಕೊಂತ ಹೋಗಬೇಕು. ಸೂರ್ಯಮಂಡಲ ಒಂದುಲಕ್ಷಗಾವುದ. ನಾರಾಯಣ ಚಂದ್ರಮಂಡಲ ಒಂದುಲಕ್ಷ ಗಾವುದ. ಪ್ರದ್ಯುಮ್ನ ನಕ್ಷತ್ರಮಂಡಲ ಒಂದುಲಕ್ಷಗಾವುದ. 28 ಭಗವದ್ರೂಪಗಳು. ಶುಕ್ರಮಂಡಲ 2ಲಕ್ಷಗಾವುದ. ಗುರುಮಂಡಲ 2ಲಕ್ಷಗಾವುದ. ಶನಿ 2ಲಕ್ಷಗಾವುದ. ಸಪ್ತಋಷಿ ಮಂಡಲ 11ಲಕ್ಷಗಾವುದ. ಧೃವಮಂಡಲ 13ಲಕ್ಷಗಾವುದ. ಇವು ಎಲ್ಲಾ ವಿರಾಡ್ರೂಪಿ ಚಿಂತನದಲ್ಲಿರಬೇಕು. ಶಿಂಶುಮಾರಮೂರ್ತಿ ಪೂಜೆಯಲ್ಲಿ ಈ ಮಂಡಲಗಳು ತೋರಿಸಿ ಇವೆ. ಅಲ್ಲಿನೋಡಿಕೋ ಬೇಕು. ಇಲ್ಲಿಂದ ಸ್ವರ್ಗಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ, ವೈಕುಂಠಲೋಕ. ಇಷ್ಟನ್ನು ಅಳಿತೆಗಳಸಹಿತವಾಗಿ ವಿರಾಡ್ರೂಪಿ ಚಿಂತನದಲ್ಲಿ ಹೇಳಿದೆ. ವೈಕುಂಠ ದಿಂದ ಭೂಲೋಕದವರೆಗು 8ಕೋಟಿ 75ಲಕ್ಷಗಾವುದವಿದೆ. ಭೂಕಂದ ಅಂದರೆ ಭೂಮಿಯದಪ್ಪ. ಅಂತರಿಕ್ಷದಿಂದ ಸ್ವರ್ಗಲೋಕಕ್ಕೆ ಲಕ್ಷಗಾವುದ. ಸ್ವರ್ಗದಿಂದ ಮಹರ್ಲೋಕಕ್ಕೆ 50ಸಾವಿರ, ಮಹರ್ಲೋಕದಿಂದ ಜನೋಲೋಕ 1ಕೋಟಿ 80ಲಕ್ಷಗಾವುದ. ತಪೋಲೋಕದಿಂದ ಸತ್ಯಲೋಕ ವಂದುವರೆಕೋಟಿ. ಸತ್ಯಲೋಕದಿಂದ ವೈಕುಂಠ ವಂದುವರೆಕೋಟಿಯೋಜನಾ. ಈ ವೈಕುಂಠದಿಂದ ಖರ್ಪರದವರೆಗೂ 2ಕೋಟಿ 98ವರೆಸಾವಿರಗಾವುದ. ಅಂತು 8ಕೋಟಿ 75ಲಕ್ಷಗಾವುದ ಭೂಕಂದ ಇಂಥಾ ವೈಕುಂಠ ಉಪಾಸನೆ ಮಾಡಿಕೊಂಡು ಪೃಥ್ವೀತತ್ವ ದಾಟಬೇಕು. ಇದು ಮೂರುಅಗಲ ಭಂಗಾರದ ಅಖಂಡ ಕೋಟಿಗೋಡೆ. ಈ ಪೃಥ್ವೀತತ್ವದ ಮ್ಯಾಲೆ 3ಕೋಟಿ ಗಾವುದದವಾಯುಪಾಶದಿಂದ ಪರಮಾತ್ಮ ಗೋಲಕ ಹಿಡಿದುಹಾನೆ. ಈಗೋಲಕದಲ್ಲಿ ರಾಧಾಕೃಷ್ಣರೂ ಯಾವಗಲೂ ವಿಹಾರಮಾಡುತ್ತಿರುತ್ತಾರೆ. ಇಲ್ಲಿ ಬ್ರಹ್ಮಾದಿಗಳಿಗೆ ವೈಕುಂಠಪತಿಯಾದ

ಪರಮಾತ್ಮನ ಆಜ್ಞ ಆದರೆ ಪ್ರವೇಶ. ಇಲ್ಲದಿದ್ದರೆಇಲ್ಲ. **ಈವಿಚಾರ ಬ್ರಹ್ಮವೈವರ್ತ ಪುರಾಣ ಶ್ರೀಕೃಷ್ಣಜನ್ಮಖಂಡದಲ್ಲಿ ಹೇಳಿದೆ(ನೋಡಬೇಕು).** ಇದುದಾಟಿ ಅಬಾವರಣವಿದೆ. ಇದು ಒಂದು ಅರ್ಬುದವಿದೆ. ಸುತ್ತಲು ಇಲ್ಲಿ ವಾಯುದೇವರು ಮೂರುಕೋಟಿ ರೂಪದಿಂದ ಕುಳಿತು ಭಂಗಾರ ಕಾಸಿ ಮೂಸಿವಳಗೆ ಹಾಕಿಕೊಂಡು, ಯಾವಾಗಾದರೂ ಬ್ರಹ್ಮಾಂಡದವಳಗೆ ಕೋಟಿಗೋಡಿ ಇದರಿಂದ ಪೃಥ್ವೀತತ್ವ ತೂತುಬಿದ್ದರೆ ಬ್ರಹ್ಮಾಂಡದವಳಗೆ ನೀರುಬಂದು ಪ್ರಳಯ ಆಗದಹಾಗೆ ತತ್ಕ್ಷಣ ತೂತಿಗೆ ಬಂಗಾರಹಾಕಿ ಗಚ್ಚುಹಾಕಿ ರಿಪೇರಿಮಾಡಲು. ಈಎರಡು ಸಾಧನೆಗಾಗಿ ವಾಯುದೇವರು ಇಲ್ಲಿ ಇದ್ದಾರೆ. ಇಂಥಾ ಮೂರುಕೋಟಿ ವಾಯುದೇವರ ರೂಪಗಳು ಸ್ಮರಿಸಿ ಮುಂದೆ ತೇಜೋ ಆವರಣಕ್ಕೆ ಹೋಗಬೇಕು. ಇದು ನಿರ್ಬುದ ವಿಸ್ತೀರ್ಣ. ತರುವಾಯ ವಾಯುಆವರಣ. ಇದು ಖರ್ವ ವಿಸ್ತೀರ್ಣ. ತರುವಾಯ ಅಹಂಕಾರತತ್ವ. ಇದು ಪದ್ಮ ವಿಸ್ತೀರ್ಣ. ತರುವಾಯ ಮಹತತ್ವವಿದೆ. ಇದು ಮಹಾಪದ್ಮ ವಿಸ್ತೀರ್ಣ. ತರುವಾಯ ಅವ್ಯಕ್ತತ್ವವಿದೆ. ಅದು ತಮೋಭಾಗ, ರಜೋಭಾಗ, ಸತ್ವಭಾಗ, ಅಂತಿದೆ. **ತಮೋಭಾಗ ಕ್ಷೋಣಿ ವಿಸ್ತೀರ್ಣ. ರಜೋಭಾಗ ಮಹಾಕ್ಷೋಣಿ ವಿಸ್ತೀರ್ಣ, ಸತ್ವಭಾಗ ಶಂಖ ವಿಸ್ತೀರ್ಣ.** ನಮಗೆ ಶಂಖದಮೇಲೆ ಬರತಕ್ಕಸಂಖ್ಯಾ ಎಲ್ಲಿದೆ. ಅವ್ಯಾಕೃತಾಕಾಶ ಎಂತ ಹೆಸರು. ಅವ್ಯಾಕೃತಾಕಶಕ್ಕೆ ಅಭಿಮಾನಿ ಲಕ್ಷ್ಮೀದೇವಿಯರು. **ಅವ್ಯಾಕೃತ ಎಂದರೆ ಮನಸ್ಸಿಗೆ ಗೋಚರವಿಲ್ಲದ್ದು. ಆದಕಾರಣ ಇದರವ್ಯಾಲೆ** ಇರತಕ್ಕಂಥಾ ಪ್ರದೇಶದಲ್ಲಿ ಅವ್ಯಾಕೃತಾಕಾಶ ಎಂತ ಹೆಸರು. ಈಅವ್ಯಾಕೃತಾಕಾಶದಲ್ಲಿ ಅಸ್ಪೃಜ್ಯರು ಮುಂದೆ ಬರುವಂತಹ ಜೀವರುಗಳು ಇರುತ್ತಾರೆ. ಇದರಲ್ಲಿ **1.ಅನಿರುದ್ಧಾವರಣ, 2.ಪ್ರದ್ಯುಮ್ನಾವರಣ, 3.ಸಂಕರ್ಷಣಾವರಣ, 4.ವಾಸುದೇವಾವರಣ; 5.ನಾರಾಯಣಾವರಣ,** ಈ ನಾರಾಯಣಾವರಣವೇ ಮಹಾದ್ರೂಪ. ಇದರಕ್ಕಿಂತಲೂ ದೊಡ್ಡ ರೂಪವಿಲ್ಲ. ಈವಂದು ಪ್ರದೇಶದಲ್ಲಿ ರಮಾದೇವಿಗೆ ಮಾತ್ರ ಪ್ರವೇಶ ಉಂಟು. ಇಂಥಹ ಮಹದ್ರೂಪನಲ್ಲಿ ನಮ್ಮಬಿಂಬನ ಕಂಡು ಪೂಜಿಸಿ, ಪ್ರಾರ್ಥಿಸಿ ಗುಣೋಪಾಸನಮಾಡಿ ಉಪಸಂಹರಿಸಿಕೊಂಡು ವಿಮಾನವನ್ನು ತೆಗೆದುಕೊಂಡು ಮತ್ತು ಹ್ಯಾಗೆ ಬಂದಿದ್ದೀವೋ ಹಾಗೇ ತಿರುಗಿ ಬರುತ್ತಾ ಬರುತ್ತಾ ಮೇರುಪರ್ವತದಮೇಲೆ ಶತಕೋಟಿ ಬ್ರಹ್ಮನಸಭಾಕ್ಕೆ ಬಂದು, ಅಲ್ಲಿ ಯಾವತ್ತು ದೇವತಿಗಳ ಸಹಿತ ಪರಮೋತ್ಸಾಹದಿಂದ ಭದ್ರಾಶ್ವ ಖಂಡಕ್ಕೆ ಬಂದು, ಅಲ್ಲಿಂದ ಹರಿವರ್ಷ, ಕಿಂಪುರುಷ,ಭರತಖಂಡಕ್ಕೆ ಬಂದು ಸ್ಥೂಲಶರೀರಕ್ಕೆ ಬಂದು ಹೃದಯಮಂದಿರ ಅಷ್ಟದಳ ಪದ್ಮದಸಿಂಹಾಸನದಲ್ಲಿರುವ ಪ್ರಾಜ್ಞನಲ್ಲಿ ಐಕ್ಯಚಿಂತಿಸಬೇಕು. ತರುವಾಯ ಶಿರಸ್ಸಿನಲ್ಲಿದ್ದಂತ ತುರ್ಯನಾಮಕ ವಾಸುದೇವ

ರೂಪವನ್ನುಕಂಡು ವಂದು ಅಂಶದಿಂದ ತೆಗೆದು ಕಂಠದೇಶದ ತೈಜಸನಲ್ಲಿ, ಇನ್ನೊಂದು ಅಂಶದಿಂದ ಪ್ರಾಜ್ಞನಲ್ಲಿ ಐಕ್ಯಚಿಂತನೆ ಮಾಡಬೇಕು. ಯಾಕೆಂದರೆ **ತೈಜಸ ಸ್ವಪ್ನಾವಸ್ಥ ಪ್ರೇರಕ, ಪ್ರಾಜ್ಞ ಗಢನಿದ್ರಾವಸ್ಥ ಪ್ರೇರಕ, ಆಹೊತ್ತಿನಲ್ಲಿ ಸ್ವಪ್ನ ನಿದ್ರೆ ಬಾರದಹಾಂಗೆ ಈ ಅವಕಾಶ ಪ್ರದನಾದ ತುರ್ಯನಾಮಕ ವಾಸುದೇವನ್ನು ಚಿಂತಿಸಬೇಕು.** ತರುವಾಯ ನಮ್ಮ ಪ್ರಾಜ್ಞನನ್ನ ಸ್ವಗುರು ಪರಮಗುರು ಮೂಲಗುರವಾದಾತ ವಾಯುದೇವರಲ್ಲಿ, ಅಂದರೆ ಶ್ರೀಮದಾಚಾರ್ಯರಲ್ಲಿ ಐಕ್ಯಚಿಂತಿಸಿ ಇವರಂತರ್ಗತ ಶ್ವೇತದ್ವೀಪ ವಾಸುದೇವನನ್ನು ಚಿಂತಿಸಿ, ಸತ್ಯಲೋಕಕ್ಕೆ ತಂದು ಅಲ್ಲಿಂದ ಅಗ್ನಿಲೋಕದಲ್ಲಿ ಅಗ್ನಿಅಂತರ್ಗತ ಪರಮಾತ್ಮನನ್ನ ವಂದು ಅಂಶ ದಿಂದ ತಂದು ಸೂರ್ಯಮಂಡಲದಲ್ಲಿ ಐಕ್ಯಚಿಂತನೆಮಾಡಿ ಪೂಜಿಸಿ ಪ್ರಾಜ್ಞನನ್ನು ವಂದು ಅಂಶದಿಂದ ತಂದು ಈಮಧ್ವಾಚಾರ್ಯರಲ್ಲಿ ಐಕ್ಯಚಿಂತನೆ ಮಾಡಬೇಕು. ಇದು ಗೃಹಸ್ತಾಶ್ರಮಿಗಳಿಗೆ ನೇಮ. ಪ್ರತಿಮಾಪೂಜದಲ್ಲಿ ಸಹ ತರುವಾಯ ಭಗವತ್‌ಸೃಷ್ಠಿಕಾಲಕ್ಕೆ . ಈಶ ಸೃಷ್ಠಿವಳಗೆ ಇದ್ದಂಥ ಸೃಷ್ಠರಾದ ಪರಮಾತ್ಮನ ಸಕಲ ಭಗವದ್ರೂಪಗಳು, ಈಮಧ್ವಾಚಾರ್ಯರಲ್ಲಿ ಚಿಂತಿಸಿ, ಪ್ರಾರ್ಥಿಸಿ ಮತ್ತು ವಂದಂಶದಿಂದ ನಮ್ಮಬಿಂಬನ್ನ ಕರಕೊಂಡು ಪರಮಗುರ, ಸ್ವಗುರ ಈಪ್ರಕಾರತಂದು ನಮ್ಮ ಪರಮೂರ್ತಿಯಲ್ಲಿ ಚಿಂತನಮಾಡಿ ತರುವಾಯ ಎಲ್ಲವನ್ನು ತಂದು ನಮ್ಮ ಸ್ಥೂಲಹೃದಯ ಕರ್ಣಿಕದಮ್ಯಾಲೆ ಇದ್ದ ಪ್ರಾಜ್ಞನಲ್ಲಿ ಐಕ್ಯಚಿಂತಿಸಿ, ಈಪದ್ಮದಲ್ಲಿದ್ದ ಮೂಲೇಶ, ಪ್ರಾದೇಶ, ಅಗ್ರೇಶನಲ್ಲಿ ಚಿಂತಿಸಿ, ಏಕೀಕಾರಮಾಡಿಕೊಂಡು ಇಡ-ರಜೋಗುಣ, ಸುಷುಮ್ನ-ಸತ್ವ ಬ್ರಹ್ಮ ರಾಜ ತೈಜಸನನ್ನ ಸುಷುಮ್ನಾವಸ್ಥಿತ ವಿಶ್ವನಲ್ಲಿ ಕೂಡಿಸಿ ಮತ್ತು ನಮ್ಮ ಸ್ಥೂಲದೇಹದಲ್ಲಿದ್ದ72000 ನಾಡಿಯಲ್ಲಿದ್ದ 34560000 ವಾಸುದೇವರೂಪಗಳನ್ನು 36000ದಾಂಪತ್ಯರೂಪಗಳಿಗೆ ಐಕ್ಯಚಿಂತಿಸಿ (ಪ್ರಾಜ್ಞನಲ್ಲಿ ಮತ್ತು 9ಕೋಟಿ ರೋಮಗಳಲ್ಲಿ ) ಹೀಂಕಾರನಾಮಕ ಪ್ರದ್ಯುಮ್ನ ರೂಪಗಳನ್ನು ಚಿಂತಿಸಿ ಮೂರುವರೆಕೋಟಿ ರೋಮಗಳಲ್ಲಿದ್ದ ತೀರ್ಥಾಭಿಮಾನಿರೂಪಗಳನ್ನು ಚಿಂತಿಸಿ, ಸಪ್ತಧಾತುಗಳಲ್ಲಿದ್ದ ಭಗವದ್ರೂಪಗಳು. ಇದರಲ್ಲಿದ್ದ 49 ಮಂದಿಮರುತ್ತರು, ಇವರ ಹೆಂಡರಲ್ಲಿದ್ದ 98 ರೂಪಗಳನ್ನು ಚಿಂತಿಸಿ, ಸಪ್ತಧಾತುಗಳವಳಗಿದ್ದ ಪಂಚಕೋಶಗಳಲ್ಲಿದ್ದ ಖಂಡರೂಪಗಳಲ್ಲಿದ್ದ 5854400 ಸಂಪುಟಾಕಾರ ಅಖಂಡ ರೂಪಗಳು 4305, ರೂಪಗಳ್ಮಚಿಂತಿಸಿ. 24 ತತ್ವಗಳು, ಜೀವನಲ್ಲಿ 14400ಭಗವದ್ರೂಪಗಳು ಚಿಂತಿಸಿ, ಈ ದೇಹ ಹೊತ್ತ ಆಧಾರ ಅಧೇಯ ರೂಪಗಳನ್ನು 2008 ರೂಪಗಳನ್ನು ಚಿಂತಿಸಿ ಮತ್ತು ಅಧಿದೈವ-ಅಧಿಭೂತ, 6000 ರೂಪಗಳು ಚಿಂತಿಸಿ, ಮತ್ತು ನಾಗಾದಿರೂಪಗಳು 16416 ಕೃದ್ಧೋಲ್ಕಾದಿರೂಪಗಳು ಚಿಂತಿಸಿದರೆ, ತರ್ಕಮೀಮಾಂಶ, ಛಂದಸ್ಸು, ಅಲಂಕಾರ, ಮತ್ತು ಆತ್ಮಾದಿ

ಪ್ರಾಣರೂಪಗಳು 22453 ರೂಪಗಳು ಚಿಂತಿಸಿ ಸರ್ವವೂ ಏಕೀಕಾರ ಮಾಡಿ ಇಂಥಾ ಪ್ರಾಜ್ಞನನ್ನು ಶ್ರೀನಿವಾಸಮೂರ್ತಿಯಲ್ಲಿ ಚಿಂತನಮಾಡಬೇಕು. ಯಾಕೆಂದರೆ ತದಾವೆಂಕಟನಾಯಕ ಎಂತ ಪ್ರಮಾಣ ವಿದೋರದಿಂದ, ಈಕಲಿಯುಗದಲ್ಲಿ ವೆಂಕಟೇಶನ ಪೂಜಾದಿಂದಲ್ಲೇ ಅಪರೋಕ್ಷಿತನಾಗಬೇಕು. ಆದರೆ ನಮ್ಮ ದೇಹದ ಹೊರಗೆ ಇರುವ ಈರೂಪಗಳೆಲ್ಲಾಕಾಲ್ಯಉಪಗಳು. ನಮ್ಮ ದೇಹದಲ್ಲಿರತಕ್ಕದ್ದು ಪುರುಷರೂಪ ನಮ್ಮಗೆ ಕಾಲಗೆ ಸಂಬಂಧವಿಲ್ಲ. ನಮಗೆ ಪುರುಷಗೆ ಯಾವಾಗೂ ಬಿಟ್ಟು ಬಿಟ್ಟು ಅಗಳೋಣವಿಲ್ಲ. ಆದಕಾರಣ ನಮ್ಮಬಿಂಬನ್ನ ಕಾಲರೂಪಿಯಾಥಂಥ ಶ್ರೀನಿವಾಸಮೂರ್ತಿಯಲ್ಲಿ ಐಕ್ಯಚಿಂತಿಸಿ ತರುವಾಯ ಪ್ರತಿಮಾಪೂಜೆಯನ್ನು ನೆಟ್ಟಗೆ ತಿಳಿದು ತಂತ್ರಸಾರೋಕ್ತವಾಗಿ ಪ್ರತಿಮಾ ಪೂಜೆಮಾಡಬೇಕು. ಹ್ಯಾಗೆಂದರೆ ನಾವು ಮಾತೃಕಾನ್ಯಾಸರೀತ್ಯಾ ತತ್ವಾನ್ಯಾಸಮಾಡಿಕೊಂಡು ತರುವಾಯ ಮನೋಮಯ, ತೇಜೋಮಯಮೂರ್ತಿ ಶ್ರೀನಿವಾಸಮೂರ್ತಿ ಅಂತರ್ಗತ ಪರಮಾತ್ಮನನ್ನು ಪೂಜಿಸಬೇಕು. ಯಾಕೆಂದರೆ ಈ ಮಾನಸಿಕ ತೇಜೋಮೂರ್ತಿಯೇ ಪರಮಾತ್ಮನಲ್ಲಿ, ಆದರೆ ಇದು ವಂದು ಲೋಹದಂತೆ ತೇಜೋಮಯಮೂರ್ತಿ. ಈ ಅಂತರ್ಗತನಾಗಿ ಶ್ರೀನಿವಾಸಮೂರ್ತಿ ತದಾಕಾರನಾಗಿರುತ್ತಾನೆ. ಈ ತೇಜೋಭಾಗ ಹೋಗಿ ವಳಗಿದ್ದ ಮೂರ್ತಿ ನಿಜವಾದ ಜ್ಞಾನಾನಂದಾತ್ಮಕ ಶರೀರುಳ್ಳಂಥ ಪರಮಾತ್ಮನ ದರಶನವೇ ಅಪರೋಕ್ಷವೆನಿಸುತ್ತದೆ. ಇಂಥಾ ಮಾನಸಿಕ ಮೂರ್ತಿಗೆ ತತ್ವಾನ್ಯಾಸ, ಮಾತೃಕಾನ್ಯಾಸ ಕಲಶವನ್ನುಮಾಡಿ ಮಾತೃಕ=51, ಮತ್ಸ್ಯಾದಿ=10, ಅನಿರುದ್ಧಾದಿ=5, ಶಿಂಶುಮಾರ=1, ಕೇಶವಾದಿ=24, ವಿಶ್ವಾದಿ=8, ವೇದವ್ಯಾಸ=1, ಅಂತು 101. ಮೂರತಿಮಾಡಿ ನಾರಾಯಣಾದಿ ಶತರೂಪಗಳನ್ನು ಆಹ್ವಾನಮಾಡಿ, ಕಲಶಪೂಜಮಾಡಿ, ಪಂಚಾಮೃತಾಭಿಷೇಕಮಾಡಿ, ಶುಶ್ರೈಸಾಮ ಶ್ರೀಹರೇ ಲಕ್ಷ್ಮೀಸ್ನಾನಂಕಾರಯತಿ ಪ್ರಭೋ ಯಂತೆ ಪೀತಾಂಬರಾದಿ ಆಭರಣಗಳು, ಆಯುಧಗಳಿಂದ ಗಂಧಪುಷ್ಪಗಳಿಂದ ಪೂಜಿಸಿ , ಆವರಣಪೂಜಾಮಾಡಿ ಧೂಪಾರ್ತಿ , ಏಕಾರ್ತಿ, ಮಂಗಳಾರ್ತಿ ಮಾಡಿ ಮಂತ್ರಪುಷ್ಪ ಹೇಳೀ, ಪ್ರಾರ್ಥಿಸಿ ನಮಸ್ಕರಿಸಿ , ಸ್ತೋತ್ರ ಮಾಡಿ ಚತುರ್ಗುಣೋಪಾಸನೆ ಮಾಡಿ "ಸ್ವಾಮಿ, ನಾನು ಅಜ್ಞಾನಿ, ಪಾಪಿ, ಅಪರಾಧಿ, ತಪ್ಪು ಗಳನ್ನು ಕ್ಷಮಾ ಮಾಡೆಂದು, ಉದ್ಧಾರ ಮಾಡೆಂದು ಪ್ರಾರ್ಥಿಸಿ ಚಿಂತಿಸಿ ಸರ್ವ ಸಮರ್ಪಣೆಯನ್ನು ಮಾಡಿ ಪುನಃ ವಿಪರೀತ ತತ್ವನ್ಯಾಸ ಮುಗಿಸಿಕೊಂಡು, ಪುನಃ ಈ ಸ್ವಾಮಿಯನ್ನು ಸ್ವರೂಪಾಂತರ್ಗತ ರೂಪಾಭಿನ್ನ ಅಭಿನ್ನ ಎಂತ ತಿಳಿದು ನಮ್ಮ ಸ್ವಾಮಿ ಯನ್ನು ಮತ್ತು ಅಂಶಗಳಿಂದ ತೆಗೆದು , ಯಾಕೆಂದರೆ ಈ ಸ್ಥೂಲದೇಹದಲ್ಲಿ ಕಾರ್ಯ ನಡೆಯುವದಕ್ಕೆ ಎಷ್ಟೊಂದು ಶಕ್ತಿ ಇರಬೇಕೋ, ಅಷ್ಟು ಅಂಶಗಳನ್ನು ಇಟ್ಟು ಹೆಚ್ಚಾದ

ಅಂಶವನ್ನು ಪ್ರಾಕೃತ ಅನಿರುದ್ಧ ಲಿಂಗ ಸ್ವರೂಪ ದೇಹಗಳಲ್ಲಿ ಅಲ್ಲಲ್ಲಿದ್ದ ರೂಪಗಳ ಐಕ್ಯ ಚಿಂತಿಸಿ ಸ್ವರೂಪ ದೇಹದಲ್ಲಿಟ್ಟು ಸ್ಥೂಲ ಶರೀರ ಯಾವದವಯವ ತತ್ವ, ನಾಡಿ, ಕೋಶ, ಧಾತುಗಳಲ್ಲಿರತಕ್ಕ ರೂಪಗಳನ್ನು ಉಪಸಂಹಾರ ಮಾಡಿ ಅಲ್ಲಲ್ಲಿ ಚಿಂತಿಸಿ ಪ್ರಾಜ್ಞನಲ್ಲಿದ್ದ ತೈಜಸನನ್ನು, ಕಂಠದಲ್ಲಿದ್ದ ವಿಶ್ವನಲ್ಲಿ ಅವನನ್ನಾ ಉಪಸಂಹರಿಸಿ ಚಿಂತಿಸಿ ರೂಪಭಿನ್ನತ್ವೇನ ತಿಳಿದು, ಶರೀರಾಂತರ್ಗತ ವಿರಾಡ್ರೂಪಾಭಿನ್ನ ಮಹತ್ತತ್ವಾಂತರ್ಗತ ರೂಪಾಭಿನ್ನ ನವಾವರಣ ಬ್ರಹ್ಮಾಂಡಾನಂತಾ ಧಾರಾರೋಮ ರೂಪಾದ್ಯಾನಂತ ಅವಯವ ಅತಿಮಹಾದ್ರೂಪ ತತ್ಕಾಲದಲ್ಲಿ ಅಸ್ಮತ್ ಜೀವ ಸ್ವರೂಪಾನಂತರ್ಗತ ಸ್ವರೂಪಶ್ವಾಸ ನಿಯಾಮಕ ಶ್ರೀಮುಖ್ಯ ಪ್ರಾಣಾಂತರ್ಗತ ಅಣೋರಣೀಯಾನ್ ಮಹತೋ ಮಹೀಯಾನ್ ಎಂಬೋ ಶೃತಿ ಪ್ರತಿಪಾದ್ಯ ಸಚ್ಚಿದಾನಂದಾತ್ಮಕ ಬಿಂಬರೂಪಿ ನೀನು, ಸರ್ವಜ್ಞ ನಿನ್ನ ಪ್ರತಿಬಿಂಬ ನಾನು, ನಿನ್ನ ದಾಸನು ನಾನು ಅಂತ ಹೇಳಿ "ಯಸ್ಯಸ್ಮೃತ್ಯಾಜ್" ಹೇಳಿ ಮುಗಿಸಬೇಕು. "ಅಕ್ಷಯಂ ಕರ್ಮ ಯಾಸ್ಮಿನ್" ಅಂತ ಹೇಳಿ ಮುಗಿಸಬೇಕು.

**ಇತಿ ಮಂಗಳಂ ಶ್ರೀ ಮಧ್ವೇಶಾರ್ಪಣಮಸ್ತು**

ಬ್ರಹ್ಮಾಂಡತರ್ಗತ ವಿರಾಡ್ರೂಪವನ್ನು ನಮ್ಮ ದೇಹದಲ್ಲಿದ್ದ ಅಷ್ಟದಳ ಪ್ರಾಜ್ಞನಲ್ಲಿ ಹೇಗೆ ಚಿಂತನ ಮಾಡಬೇಕೆಂದರೆ ಶ್ರೀ ಅಭಿನವ ಜನಾರ್ದನ ವಿಠ್ಠಲ ದಾಸರ ಸುಳಾದಿ ಪ್ರಕಾರ

1. ಹರಣವೇ (ದೇಹವೇ) ಬ್ರಹ್ಮಾಂಡ . ಇದರ ಹೊರಗೆ ಇರುವದೆಲ್ಲ ಆಕಾಶ
2. ಪಂಚಕೋಶಗಳ ನಾಲ್ಕು ಆವರಣ (ಅನ್ನಮಯಕೋಶ ಇತ್ಯಾದಿ)
3. ಕೋಶಾಭಿಮಾನಿಗಳು 24 ತತ್ವಗಳು. ಈ ತತ್ವೇಶರು ಈ ಇಂದ್ರಿಯಗಳೇ ಸಪ್ತಾವರಣ.
4. ಹೃದಯದಲ್ಲಿದ್ದ 12 ದಳಪದ್ಮ , ಅಷ್ಟದಳ ಪದ್ಮಿದರಕೆಳಗೆ ಆರು ದಳ ಪದ್ಮ, 14 ಲೋಕಗಳು.
5. ಇದರೊಳಗಿನ ಪ್ರಾಜ್ಞನೇ ವಿರಾಡ್ರೂಪಿ
6. ಈ ಅಷ್ಟದಳ ಪದ್ಮದಲ್ಲಿದ್ದ ಕರ್ಣಿಕೆಯೇ ಮೇರು ಪರ್ವತ
7. ಈ ಕಮಲದ 32 ಕೇಸರಗಳು ಉಪಪರ್ವತಗಳು
8. ಇಲ್ಲಿ ದೇವ, ದೈತ್ಯರಿದ್ದಾರೆ, ಈ ಪ್ರಕಾರ ವಿಶ್ವ, ತೈಜಸ , ಪ್ರಾಜ್ಞರನ್ನು ಉಪಾಸನಾ ಮಾಡಬೇಕು.

9. ನವವಿಧ ಭಕುತಿಯೇ ಜಂಬುದ್ವೀಪಾದಿ ನವಖಂಡಗಳು.

10. ಸಪ್ತಧಾತುಗಳು ಸಪ್ತ ಸಮುದ್ರಗಳು.

11. ನಾಡಿಗಳೇ ನದಿಗಳು.

12. ಲೋಕಾಲೋಕ ಪರ್ವತ ಜೀವಾಚ್ಛಾದಿಕ , ಪರಮಾಚ್ಛಾದಿಕ

13. ತಮಸ್ಸು , ತಮೋಗುಣ , ಸ್ವರ್ಣಭೂಮಿ. ರಜೋಗುಣ ಸತ್ವಗುಣ , ಶುದ್ಧೋದಕ ಸಮುದ್ರ ಸಪ್ತಧಾತುಗಳ ಒಳಗಿರುವ ಕಮಲಗಳೇ ಶ್ವೇತದ್ವೀಪ, ಅನಂತಾಸನ, ವೈಕುಂಠ.. ಅಷ್ಟಮದಗಳು ಅಷ್ಟದಿಕ್ಕುಗಳ ಗಜಗಳು. ಸ್ಥೂಲ ಅನಿರುದ್ಧದೇಹ ಗುಣದಿಂದ ವಾಲಗವಾಡುವ ಸುರರೇ ಜೀವಿಗಳು, ಪ್ರಾಣದೇವರೇ ಮಂತ್ರಿಗಳು, ರಮಾ ಶ್ರೀ ಭೂ ದುರ್ಗಾ. ಲಿಂಗದೇಹದಲ್ಲಿ ವಿಷ್ಣು ಬ್ರಹ್ಮ ರುದ್ರ ಶ್ರೀಪತಿ ಇದ್ದಲ್ಲಿ ಸಕಲಕ್ಕೂ ಮಂಗಳ.

ಶ್ರೀ ಗುರುಗೋಪಾಲದಾಸರಾಯರಿಂದ ರಚಿತವಾದ "ಶ್ರೀ ಹರಿ ಉಪಾಸನಾ ಕ್ರಮ" ಎಂಬ ಗ್ರಂಥವನ್ನು ಶ್ರೀ ವಿಜಯದಾಸಾರ್ಯಾಂತರ್ಗತ , ಶ್ರೀ ಗುರುರಾಘವೇಂದ್ರಾಂತರ್ಗತ ಶ್ರೀ ಭಾರತಿ ರಮಣ ಮುಖ್ಯಪ್ರಾಣಾಂತರ್ಗತ , ಶ್ರೀ ರಾಮಚಂದ್ರ ದೇವರ ಚರಣಗಳಿಗೆ ಅರ್ಪಿತವಾಗಿದೆ.

**ಶ್ರೀ ಮಧ್ವೇಶಾರ್ಪಣಮಸ್ತು**

